

ಶಿವಶರಣ

# ವೀರೇಶ್ವರ ಪುರಾಣ.

ಚನ್ನಕವಿಕೃತ.




ಶಿವಶರಣ ವೀರೇಶ್ವರನು.

ಅವತಾರ:
ಶಾ. ಶ. ೧೭೭೦ ಕೀಲಕ ಸಂ||.

ಲಿಂಗೈಕ್ಯ:
ಶಾ ಶ. ೧೮೪೧ ಸಿದ್ಧಾರ್ಥಿ ಸಂ। ಮಾಘ ಕೃ. ೧.

यदा सर्वे प्रमुच्यन्ते कामा येऽस्य हृदि स्थिताः ।
अथ मर्त्योऽमृतो भवत्यंत्र ब्रह्म समश्नुते ॥ कठोपनिषत् ६.१४.

ಶ್ರೀ

ಶಿವಶರಣ

# ವೀರೇಶ್ವರ ಪುರಾಣ.

ದ್ಯಾಂಪುರ

ಚನ್ನ ಕವಿ ಕೃತ.

---

ಪ್ರಥಮಾವೃತ್ತಿ ೧೦೦೦ ಪ್ರತಿಗಳು.

---



೧೯೩೩

ಬೆಲೆ: ೪ ರೂಪಾಯಿ.

# ವಿಷಯಾನುಕ್ರಮಣಿಕೆ.

## ಪ್ರಥಮ ಕಾಂಡ.



## ದ್ವಿತೀಯ ಕಾಂಡ.

# ತೃತೀಯ ಕಾಂಡ.




ಜನ್ಮ:

ಶಾ. ಶ. ೧೭೮೮ ಪ್ರಭವಸ.

ಲಿಂಗೈಕ್ಯ:

ಶಾ. ಶ ೧೮೫೧ ಶುಕ್ಲ ಸಂ। ಮಾಘ ಕೃ. ೭ ಬುಧವಾರ.





# ಅರ್ಪಣ ಪತ್ರಿಕೆ.

## ಉತ್ಪಲ ಮಾಲಾವೃತ್ತ.

ಆವ ವಿಭೂತಿಯಿಂ ನಿಜಸಮಾಜದ ಗೌರವವೇಳ್ದು ಕಾಣ್ಬುದೋ ।
ಆವನ ಕಾರ್ಯಬೋಧಗಳಿನಾದುದೊ ಶಾಂಭವಧರ್ಮದೇಳ್ಗೆಯು ॥
ಆವನ ಯತ್ನದಿಂ ಮತಕೆ ಬಂದುದೊ ಚಿದ್ಬಲವಾ ಕುಮಾರನಾ ।
ಪಾವನಪಾದಕರ್ಪಿಸುವೆನೀ ವರವೀರಪುರಾಣ ಪುಷ್ಪಮಂ ॥

ಎನ್ನೀ ವೀರಶೈವಸಮಾಜಕುಟುಂಬಿಯೂ ಪರಮಪೂಜ್ಯಪಾದನೂ ಆದ
**ಶ್ರೀ ಹಾನಗಲ್ಲ ಕುಮಾರ ಶಿವಯೋಗೀಶ್ವರನ**
ಚರಣಗಳಿಗೆ ಸಮರ್ಪಿಸುವ
ಈ ಗ್ರಂಥಪುಷ್ಪವು
ಸಮಾಜಕ್ಕೆಲ್ಲ ಸುಗಂಧವನ್ನು ನೀಡಿ ನೆರೆಹೊರೆಯಲ್ಲಿಯೂ
ಪರಿಮಳಿಸದಿರಲಾರದೆಂದು ನಂಬಿರುವೆನು.

ಗ್ರಂಥಕರ್ತ.



# ಪ್ರಸ್ತಾವನೆ.

ಲೋಕದಲ್ಲಿ ಆತ್ಮವಿಕಾಸಕ್ಕೆ ಸಾಧನಭೂತವಾದ ಜ್ಞಾನಕ್ರಿಯೆಗಳ ನೂರಾರು ಮಾತುಗಳನ್ನು ನಿರ್ವಿವಾದವಾಗಿ ಹೇಳಬಹುದು. ಅವುಗಳಲ್ಲಿ ಒಂದು ಮಾತಿನಂತಾದರೂ ನಡೆದು ಶಿವತ್ವ ಸಾಧನಕ್ಷೇತ್ರದಲ್ಲಿ ಹುರಿಯಾಳೆನಿಸುವದು ಕಠಿಣ. ಬೇಕಾದಂತಹ ಶಾಂತಿದ್ಯೋತಕ ಸಾಧು ವೇಷವನ್ನು ಕಟ್ಟಬಹುದು. ಆ ಸೋಗಿಗೆ ಒಪ್ಪುವಂತೆ ಒಂದು ಇಂದ್ರಿಯಾಂಶವನ್ನಾದರೂ ತಡೆಯುವದು ಕಷ್ಟ. ಬಿಗಿಯುಳ್ಳ ಕೃಪಣರ ಮನವು ಕೂಡಾ ಸಡಿಲುವಷ್ಟು ಪರೋಪಕಾರ ಕಾರ್ಯಾಡಂಬರದಲ್ಲಿ ಮೆರೆದು ಜನರಿಂದ ಧನಧಾನ್ಯಗಳನ್ನು ಶಳೆಯಬಹುದು. ಅದರಲ್ಲಿ ಸ್ವಾರ್ಥವನ್ನು ಬಿಡುವದು ಸುಲಭವಲ್ಲ. ಸಕಲೋಪಚಾರಗಳಿಂದ ಹಗಲಿರುಳು ಲಿಂಗ ಪೂಜೆಯಲ್ಲಿಯೇ ಹೊತ್ತುಗಳೆಯಬಹುದು. ಆ ಲಿಂಗಸ್ವರೂಪವನ್ನು ತಿಳಿಯುವದು ಕಷ್ಟಸಾಧ್ಯವು. ನುಡಿಯಂತೆ ನಡೆಯೂ, ವೇಷದಂತೆ ವೈರಾಗ್ಯವೂ, ಪರಹಿತಕ್ಕೆ ತಕ್ಕ ಸ್ವಾರ್ಥತ್ಯಾಗ ಬುದ್ಧಿಯೂ, ಲಿಂಗಾರ್ಚನೆಗೆ ಸರಿಯಾದ ಶಿವಾನುಭವವೂ ಇಲ್ಲದೆ ಬರೇ ರಂಜನೆಯಿಂದ ಜನರನ್ನು ಮಬ್ಬಿಗೆ ಹಾಕಿ ಹೊಟ್ಟೇ ಹೊರಕೊಳ್ಳುವವನು ಮಹಾತ್ಮನಲ್ಲ. ವೇಸದ ರಕ್ಕಸನು.

"ಜನಮೆಚ್ಚಿ ಶುದ್ಧನಲ್ಲದೆ, ಮನಮೆಚ್ಚಿ ಶುದ್ಧನಲ್ಲವಯ್ಯಾ; ನುಡಿಯಲ್ಲಿ ಜಾಣನಲ್ಲದೆ, ನಡೆಯಲ್ಲಿ ಜಾಣನಲ್ಲವಯ್ಯಾ; ವೇಷದಲ್ಲಿ ಅಧಿಕನಲ್ಲದೆ, ಭಾಷೆಯಲ್ಲಿ ಅಧಿಕನಲ್ಲವಯ್ಯಾ; ಧನ ದೊರಕದೆ ನಿಸ್ಪೃಹನಲ್ಲದೆ, ಧನ ದೊರಕಿ ನಿಸ್ಪೃಹನಲ್ಲವಯ್ಯಾ; ಏಕಾಂತ ದ್ರೋಹಿ, ಗುಪ್ತಪಾತಕಿ, ಯುಕ್ತಿಶೂನ್ಯಂಗೆ ಸಕಳೇಶ್ವರ ದೇವರು, ಒಲಿ ಒಲಿ ಎಂದರೆ ಎಂತೊಲಿವನಯ್ಯಾ."

ಇಂತೆಂಬ ಸಕಳೇಶ್ವರ ದೇವರ ವಚನದಂತೆ ಕಪಟಾಚರಣೆಯಲ್ಲಿ ಪರಿಪಕ್ವಾಂತಃಕರಣದ ಹೊಳಪೂ, ಶಿವಜ್ಞಾನದ ಬೆಳಕೂ ಹುಟ್ಟದಿರುವದರಿಂದ ದಾಂಭಿಕರು ಧರ್ಮಶ್ರದ್ಧೆಯನ್ನು ಕಳೆಗುಂದಿಸಲು ಕಾರಣರೆನಿಸಿ

ದೇವರ ಕೃಪೆಗೆ ಎರವಾಗುವರು. ಇಂತಹ ಮೋಸಗಾರರನ್ನು ಮಹಾತ್ಮರೆಂದು ಭಾವಿಸುವದೇ ಧರ್ಮಾಂಧತೆಯೆಂದು ಸುಜ್ಞರು ಹೇಳುತ್ತಾರೆ.

"ಶಮೆ, ದಮೆ, ವಿವೇಕ, ವೈರಾಗ್ಯ, ಪರಿಪೂರ್ಣ ಭಾವ, ಶಾಂತಿ, ಕಾರುಣ್ಯ, ಶ್ರದ್ಧೆ, ಸತ್ಯ, ಸದ್ಭಕ್ತಿ, ಶಿವಜ್ಞಾನ, ಶಿವಾನಂದ ಉದಯುವಾದ ಮಹಾಭಕ್ತನ ಹೃದಯುದಲ್ಲಿ ಶಿವನಿಪ್ಪ, ಆತನ ದರ್ಶನ, ಸ್ಪರ್ಶನ, ಸಂಭಾಷಣೆಯಿಂದ ಕೇವಲ ಮುಕ್ತಿಯಪ್ಪುದು ತಪ್ಪದಯ್ಯಾ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ."

ಈ ವಚನಕಾರರ ಅಭಿಪ್ರಾಯದಂತೆ, ನೈತಿಕ ಧಾರ್ಮಿಕಾಚಾರ ವಿಚಾರಗಳಲ್ಲಿ ನುರಿತ ಸಿದ್ಧರೇ ಮಹಾತ್ಮರು. ಇವರು ಆಚರಿಸಿದ ಸದಾಚರಣೆಗಳು ಮಾನವ ಕೋಟಿಯು ಪಡೆಯಲಪೇಕ್ಷಿಸುವ ಪರಮಶಾಂತಿಯ ಆದರ್ಶಗಳಾಗಿರುವವು. ಮತ್ತೂ ಮಹಾತ್ಮರ ದರ್ಶನ, ಸ್ಪರ್ಶನ, ಸಂಭಾಷಣಗಳಿಂದ ಜನರ ಅಪಕ್ವ ವಿಚಾರಗಳೆಲ್ಲ ನಷ್ಟವಾಗಿ, ಸಾತ್ವಿಕ ಭಾವನೆಯೂ, ಸಾತ್ವಿಕ ಭಾವನೆಯಿಂದ ಇಂದ್ರಿಯಗಳ ಸೋಲೂ, ಇಂದ್ರಿಯಗಳ ಸೋಲಿನಿಂದ ಶಾಂತಿಯೂ ಪ್ರಾಪ್ತವಾಗುವದುಂಟು. ಇವರ ರೂಪದಲ್ಲಿ ಬ್ರಹ್ಮತೇಜಸ್ಸೂ, ಹಸ್ತದಲ್ಲಿ ಅನುಗ್ರಹಶಕ್ತಿಯೂ, ವಾಣಿಯಲ್ಲಿ ಸತ್ಯಾರ್ಥವೂ ನೆಲೆಗೊಂಡಿರುತ್ತವೆ. ಆದರಿಂದ ಇವರು ಲೋಕೋದ್ಧಾರಮಾಡಲು ಸಮರ್ಥರಾಗಿದ್ದಾರೆ. ಭಗವಾನ್ ಬುದ್ಧ, ಶಂಕರಾಚಾರ್ಯ, ರಾಮಾನುಜಾಚಾರ್ಯ, ರೇಣುಕಾಚಾರ್ಯ, ಮಧ್ವಾಚಾರ್ಯ, ಬಸವೇಶ್ವರ, ವಿದ್ಯಾರಣ್ಯ, ಸ್ವಾಮಿ ರಾಮತೀರ್ಥ, ವಿವೇಕಾನಂದ ಮುಂತಾದವರು ಧರ್ಮಪ್ರದೀಪನಗೊಳಿಸಿ ಭಾರತೀಯರಲ್ಲಿ ನವಚೈತನ್ಯವನ್ನುಂಟುಮಾಡಬೇಕಾದರೆ ಆ ಮಹಾತ್ಮರಲ್ಲಿದ್ದ ಅಸಾಧಾರಣವಾದ ನೈತಿಕ, ಧಾರ್ಮಿಕ, ಪಾರಮಾರ್ಥಿಕ ಶಕ್ತಿಗಳೇ ಕಾರಣ. ಈ ದಿವ್ಯಶಕ್ತಿಗಳು ತಮ್ಮ ಕಡೆಗೆ ಜನರ ಮನವನ್ನು ಸುಲಭವಾಗಿ ಎಳಕೊಳ್ಳಬಲ್ಲವು. ತಾವು ನಿತ್ಯಸುಖಿಗಳಿದ್ದರೂ ನೀತಿ, ಧರ್ಮ, ಜ್ಞಾನಗಳನ್ನು ಜನತೆಯಲ್ಲಿ ಬೆಳಿಸುವದೇ ಸ್ವಕರ್ತವ್ಯವೆಂದು ನಂಬಿ, ಅವಿಶ್ರಾಂತವಾಗಿ ಶ್ರಮಗೊಳ್ಳುವದು ಮಹಾತ್ಮರ ಸ್ವಭಾವವು. ಅಂತೇ ಅಧಿಕೃತರೂ ಕರುಣಾನಿಧಿಗಳೂ ಆದ ಶ್ರೀಮದ್ಬಸವೇಶ್ವರಾದಿ ಪ್ರಮಥಾಗ್ರಣಿಗಳು

ಹಿಂದೆ ಯುಗಯುಗದಲ್ಲಿ ಅವತರಿಸಿ ಅಮೌಲ್ಯವಾದ ತಮ್ಮ ಅನೇಕ ಜನ್ಮಗಳನ್ನು ಧರ್ಮೋದ್ಧಾರಕ್ಕಾಗಿಯೇ ತೆತ್ತರು. ಮುಂದಾದರೂ ತೆರುವ ಗುತ್ತಿಗೆಯನ್ನು ಹಿಡಿದಿರುವ ಸಂಗತಿಯು ಶಾಸ್ತ್ರದಿಂದ ತಿಳಿದು ಬರುತ್ತದೆ. ಅವರಂತೆ ಈಗಲೂ ಹಲಕೆಲವು ಮಹಾತ್ಮರು ಅಲ್ಲಲ್ಲಿ ಅವತರಿಸಿ ತಾವು ತಿಳಿನಡೆಯನ್ನು ನಡೆದು ಅದನ್ನೇ ಬೋಧಿಸಿ ಅದರ ಫಲವನ್ನು ಜನತೆಗೆ ಉಣಿಸಿದರು. ಅವರಲ್ಲಿ ಹೇಳಬೇಕೆಂದರೆ ನಮ್ಮ ಚರಿತ್ರನಾಯಕರಾದ ಸೊಲ್ಲಾಪುರದ ನಾಲತ್ವಾಡ ಶಿವಶರಣ ವೀರೇಶ್ವರರೊಬ್ಬರು. ಇವರು:—

"ಸಜ್ಜನ ಸದ್ಭಾವಿ ಅನ್ಯರ ಕೆಯ್ಯಾನಬೇಡ; ಲಿಂಗಮುಟ್ಟದ ಕೈ ಮೂಸಲು; ಕಂಗಳಲ್ಲಿ ಒಸೆದುನೋಡ ಪರವಧುವ; ಮನದಲ್ಲಿ ನೆನೆಯ ಪರಹಿಂಸೆಯ; ಮಾನವರ ಸೇವೆಯಮಾಡ; ಲಿಂಗವ ಪೂಜಿಸಿ ಲಿಂಗವ ಬೇಡ; ಆಲಿಂಗದ ಹಂಗನೊಲ್ಲ; ಕೂಡಲ ಚೆನ್ನಸಂಗಮನೆ, ನಿಮ್ಮೊಳು ಸಮರಸೈಕ್ಯವನರಿತ ನಿಜಶರಣನು."

ಎಂಬ ಚೆನ್ನಬಸವೇಶ್ವರ ವಚನದಂತೆ ಇದ್ದರು. ಭೋಗಲಾಲಸೆಗಳಲ್ಲಿಯೇ ಬಾಳುವ ವೀರಶೈವನು, ಹೀನ ಜನ್ಮಗಳಲ್ಲಿ ಬೀಳುವನು, ಎಂದೊರೆವ ಶಾಸ್ತ್ರಾರ್ಥವನ್ನು ಎಂದೋ ವಿಚಾರಿಸಿ ಮನಗಂಡು ವಿಷಯ ವಿರತಿಯಿಂದ ಕೇವಲ ಶಿವಧರ್ಮ ಶೀಲಾಚಾರಪರರಾಗಿದ್ದರು. ಆದರೂ ಸಾಮಾಜಿಕ, ನೈತಿಕ ಸುಧಾರಣೆಯ ಕಳಕಳಿಯಲ್ಲಿ ಇವರ ಮನವು ಮುಂಬರಿವುತ್ತಲೇ ಇತ್ತು. ಅಸುವಳಿದರೂ ಧರ್ಮಾವನತಿಯ ಕಾರ್ಯವನ್ನು ಕಂಡು, ಕೇಳಿ, ಸೈರಿಸಲಿಲ್ಲ. ಇವರ ಶಮದಮಾದಿ ಷಡ್ಗುಣಗಳನ್ನು ಹೊಗಳದ ಪಂಡಿತ ಪಾಮರು ಇಲ್ಲ. ಇವರ ರೂಪಕಾರ್ಯಗಳಲ್ಲಿ ತುಂಬಿಸೂಸುವ ವಿನಯದಯೆಗಳು ನಿಂದಾಕಲಂಕಿತರ ಕಠಿಣ ಹೃದಯವನ್ನು ಕೂಡಾ ಮೆತ್ತಗೆಮಾಡಿ ತಲೆಬಾಗಿಸದೆ ಬಿಡಲಿಲ್ಲ. ಇವರ ತಪಸ್ಸು ದಾರುಣವಾದ ಬಾಣದಂತೆ ಬೆದರಿಸಿ ಎಂತಹ ಓಜಸ್ವಿಗಳನ್ನಾದರೂ ಕೈಕಟ್ಟಿ ಅಂಗಳದಲ್ಲಿ ನಿಲ್ಲಿಸಿತು. ಇವರ ವಾಣಿಯಲ್ಲಿ ಭವಿತವ್ಯದ ಸೂಚನೆಗಳು ಸಹಜವಾಗಿ ಹೊರಬೀಳುತ್ತಿದ್ದವು. "ಭೋಗ ತೃಷ್ಣೆಯೇ ದುಃಖಬೀಜವು. ವಿಷಯಾನಂದವು ನಿರ್ಮಲವಾದುದಲ್ಲ. ಸಂಪತ್ತು ದೊರೆದುದರಿಂದಾದ ಆನಂದವು, ಅದರ ವಿಯೋಗವಾಗಲು

ದುಃಖದಲ್ಲಿ ಪರ್ಯವಸಾನವನ್ನು ಹೊಂದುವದು. ಪ್ರಸಾದ ಸೇವನೆ ಯಿಂದುಂಟಾದ ಆನಂದವು, ನಿಜವಾಗಿ ಕೃತಕೃತ್ಯತೆಯ ತೃಪ್ತಿಗೆ ಕಾರಣವು." ಎಂಬಿವೇ ಮೊದಲಾದ ತಮ್ಮನುಭವದ ಉಪದೇಶ ವಚನಗಳನ್ನು ಸದಾಚಾರಿಗಳಿಗೆ ಯಾವಾಗಲೂ ಬೋಧಿಸುತ್ತಿದ್ದರು. ಮಾನವ ಪ್ರಾಣಿಗಳ ಜೀವನಗುರಿಯಾದ ಶಾಂತಿಗೆ ಧರ್ಮವೇ ಸಾಧನಮೆಂಬುದನ್ನು ಈಗಿನ ನಾಸ್ತಿಕವಾತಾವರಣದಲ್ಲಿ ಬಹುಜನರಿಗೆ ಮನದಟ್ಟು ಮಾಡಿಕೊಟ್ಟರು. ಒಟ್ಟಿಗೆ ಇವರ ಪುಣ್ಯಾಚರಣೆಯು ರಾಷ್ಟ್ರಹಿತೋದಯ ಕಾರಣವೆಂದು ಕಣ್ಣಾರೆ ಕಂಡ ನಾನು ಎದೆತಟ್ಟಿ ಹೇಳಬಲ್ಲೆನು.

ಈ ಮಹಾಮಹಿಮರು ಬಿಜಾಪುರ ಜಿಲ್ಲೆಯೊಳಗೆ ಮುದ್ದೇಬೀಹಾಳ ತಾಲೂಕಿಗೆ ಸೇರಿದ ನಾಲತ್ವಾಡವೆಂಬ ಗ್ರಾಮದವರು. ಇವರು ದೊಡ್ಡಾರ್ಯ ರುದ್ರಾಂಬೆಯರೆಂಬ ಪವಿತ್ರ ಮಾಹೇಶ್ವರ ದಂಪತಿಗಳಲ್ಲಿ ಶಾಲಿವಾಹನ ಶಕ ೧೭೭೦ನೆಯ ಕೀಲಕ ಸಂವತ್ಸರದೊಳಗೆ ಗುರುವಾರ ಪ್ರಭಾತ ಸಮಯದಲ್ಲಿ ಜನಿಸಿದರು. ಇವರು ಜನಿಸಿದ ಮಾಸ ತಿಥಿಗಳು ತಿಳಿದಿಲ್ಲ. ತಾನು ಬಡತನದಿಂದ ಕಷ್ಟಪಡುತ್ತಿದ್ದರೂ ದೊಡ್ಡಾರ್ಯನು ನಮ್ಮ ವಿರೇಶ್ವರರನ್ನು ಚಿಕ್ಕಂದಿನಲ್ಲಿಯೇ ಸಾಲೆಗೆ ಕಳಿಸಿದನು. ಧರ್ಮ ಶಿಕ್ಷಣದ ಗಾಳಿಯು ಸಹ ಸುಳಿದಾಡದಿರುವ ಈಗಿನಂತಹ ಸಾಲೆಗಳು ಆಗ ಇರಲಿಲ್ಲ. ಧರ್ಮ ತತ್ವಗಳ ಶಿಕ್ಷಣವನ್ನೊಳಕೊಂಡ ಸಾಲೆಗಳೇ ಇದ್ದವು. ಆ ಸಾಲೆಯಲ್ಲಿ, ಓ ನಾಮಾ, (ಮೂಲಾಕ್ಷರ ಗುಣಿತಾಕ್ಷರಗಳು) ಅಂಕಿ, ಮೊಗ್ಗಿ, ಪಾಕಿ, ಕಾಸು, ರುವ್ವಿ, ಹಾಗ, ಗದ್ಯಾಣ ಮೊದಲಾದವುಗಳು ಮುಗಿದ ಬಳಿಕ, ಮತಿಹಿಡಿಸಿ (ಸರಸ್ವತೀ ಪೂಜಾತ್ಮಕವಾದ ಒಂದು ಬಗೆಯಿಂದ ವಿದ್ಯಾರ್ಥಿಯ ಸಂಸ್ಕಾರವನ್ನು ಸಂಭ್ರಮದೊಡನೆ ಮಾಡಿ) ಮುಂದೆ ಕೂಡಿಸುವ, ಕಳೆವ, ಗುಣಿಸುವ, ಭಾಗಿಸುವ, ಮುಂತಾದ ಲೆಕ್ಕಗಳನ್ನೂ ದೀಪದಕಲಿ, ಶಿವರಾತ್ರಿಯ ಕಥೆ, ಮೈದುನ ರಾಮಯ್ಯನ ಚರಿತ್ರ, ಶರಣ ಲೀಲಾಮೃತ, ಜೈಮಿನಿ, ಚೆನ್ನಬಸವ ಪುರಾಣಾದಿ ಪದ್ಯಗ್ರಂಥಗಳನ್ನು ಧರ್ಮಪ್ರವಚನಪೂರ್ವಕವಾಗಿ ಕಲಿಸುವ ರೂಢಿಯಿತ್ತು. ನಮ್ಮ ಶರಣರು ಆ ಸಾಲೆಯಲ್ಲಿ ಅವುಗಳನ್ನೆಲ್ಲ ಅಲ್ಪ ವಯಸ್ಸಿನಲ್ಲಿಯೇ ಕಲಿತರು. ಒಳ್ಳೇ ನಡತೆಯೂ ಜಾಣ್ಮೆಯೂ ಇವರಿಗೆ

ಹುಟ್ಟುಗುಣವಾಗಿದ್ದದರಿಂದ ಸಾಲೆಯೊಳಗೆ ಮೇಲಾಗಿ ಊರಲ್ಲಿ ಹೌದೆನಿಸಿಕೊಂಡರು. ಅಷ್ಟರಲ್ಲಿ ಕುಟುಂಬಭಾರಕ್ಕೆ ತಲ್ಲಣಿಸುವ ತಂದೆಗೆ ನೆರವಾಗಲೇ ಬೇಕಾದ ಹೊತ್ತು ಬಂತು. ಆಗ ಕಲಿವುದನ್ನು ಬಿಟ್ಟು ನಾಲತ್ವಾಡದ ನೆರೆಯಲ್ಲಿ ತಮ್ಮ ಮಠವಿರುವ ಸಿದ್ಧಾಪುರವೆಂಬ ಹಳ್ಳಿಯೊಳಗೆ ಪ್ರಾಥಮಿಕ ಶಾಲಾಧ್ಯಾಪಕರಾದರು. ಇವರ ಶೀಲ ಸ್ವಭಾವಕ್ಕೂ ಶಿಕ್ಷಣದ ಸೌಕರ್ಯಕ್ಕೂ ಮೆಚ್ಚಿ ಆ ಊರವರು, ಬಿದರಕುಂದೀ ಮಠದ 'ಗುರುದೇವಿ'ಯೆಂಬ ಕನ್ಯೆಯನ್ನು ತಂದು ಇವರ ಮದುವೆ ಮಾಡಿದರು. ಮುಂದೆ ಕೆಲವು ದಿವಸಗಳಲ್ಲಿ ತಂದೆಯಾದ ದೊಡ್ಡಾರ್ಯನು ಶಿವನೊಳಗಾದನು. ಆಗ ಕುಟುಂಬಭಾರವು ಜ್ಯೇಷ್ಠಪುತ್ರರಾದ ನಮ್ಮ ಶರಣರ ಕೊರಳಿಗೇ ಬಿತ್ತು. ಹಳ್ಳಿಯ ಸಾಲೆಯಿಂದ ದೊಡ್ಡ ಕುಟುಂಬದ ನಿರ್ವಾಹವು ಸಾಗದಂತಾದುದರಿಂದ ಸಾಲೆಯನ್ನು ಬಿಟ್ಟು ಬಂದು ನಾಲತ್ವಾಡದಲ್ಲಿ ಒಕ್ಕಲತನಕ್ಕೆ ನಿಂತರು. ಆದರಲ್ಲಿಯೂ ಬಲವಂತರೆನಿಸಿಕೊಂಡು ದಿನದ ಕೆಲಸವನ್ನು ತಕ್ಕ ಹೊತ್ತಿಗೆ ಮುಗಿಸಿ ಉಳಿದೆಲ್ಲ ಹೊತ್ತಿನಲ್ಲಿ ವಚನ ಶಾಸ್ತ್ರವನ್ನು ಓದುತ್ತಿದ್ದರು. ಪೂರ್ವ ಪುಣ್ಯ ಪರಿಪಾಕವಶದಿಂದ ಸಂಸಾರ ಮೋಹವು ತೊಲಗಿ ದಾಸೋಹಂ ಭಾವವು ತಲೆಯೆತ್ತಿ, ಜ್ಞಾನ ಕ್ರಿಯೆಗಳ ದಿವ್ಯ ತೇಜಸ್ಸು ಬೆಳೆಯಲಾಯಿತು. ಇರೆಯಿರುತ್ತ ಜನರೊಡನಾಟವೂ ಲೌಕಿಕೋದ್ಯೋಗವೂ ಸರಿದೋರದೆ ಒಕ್ಕಲತನವನ್ನು ತ್ಯಜಿಸಿ ಕಾಯಕವನ್ನು ಕೈಕೊಂಡರು. ಮುಂದೊಮ್ಮೆ ನಾಲತ್ವಾಡದಲ್ಲಿ ಕೆಲವು ಭಾವಿಕ ಪ್ರಮುಖರು ಮಾರಿಕಾರೋಗ ನಿವಾರಣಕ್ಕೆಂದು ದ್ಯಾಮವ್ವನ ಜಾತ್ರೆಯನ್ನು ಮಾಡಲು ಸಜ್ಜಾದರು. ಅದನ್ನು ತಿಳಿದು "ಕುರಿಕೋಣಗಳ ಕೊಲೆಯಾಗದ ಜಾತ್ರೆಯನ್ನು ಮಾಡಿರಿ" ಎಂದು ಈ ದಯಾಘನರು ಹೇಳಿಕೊಂಡರು. ಊರವರು ಕೇಳಲಿಲ್ಲ. ಕೂಡಲೇ ಪಶುಹಿಂಸೆಗೆ ಸಹಿಸದೆ ನಾಲತ್ವಾಡದಿಂದ ಸತಿಸುತರನ್ನೊಡಗೊಂಡು ಸೊಲ್ಲಾಪುರಕ್ಕೆ ಬಂದರು. ಅಲ್ಲಿ ಅನೇಕ ಮಹತ್ವಗಳನ್ನು ಮಾಡಿ ಕೀರ್ತಿವಂತರೆನಿಸಿ ಶಾಲಿವಾಹನಶಕ ೧೮೪೧ನೆಯ ಸಿದ್ಧಾರ್ಥಿ ಸಂವತ್ಸರದ ಮಾಘ ಕೃ. ೧ ಗುರುವಾರ ೧೧ ಗಳಿಗೆಗೆ ಲಿಂಗೈಕ್ಯರಾದರು. ಇವರ ಗದ್ದುಗೆಯು ಶ್ರೀ ಸಿದ್ಧರಾಮೇಶ್ವರನ ಗುಡಿಯಲ್ಲಿ ಆಗಿದೆ. He had publicly notified the time & date of his death. And thousands of people were anxious

ಈ ಮಹಾತ್ಮರ ನಿಧನದನಂತರ ಇವರ ಗುಣಕ್ರಿಯೆಗಳ ಸ್ಮರಣಾವಲೋಕನಗಳಿಂದ ವೀರಶೈವರ ಸ್ಫೂರ್ತಿಯು ಧರ್ಮಾವಲಂಬನದಲ್ಲಿ ಬೆಳೆಯಲೆಂಬ ಸದುದ್ದೇಶವಿಡಿದು, ಇವರ ಚರಿತ್ರವನ್ನು ಬರಿಸುವದಾಗಿ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ ಲಿಂಗೈಕ್ಯ ಶ್ರೀ ಹಾನಗಲ್ಲಕುಮಾರ ಮಹಾಸ್ವಾಮಿಗಳು ಒಂದೆರಡು ಸಾರೆ ಮಾತಾಡಿದ್ದರು. ಯಾವ ಕಾರಣದಿಂದಲೋ ತತ್ಕಾಲಕ್ಕೆ ಅದು ಕಾರ್ಯ ಸೃಷ್ಟಿಯೊಳಗೆ ಬರಲಿಲ್ಲ. ಅಷ್ಟರಲ್ಲಿ ಆ ಮಹಾ ಸ್ವಾಮಿಗಳವರ ಆತ್ಮವು ಪ್ರಶಾಂತವಾಯಿತು. ಮುಂದೆ ಮೂರು ತಿಂಗಳಲ್ಲಿ ಶಿವಯೋಗ ಮಂದಿರದ ಶ್ರೀ ಮನ್ನಿರಂಜನ ಮಹಾಂತ ಶಿವಯೋಗಿಗಳು, ಸ್ವಾಮಿಗಳವರ ಉದ್ದೇಶವನ್ನು ನೆನೆದು, "ಶ್ರೀ ವೀರೇಶ್ವರರ ಚರಿತ್ರವನ್ನು ಬರೆ" ಎಂದು ನನಗೆ ನಿರೂಪಿಸಿದರು. ಅದಕ್ಕೆ ಒಪ್ಪಿ, ಇವರ ಸಹಾಯದಿಂದ ಶರಣರ ಚರಿತ್ರ ಶೋಧನಕ್ಕಾಗಿ ಹೊರಟೆನು. ನಾಲತ್ವಾಡದಲ್ಲಿ ಅನುಭವಿಕರಾದ ಕೆಲವು ಸಭ್ಯ ವೃದ್ಧ ಜನರಿಂದಲೂ, ಕಲಬುರಗಿಯಲ್ಲಿ ಶ್ರೀ ಮನ್ನಿರಂಜನ ಶಿವಮೂರ್ತಿ ಸ್ವಾಮಿಗಳಿಂದಲೂ, ಸೊಲ್ಲಾಪುರದಲ್ಲಿ ಶ್ರೀ ಮನ್ನಿರಂಜನ ಕಿರೀಟ ಮಠದ ನಿಜಗುಣ ಮಹಾ ಸ್ವಾಮಿಗಳವರಿಂದಲೂ ಅಲ್ಲಿ ಇನ್ನೂ ಕೆಲ ಭಕ್ತ ಮಾಹೇಶ್ವರರಿಂದಲೂ ಬಾಗಲಕೋಟೆಯಲ್ಲಿ ಶ್ರೀಯುತ ಮಲ್ಲಿಕಾರ್ಜುನಪ್ಪಾ ಅಣ್ಣಾ ಪಾಟೀಲ ಸೊಲ್ಲಾಪುರ, ಇವರಿಂದಲೂ. ಶಿವಯೋಗ ಮಂದಿರದಲ್ಲಿ ಶ್ರೀ ಶಿವಯೋಗ ಸಾಧಕರಿಂದಲೂ ಇದ್ದಕ್ಕಿದ್ದ ಹಾಗೆ ಚೆನ್ನಾಗಿ ತಿಳಿದೆನು. ಈ ಮಹಿಮನ ಚರಿತ್ರವನ್ನು ಅಲ್ಲಲ್ಲಿ ಕೇಳಿ ಕೇಳಿದ ಹಾಗೆ ಅರಿದವರು ಹೇಳೇ ಹೇಳಿದರು. ಅವುಗಳನ್ನೆಲ್ಲ ಬರೆಯಲು ನನ್ನಿಂದ ತೀರದೆಂದು ನಂಬಿ ಸಾಧ್ಯವಿದ್ದ ಮಟ್ಟಿಗೆ ಆರಿಸಿ ಕೊಂಡಿದ್ದೇನೆ.

ನಾನು ಸಂಸಾರದ ತೊಂದರೆಯಲ್ಲಿ ಸಿಕ್ಕಿದವನಾದುದರಿಂದ ಒಂದೆರಡು ದಿವಸ ಬರೆದು ಐದಾರು ದಿವಸ ಬಿಡುತ್ತಿದ್ದೆನು. ಹೀಗಾಗಿ ಆರಂಭಿಸಿದಂದಿನಿಂದ ಒಂದೂವರೆ ವರ್ಷದಲ್ಲಿ ಈ ಪುರಾಣವು ಮುಗಿಯಿತು. ಶರಣರು ಆಚರಿಸಿದ ನೀತಿ, ಧರ್ಮ, ಭಕ್ತಿ, ಜ್ಞಾನ, ವೈರಾಗ್ಯ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ವಿಚಾರಗಳು ಕಥಾಸಂವಿಧಾನಕ್ಕೆ

ಕಳೆದುಂಬುವಂತೆ ಈ ಪುರಾಣದೊಳಗೆ ಅಲ್ಲಲ್ಲಿ ಸರಸವಾಗಿ ತಿಳಿಗನ್ನಡ ದಿಂದ ಬರೆಯಲ್ಪಟ್ಟಿವೆ.

ಮುಗಿದ ಕೂಡಲೇ ಈ ಪುರಾಣವನ್ನು ಅಚ್ಚುಮಾಡಿಸಬೇಕೆಂದು ಶ್ರೀ ಮಹಾಂತ ಶಿವಯೋಗಿವರ್ಯರ ಸಂಕಲ್ಪವಿತ್ತು. ಆಗ ಹಣದ ಅನುಕೂಲವಿರಲಿಲ್ಲ. ಮುಂದೆ ಒಂದು ವರ್ಷವಾದ ಬಳಿಕ ಶಿವಯೋಗ ಮಂದಿರದ ಕಾರ್ಯವನ್ನು ಬದಿಗಿಟ್ಟು ಇವರು ನಾಲತ್ವಾಡಕ್ಕೆ ದಯ ಮಾಡಿಸಿ ಅಲ್ಲಿ ದೇಸಾಯರೂ, ನಾಡಗೌಡರೂ, ಸೆಟ್ಟರೂ ಮುಂತಾದ ಮುಖ್ಯ ಸದ್ಗೃಹಸ್ಥರ ಸಹಾಯದಿಂದ ಊರೊಳಗೆ ಭಿಕ್ಷಾರೂಪವಾಗಿ ೩೫೦ ರೂಪಾಯಿಗಳನ್ನು ಎತ್ತಿತಂದು ಮುದ್ರಣದ ಕಾರ್ಯವನ್ನು ಆರಂಭಿಸಿದರು. ಮುದ್ರಣದ ಉಳಿದೆಲ್ಲ ವೆಚ್ಚವನ್ನು ಬೇರೆ ಗ್ರಾಮಗಳ ಮಹಾಶಯರು ಪೂರೈಸಿಕೊಡುವವರಿದ್ದಾರೆ.

ಪುರಾಣದಲ್ಲಿ ಜೋಡಿಸಿರುವ ಆರು ಭಾವಚಿತ್ರಗಳ ಪಡಿಯಚ್ಚು ಗಳನ್ನು ಮಾಡಿಸಲಿಕ್ಕೂ ಇವುಗಳೊಳಗಿನ ನಾಲ್ಕು ಭಾವಚಿತ್ರಗಳನ್ನು ಮೊದಲು ಕೈಯಿಂದ ಬರಿಸಲಿಕ್ಕೂ ಹತ್ತಿದ ಹಣವನ್ನು ಪುಣ್ಯಪುರುಷರಾದ ಶ್ರೀಯುತ ದಾನಪ್ಪನವರು ತಾಳೀಕೋಟಿ ಸಾ. ಬಾಗಲಕೋಟಿಯಿವರು ಶ್ರೀಗಳವರ ಅಪ್ಪಣೆಯ ಮೇರೆಗೆ ಭಕ್ತಿಯಿಂದ ಕೊಟ್ಟರು. ಶರಣರನ್ನು ಕಣ್ಣಾರೆ ಕಂಡವರೂ, ಅವರಲ್ಲಿ ಪೂಜ್ಯ ಬುದ್ಧಿಯುಳ್ಳವರೂ, ಪ್ರಸಿದ್ಧ ಚಿತ್ರಕಲಾಕೋವಿದರೂ ಆದ, ಶ್ರೀಯುತ M. A. Chetti ಇವರು, ತಮ್ಮ ಶ್ರಮಕ್ಕೆ ತಕ್ಕ ಪಾರಿತೋಷವನ್ನು ತಕ್ಕೊಳ್ಳದೆ ಸ್ವಲ್ಪೇ ಸಂಭಾವನದಲ್ಲಿ ವಿಶೇಷ ಶ್ರಮಪಟ್ಟು ನೋಡಿದವರೊಡಂಬಡುವಂತೆ ಈ ನಾಲ್ಕು ಭಾವ ಚಿತ್ರಗಳನ್ನು ಕೈಯಿಂದ ಬರೆದು ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದರು. ಈ ಗ್ರಂಥರಚನಾಪ್ರಸಂಗದಲ್ಲಿ ~~ಕಪೋತಗಿರಿಯ~~ ನಂದಿವೇರಿ ಮಠದ ಶ್ರೀ ಶಂಕರದೇವರು ಪ್ರೋತ್ಸಾಹಕ್ಕಾಗಿ ನನಗೆ ೧೫ ರೂಪಾಯಿಗಳನ್ನು ದಯ ಪಾಲಿಸಿ ತಮ್ಮ ಶರಣಪ್ರೇಮವನ್ನೂ ಉದಾತ್ತಭಾವವನ್ನೂ ತೋರಿಸಿದರು. ಮಂಗಳೂರ ಧರ್ಮಪ್ರಕಾಶ ಪ್ರೆಸ್ಸಿನ ಮ್ಯಾನೇಜರರೂ, ನನ್ನ ಮಿತ್ರರೂ ಆದ ವೇ. ವಿಟ್ಠಲಾಚಾರ್ಯರು ವಿಶೇಷ ಜಾಗರೂಕತೆಯಿಂದ ಶುದ್ಧ ವಾಗಿಯೂ ಮುದ್ದಾಗಿಯೂ ಈ ಗ್ರಂಥವನ್ನು ಮುದ್ರಿಸಿಕೊಟ್ಟರು. ಈ

ಬಗೆಯಾಗಿ ಮೇಲೆ ಹೇಳಿದ ಮಹಾಶಯರು ಗ್ರಂಥಕ್ಕೆ ಸಹಾಯಮಾಡಿರುವದರಿಂದ ಇವರೆಲ್ಲರಿಗೂ ಆಯುರಾರೋಗ್ಯ ಸಂಪದಾದಿಗಳು ಕೈಗೂಡಲೆಂದು ಅನನ್ಯಭಾವನೆಯಿಂದ ಜಗದೀಶನನ್ನು ಕುರಿತು ಪ್ರಾರ್ಥಿಸುವೆನು.

## ಕೃತಜ್ಞತೆ.

ಯಾವ ಮಹನೀಯರು ಈ ಪುರಾಣರಚನೆಗಾಗಿ ನನಗೆ ಅಪ್ಪಣೆಯನ್ನೂ ಪ್ರೋತ್ಸಾಹವನ್ನೂ ಮಾಡಿದರೋ; ಯಾವ ಗುಣ ಪಕ್ಷಪಾತಿಗಳು ಮೊದಲಿಂದ ಪುರಾಣ ಮುದ್ರಣದ ವರೆಗೂ ತಮ್ಮ ತನುಮನೋಧನಗಳನ್ನು ಸವಿಸಿದರೋ; ಯಾವ ಶಾಂತಮೂರ್ತಿಗಳು ಕಾಲವಿಲಂಬದಲ್ಲಿ ಸಿಡಿಮಿಡಿಗೊಳ್ಳುವ ನನ್ನನ್ನು ಆಗಾಗ ಆಶೀರ್ವಾದ ಲೇಖನಮುಖದಿಂದ ಸಮಾಧಾನ ಮಾಡಿದರೋ; ಅಂತಹ ಶ್ರೀ ಮನ್ನಿರಂಜನ ಮಹಾಂತ ಶಿವಯೋಗಿಗಳ ದಿವ್ಯ ಚರಣಕ್ಕೆ ಭಕ್ತಿಯಿಂದ ನಾನು ಪ್ರಣಾಮವನ್ನು ಸಲ್ಲಿಸುವೆನು.

ದ್ಯಾಂಪುರ,
ಶ್ರೀಮುಖ ಸ. ಕಾರ್ತಿಕ ಶು. ೧. } ಗ್ರಂಥಕರ್ತ.

---

## ಓದುಗರಿಗೆ ಸೂಚನೆ.

ಶ್ರೀ ಶಿವಶರಣ ವೀರೇಶ್ವರರೂ ಗುರುದೇವಿಯರೂ ತಮ್ಮ ಬಾಳಿಕೆಯಲ್ಲಿ ಕೆಲವು ವರ್ಷಗಳನಂತರ 'ನಾನು' 'ನಾವು' ಎಂಬ ಶಬ್ದವನ್ನು ತಮ್ಮ ವಚನದಲ್ಲಿ ಬಳಿಸುತ್ತಿರಲಿಲ್ಲ. ಈ ಶಬ್ದಗಳಿಗೆ ಬದಲಾಗಿ 'ಇವನು' 'ಇವರು' ಎಂದು ನುಡಿಯುತ್ತಿದ್ದದರಿಂದ 'ಇವನು' 'ಇವರು' ಎಂಬ ಶಬ್ದದ ಮೇಲೆ * ಈ ಚಿನ್ಹವಿದ್ದಲ್ಲಿ 'ನಾನು' 'ನಾವು' ಎಂದು ತಿಳಿಯಬೇಕು. ಸೊಲ್ಲಾಪುರದಲ್ಲಿ ಈಗಿರುವ ಶ್ರೀ ಅವ್ವಾ ಅವರ ವಚನಗಳಾದರೂ ಹೀಗೇ ಅವೆ.

---

# ಪಂಡಿತರಿಗೆ ಪ್ರಾರ್ಥನೆ.

---

ಉ. ಮಾ. ವೃತ್ತ.

ಕನ್ನಡ ನಾಡಿದೆನ್ನನೊಲವಿಂ ಪಡೆದೋವಿದ ಮಾತೆಯೊಕೆ ತಾಂ ।
ಮನ್ನಿಸೆ ದೇಶಬಾಂಧವರಿಗಿಂಪೆನೆ ಪೇಳಿರುವೀ ಪುರಾಣದೊಳ್ ।।

ಎನ್ನ ಪ್ರಮಾದದಿಂ ಕೆಡೆದ ದೋಷಗಳಂ ನೆರೆ ತಿದ್ದಿ ನೀತಿಸಂ ।
ಪನ್ನ ಬುಧೋತ್ತಮರ್ಕಳುಪಕಾರಿಗಳಕ್ಕೆನಗೆಂದು ಬೇಡುವೇಂ ।।

ಶಿವಕವಿದಾಸ.—

ಚನ್ನಕವಿ.

---

ಶ್ರೀ ಗುರವೇ ನಮಃ

# ಶಿವಶರಣ
# ಶ್ರೀ ವೀರೇಶ್ವರ ಪುರಾಣ.



ಭಾಮಿನಿ ಷಟ್ಪದಿ.

ಶ್ರೀಗುರುಪರಂಜ್ಯೋತಿ ಕರುಣಾ । ಸಾಗರ ನಿರಂಜನ ಮಹಾಶಿವ । ಯೋಗಸಿದ್ಧ ವಿಶುದ್ಧಚೇಷ್ಟಾಲೋಲ ಚಿದ್ಗಗನ ॥ ರಾಗರಹಿತಾನಂದಮಯ ನಿಗ । ಮಾಗಮಾರ್ಥ ವಿಶಾರದಾಶ್ರಿತ । ಪೂಗದಿವಿಜಾಗಮ ನಿರಂತಂ ಪೊರೆ ಜಗತ್ರಯವ ॥ ೧ ॥

ಶ್ರೀಮದಮರಧುನೀಧರಂ ಪುರ । ಕಾಮಕಾಲಾರಣ್ಯದಹನಂ । ಸೋಮ ಕರಮಕುಟಂ ಜಟಾಜೂಟಂ ಗರಲಕಂಠಂ ॥ ಹೇಮಕುಧರನಿಕೇತನಂ ಭವ । ಭೀಮನನಘಂ ಪಾರ್ವತೀಮುಖ । ತಾಮರಸಭೃಂಗಂ ಕುಡುಗೆ ಕೈವಲ್ಯ ಸಂಪದವ ॥ ೨ ॥

ಆವಳಡಿಯಂ ದೇವಸತಿಯರು । ಸೇವಿಪರು ಸದ್ಭಕ್ತಿಯಿಂ ಸತ । ಮಾವಳೈದಾಳಿಯ ಮಹಿಮೆಯಿಂ ಬಿಸಮನಂದುಂಡು ॥ ಭಾವಜಾರಿ ಬರ್ದುಂಕಿದನೊ ಮೇ । ಣಾವಳಾಧಾರವನಭೇದದಿ ! ನಾವರಿಸಿ ರಂಜಿಸುವಳಾ ಶಿವೆಗಪ್ಪೆ ನಾನತನು ॥ ೩ ॥

ವಾರಣಾನನ ತಾರಕಾಹಿತ । ವೀರ ಶೈಲಾದೀಶ ಭೃಂಗಿ ಸು । ಧೀರ ರೇಣುಕ ದಾರುಕಾದ್ಯಾಚಾರ್ಯ ಬಸವೇಶ ॥ ಸಾರಚಿದ್ಘನ ಚನ್ನಬಸವ ವಿ ! ಚಾರ ಕಪ್ರಭುದೇವಮುಖಗಣ । ವಾರಮೆನ್ನನನಾಥಶಿಶುವೆಂದೆತ್ತಿ ಪೋಷಿಸಲಿ ॥ ೪ ॥

ಶ್ರೀಮಹಾನಿಜಗುಣನನೂರ್ಜಿತ । ಸೋಮನಂ ಪರವಾದಿಗಜ ಹರಿ । ಭೀಮನಂ ಮಲ್ಲಣ ವಿರೂಪಾಕ್ಷಾಖ್ಯರಂ ಮತ್ತೆ ॥ ಆ ಮಹಿತ ಪಂಡಿತ ಷಡಕ್ಷರ । ನಾಮನಂ ಬಲವಂದು ಕವಿತಾ । ಕೋಮಲಾಂಗಿಯ ಪ್ರೇಮಮಂ ಸಂಪಾದಿಸುವೆನೊಲಿದು ॥ ೫ ॥

ಶರಣರೀಶ್ವರನಿಂದಧಿಕಮೆಂ । ದರಿದು ಶೈವಾಗಮಗಳೊರೆವು । ತ್ತಿರುವ ಕಾರಣಮನ್ಯತಕಾಗಿ ಮಹೇಶನಂ ಕೂರ್ತು ॥ ಪಿರಿಯ ತಪಮಂ ಮಾಳ್ಪದಕ್ಕಿಂ । ಶರಣರಗೃಹಂಗಾಯ್ವ ನಾಯಾ । ಗಿರುವದೇ ಬಲುಸುಲಭಮೆಂ ಬಾರ್ಯೋಕ್ತಿಗಾನೊಪ್ಪಿ ॥ ೬ ॥

ಮನದೆ ಶರಣರ ನೆನಹು ರಸನೆಯ । ಕೊನೆಯೊಳವರಭಿಧಾನ ಸಂಕೀ । ರ್ತನಮದಕ್ಷಿಯೊಳವರ ದರ್ಶನವೀ ಕಿವಿಯೊಳವರ ॥ ವಿನುತ ಭಾಷಾಶ್ರವಣಮುಂ ಕರ । ವನರುಹದೊಳವರಡಿಯ ಸೋಂಕೆನ । ಗನವರತ ಮುಂಟಾಗಲೆಂದಾನೆಳಸಿ ಬೇಡುವೆನು ॥ ೭ ॥

ಶಿವನ ಶಿವಶರಣರ ಮಹತ್ವಗ । ಳವಿಕಲಸದಾಚಾರವರ್ತನ । ಮವನಿತಲದೊಳ್ಪರ್ಬಿ ಜಗದುದ್ಧಾರಕನುವಾದ ॥ ಕವಿತೆಯಂ ಬರೆವವನೆ ಪಾವನ । ಕವಿಯೆನಿಪನಾತಂ ಶಿವಶ್ರೀ । ಯುವ ಪಡೆವನಜರಾಮರ ಯಶೋವಿಭವಯುತನಾಗಿ ॥ ೮ ॥

ನೀತಿ ಧರ್ಮ ವಿಚಾರ ಭಕ್ತಿ ಸು । ರೀತಿ ವಿರಹಿತಮಾಗಿ ಪಿರಿ ಯೊಣ । ಮಾತು ಚತುರತೆಯುಳ್ಳ ಮೋಹೋದ್ರೇಕಕಥೆಗಳನು ॥ ಪ್ರೀತಿಮಿಗೆ ವಿರಚಿಸಿ ಮಹಾವಿ । ಖ್ಯಾತಿಯಂ ಪಡೆದವನ ಜಾಣ್ಮೆ । ಪೇತರದು ತೆಗೆ ಶಿವ ಕವೀಶ್ವರರಾತಗೊಪ್ಪುವರೆ ॥ ೯ ॥

ಮರೆದು ಜಗದುದಯಾದಿಯಿಂದೀ । ವರೆಗೆ ವಿಷಯಾಶಾಪಿಶಾ ಚಿಗೆ । ನೆರೆದಖಿಳಜನ್ಮಗಳನರ್ಪಿಸಿ ಬಳಲಿದೆನು ಮುಂದೆ ॥ ಬರುವ ಜನ್ಮಗಳಲ್ಲಿ ಪಶುಪತಿ । ಶರಣರೊಳಿಗತನಮವಿರತಂ । ದೊರೆಯಲೆಂದವರಂಘ್ರಿಯುಂ ನೆರೆ ನಂಬಿ ಭಜಿಪಾನು ॥ ೧೦ ॥

ವಿರತಿ ವಿತರಣ ಭೂತಕರುಣಾ । ಪರತೆ ಶಾಸ್ತ್ರವಿಚಾರಪರಿಣತೆ । ಪರಮಲಿಂಗಸುನಿಷ್ಠೆ ಸುಮುಖತ್ವಂಗಳಿಂದೆಸೆವಾ ॥ ಸುರುಚಿರಮಹಾಂತೇಶ್ವ ರಾಭಿಧ । ವರಮಹಾ ಶಿವಯೋಗಿವರ್ಯನ । ಚರಣದರ್ಶನಕೊರ್ವೆ ಪದಪಿಂ ಪೋದ ಸಮಯದೊಳು ॥ ೧೧ ॥

ಧರಣಿಯೊಳು ಪೆಸರಾದ ಸೊನ್ನಲ । ಪುರದ ವೀರಾರ್ಯಾಖ್ಯ ಶಂಕರ । ಶರಣಲೀಲೆಯ ವಿರಚಿಸೆಂದೆನಗೆಸಗಿದಾಜ್ಞೆಯನು ॥ ಶಿರದೊಳಾಂ ತು ಸುಸಾಧ್ಯಮಾದನಿ । ತುರುತರಮಹತ್ವಗಳನಲಸದೆ । ಸರಿಗೊಳಿಸಿ ಬೆಳು ಗನ್ನಡದೆ ಭಾಮಿನಿಯ ರೂಪದಲಿ ॥ ೧೨ ॥

ರಚಿಸಿದೆನು ಶಂಕರಗಣಾಧಿಪ । ನಿಚಯಪಾದಪಯೋರುಹಂಗಳ । ನುಚಿತಮೆನೆ ಹೃದಯದೊಳು ನೆನವುತ್ತವರ ಬಲದಿಂದ ॥ ಸುಚರಿತಮಿದೀ ಭೂವಲಯದೊಳು । ಪ್ರಚುರಮಕ್ಕೋದುವಗೆ ಕೇಳ್ವಗೆ । ರುಚಿಯಿಕೆ ತದಿ ಷ್ಟಾರ್ಥಸಿದ್ಧಿಯದಕ್ಕೆ ಸಂತತವು ॥ ೧೩ ॥

ಕೋವಿದರು ಸಾಧುಗಳು ನಿರ್ಮಲ । ಭಾವಿಗಳು ಮನಗಂಡು ನುತಿಪೀ । ಪಾವನನ ಮಹಿಮಾಳಿಯಂ ಪೂರ್ಣಮೆನೆ ವಿರಚಿಸಲು ॥ ಭಾವಜಾರಿಯ ಕರುಣವಡೆದ ಮ । ಹಾವಿಶಾರದಗಲ್ಲದೆ ಧರಿ । ತ್ರೀವಲಯ ದೊಳ್ಸಾಧ್ಯಮಲ್ಲಂ ಮಂದನಾದೆನಗೆ ॥ ೧೪ ॥

ಆದರಿನೀ ವೀರೇಶಶರಣಾ । ಭ್ಯುದಯದಿವ್ಯಚರಿತ್ರವಿಭವದೊ । ಳೊದ ವಿದೆನ್ನೀ ಕಾವ್ಯಮರಿಯೆ ದಶಾಂಶಮಾಗಿಹುದು ॥ ನದಿಯರೆಯೆನಲ್ಪರಿದೊಡೇ ನಾ । ಯ್ಯುದಕದಿಂ ತೃಷಿತರನು ತಣಿಪವೊ । ಲಿದು ಸುಖೇಚ್ಛುಗಳಂ ತಣಿಸ ದಿರದುದ್ವಿಷಯದಿಂದ ॥ ೧೫ ॥

ಸಲ್ಲಲಿತಮೆನೆ ಶರಣನೆಸಗಿ । ರ್ದಲ್ಲ ಮಹಿಮೆಗಳಂ ಬರೆವಬಲ । ಮಿಲ್ಲ ಮೆನಗೆಂದಿನಿಸು ಚಿಂತಿಸದುಳಿದಲೀಲೆಯನು ॥ ಬಲ್ಲಿದಭವಕವೀಂದ್ರರೊಲವಿಂ । ಬಲ್ಲವರೊಡಂಬಡುವವೊಲ್ಧರೆ । ಯಲ್ಲಿ ವಿರಚಿಸಿ ಮೆರಿಸಲೆಂದುತ್ಸವದೊಳರ್ಥಿ ಪೆನು ॥ ೧೬ ॥

ಪಶುಪನಂ ಶರಣರ್ಕಳಂ ನವ । ರಸಭರಿತಮೆನೆ ಪೊಗಳುವೆಡೆಯೊಳು । ಕುಶಲತನಮಂ ತೋರ್ದು ಮೊದಲಕವೀಶ್ವರರು ನೆಗಳ್ದ ॥ ಮಿಸುಪಕಾವ್ಯಾ ಮೃತವನೀಂಟುವ । ರಸಿಕರಿಗೆ ಮತ್ಕೃತಿಯಿದಾಗಳ್ । ವಸುಧೆಯೊಳು ತವ ರಾಜವಾಗಿ ವಿರಾಜಿಸಲಿ ಬಿಡದೆ ॥ ೧೭ ॥

ಎಳೆಯನಾಡುವ ತೊದಲುನುಡಿ ಪಿತೃ । ಗಳಿಗೆ ಮುದ್ದಾಗಿರುವ ಪಾಂಗಿಂ। ಮಲಹರನ ಶರಣರ್ಕಳಡಿಯೊಳನನ್ಯಭಕ್ತಿಯನು ॥ ನೆಲೆಗೊಳಿಸಿ ಬಾಳ್ವೆನ್ನ ಕಾವ್ಯ । ಕ್ಕೊಲೆಯದಿರರವರಿದರೊಳೊಳ್ನುಡಿ । ಸುರಸಚಾತುರ್ಯಾ ದಿಗುಣವಿರದಿರ್ದೊಡುಂ ನೆಲದೆ ॥ ೧೮ ॥

ವರಕವೀಂದ್ರರ್ನೆಗಳ್ದ ಕೃತಿಯಂ । ಪುರುಡಿನಿಂ ನಿಂದಿಸುವ ದುಷ್ಟರು । ಕಿರಿಯಕವಿಯಾದೆನ್ನ ಕಾವ್ಯವ ಪಳಿಯದಿರ್ದಪರೆ ॥ ಸರಳಮನಸಿನ ವಿಬುಧ ರೊಪ್ಪುವ । ತೆರದೆ ಬರೆದೀ ಚರಿತೆಯಿಂದಂ । ಬರುವ ಪಳಿ ನುತಿಗಳು ಶರಣರ ಡಿಗಿರ್ಕೆನಗೆ ಬೇಡ ॥ ೧೯ ॥

ಪರತರಶ್ರೀವೀರವಾಹೇ । ಶ್ವರನು ದ್ಯಾಂಪುರವಾಸಿ ಗುರುಕರ । ಸರಸಿ ಜಭವಂ ವೃಷ್ಟಿಸೂತ್ರಾನ್ವಿತನಭವವೋಹಿ ॥ ಸರಸಗುಣಿ ಬಸವಾರ್ಯಸುತ ನೆನಿ । ಸಿರುವ ಚನ್ನಕವೀಂದ್ರನೊಲೆದೀ । ಚರಿತೆಯಂ ಬರೆದಂ ಪ್ರವೀಣಾ ಸ್ಥಾನದೊಳು ಮೆರೆಯೆ ॥ ೨೦ ॥

ಘೋರತರಸಂಸಾರಪಾರಾ । ವಾರಮಂ ದಾಂಟಲ್ಪಡಂಗಿದು । ಸಾರ ಭಕ್ತಿಜ್ಞಾನವೈರಾಗ್ಯಗಳಿಗಿದು ಬೀಡು ॥ ಮಾರಹರದಿವ್ಯಪ್ರಸಾದಾ । ಗಾರ ಮಿದು ಚಿರಶಾಂತಿಕರಮಿದು। ವೀರಶರಣಾಗ್ರೇಸರಚರಿತ್ರಂ ಮಹೀತಲದೆ ॥ ೨೧ ॥

ಬೆಳಸಿ ಬರೆದ ಚರಿತ್ರಮಲ್ಲಂ । ಕಳೆದಳೆಯಲೆಂದೊರೆದ ಪುಸಿನುಡಿ । ಗಳ ಬಳಗದೊಂದಿಕ್ಕೆಯಲ್ಲಂ ಪಾಳುಮಾತಲ್ಲ ॥ ಗಳಿತರಸಮಯಮಲ್ಲ ಲಕ್ಷಣ । ವಳಿದ ಪದ್ಯಪ್ರಯುತಮಲ್ಲಂ । ಮಿಲಿತಶಿಥಿಲಕ್ಲಿಷ್ಟಮಲ್ಲಂ ಮತ್ಪ್ರ ಬಂಧಮಿದು ॥ ೨೨ ॥

ಶಿವಸಭೆಯವೊಲ್ಸುಗಣಯತಿವ್ರೈ । ಭವಮಯಂ ಮಾವಣ್ಣಿನಂದದೆ । ನವರಸಪ್ರಯುತಂ ಸದಾಚಾರಿಗಳ ಸಿರಿಯಂತೆ ॥ ಪ್ರವಿಮಲಾನ್ಯಪದಾರ್ಥ ವರ್ಜಿತ । ಮವನಿಪಕುಮಾರಿಯ ಸೊಬಗೆನಲು । ವಿವಿಧಸದಲಂಕಾರ ರಂಜಿತಮೆನ್ನ ಕಾವ್ಯಮಿದು ॥ ೨೩ ॥

ತೆಳುವೆಲರ್ಬೆಳದಿಂಗಳಿಂಗಡ । ಲಲರಳಿಗಳಿಂಚರಗಳಂತ । ಗ್ಗಳದ ಸೊಗಸಂ ಬಗೆಗೆ ನೀಡುಗುಮುಚಿತಸಖನಂತೆ ॥ ಹಲವು ಹಂಚಿಕೆಯಿಂದ ಹಿತವಂ । ತಿಳುಹಿ ಬುದ್ಧಿಗೆ ಬೆಳಗನೀಗುಂ । ಸುಲಭಮೆನೆ ನೆಗಳ್ದೆನ್ನ ಕಬ್ಬ ಮಿದಭವಭಕ್ತರೊಳು ॥ ೨೪ ॥

ಸಾರತರಮಾದೀ ಚರಿತ್ರಕೆ । ವೀರಶರಣೋತ್ತಂಸನೊಡೆಯಂ । ಚಾರು ಸದ್ಗುರುಲಿಂಗಚರರಧಿದೈವಗಳು ಮತ್ತೆ ॥ ದೂರಮಕ್ಕುಂ ಕಷ್ಟಗಳು ಕೈ । ಸಾರುಗುಂ ಭೋಗಾಮೃತಂಗಳ । ನಾರತಂ ಪದೆದಿದರ ಪಠನಶ್ರವಣಗಳಿನರಿಯೆ ॥ ೨೫ ॥

ಪೀಠಿಕಾ ಸಂಧಿ. ಪದಗಳು ೨೫.

ಶುಭಂ.



ಶ್ರೀ ಶಂಭುಲಿಂಗಾಯ ನಮಃ



## ಎರಡನೆಯ ಸಂಧಿ ಪ್ರಾರಂಭ.

ಸೂಚನೆ ॥ ಪರಮಭಕ್ತಿಜ್ಞಾನವಿರತಿಗ । ಳುರೆ ತನುವ ನಾಂತಂತೆ ವೀರೇ । ಶ್ವರಶರಣನವತರಿಸಿದಂ ಕೊಣ್ಣೂರೊಳಿಳೆಯರಿಯೆ ॥ ಪಲ್ಲವ ॥

ಪದ ॥ ಧರ್ಮ[೧]ವಾಹನನನುಪಮಾನಂ । ಧರ್ಮ[೨]ದೇಹಾರಣ್ಯದಹನಂ । ಧರ್ಮಜಾನುಜ[೩]ಶರದನಂಬುಜಭವಶಿರಃಪಾಣಿ ॥ ಧರ್ಮ[೪]ಮಯಗಾತ್ರಂ ತ್ರಿನೇತ್ರಂ । ಧರ್ಮ[೫]ನಿಕರಸ್ತುತಪದಂ ನಗ । ಧರ್ಮ[೬]ನಗಜಾಲೋಲನನಘಂ ಪೊರೆಗೆ ದಯೆಯಿಂದ ॥ ೧ ॥

ಭೂರಮಾವದನಂ ಸುಧರ್ಮಾ । ಗಾರಮಾರ್ಯವಿಲಾಸಭವನಂ । ಸಾರಯೋಗತಪೋಜಪಾನುಷ್ಠಾನಗಳ ಸೀಮೆ ॥ ವೀರಮನುಮುನಿಸಿದ್ಧವರನೃಪ । ಧೀರರುದಯಸ್ಥಾನಮುರುಶ್ರೀ । ಗಾರಸೌಭಾಗ್ಯಗಳ ನಿಲಯಂ ಭರತವಸುಮತಿಯು ॥ ೨ ॥

ಎಲ್ಲ ಕೈಗಾರಿಕೆಯ ಜಾಣಿಂ । ದೆಲ್ಲ ಧಾತುಸಮೃದ್ಧಿಯಿಂ ಮೇ । ಣೆಲ್ಲ ತರುಫಲವಲ್ಲರೀಕುಸುಮೌಷಧಿಗಳಿಂದ ॥ ಎಲ್ಲಖಗಮೃಗಪಶುನಿಕರದಿಂ । ದೆಲ್ಲ ಜಾತಿಯ ಧಾನ್ಯತತಿಯಿಂ । ದೆಲ್ಲ ತೀರ್ಥಕ್ಷೇತ್ರದಿಂದೆಸೆವುದುಭರತಭೂಮಿ ॥ ೩ ॥

ಕರಿಯವೊಲ್ದಾನಾನ್ವಿತಂ ಮುರ । ಹರನ ಪಾಂಗಿಂ ಭೋಗರಮ್ಯಂ । ಸುರಪುರದ ವೊಲ್ವಿಬುಧಸಂತಾನಾಶ್ರಯಂ ಕೊಳದ ॥ ತೆರದೆ ಪದ್ಮಾಮೋದನಿಲಯಂ । ವರಶರಿಯುವೊಲ್ವಿಪುಲಸುಕಲಾ । ಭರಿತಮೆನೆ ರಂಜಿಸುವದನಿಶಂ ಭರತಕಾಶ್ಯಪಿಯು ॥ ೪ ॥

---

೧. ಚಿದ್ಧರ್ಮರೂಪನಾದ ನಂದಿ. ೨. ಯಮ. ೩. ಅರ್ಜುನನ ಅಣ್ಣ ಧರ್ಮರಾಜ. ೪. ಪುಣ್ಯ. ೫. ಉಪನಿಷತ್ತು. ೬. ಬಿಲ್ಲು.

ಜ್ಞಾನದಿಂ ಬಹುಶಾಸ್ತ್ರಚಯುಸಂ। ಧಾನದಿಂಸನ್ನ್ಯಾಯದೊಂದಭಿ। ಮಾನದಿಂದಾಮ್ನಾಯತಂತ್ರಸ್ಮೃತಿವಿಧಿಗಳಿಂದ ॥ ಮಾನದಿಂ ಪರಮಾತ್ಮಚರಣ । ಧ್ಯಾನದಿಂಕರುಣಾದಿಸುಗುಣವಿ । ತಾನದಿಂಮನ್ನಣೆವಡೆದು ರಾಜಿಪುದುಭಾರತವು ॥ ೫ ॥

ತರುಗಳೊಳು ಕಲ್ಪದ್ರುಮಂ ಮಣಿ। ಪರಿಕರದೆ ಗೀರ್ವಾಣರತ್ನಂ । ತುರುಗಳೊಳಗಾ ಕಾಮಧೇನು ಶಚೀಂದ್ರನಮರರೊಳು ॥ ಕರಿಗಳೊಳಗೈರಾವತಂ ಬ। ಲ್ದೊರೆಗಳೊಳ್ಬಾಂಬೊಳೆಯು ಮೇಲೆನಿ । ಸಿರುವವೊಲ್ದೇಶಂಗಳೊಳ್ಭಾರತಮಧಿಕಮಿಹುದು ॥ ೬ ॥

ಇದರೊಳುರೆ ತೆಂಕಲೊಳು ಮೆರೆವುದು । ಪುದಿದ ಕನ್ನಡನಾಡು ಸಿರಿಯಿಂ । ಸದಮಲಾಸ್ತಿಕವಿಭವದಿಂ ದಯೆವಿಕ್ರಮುಗಳಿಂದ ॥ ಚದುರಿನಿಂ ಕೃಷ್ಯಾದಿಕರ್ಮಗ । ಳೊದವಿನಿಂ ಸದ್ವೃತ್ತಿಯಿಂದ। ಗ್ಗದ ಸೊಬಗಿನಿಂ ನಿಖಿಲಭೋಗ್ಯಸುವಸ್ತುತತಿಯಿಂದ ॥ ೭ ॥

ತೊರೆಗಳಿಂ ಪೇರ್ಗೆರೆಗಳಿಂದಂ । ಪರಿವ ಕಾಲ್ವೆಗಳಿಂದ ಸುಂದರ । ಪುರಗಳಿಂ ಪುಣ್ಯಾಶ್ರಮಾಚಲಮಶವನಗಳಿಂದ ॥ ಶರಧಿಯಿಂದ ವಿಚಿತ್ರ ಸುಮನೋ । ಹರಮಹಾಕ್ಷೇತ್ರಂಗಳಿಂ ಗೋ । ಪುರದ ಗುಡಿಗಳ ಬಳಗದಿಂ ಕಂಗೊಳಿಪುದೀ ನಾಡು ॥ ೮ ॥

ಅಸಮುಸುಮತಾಚಾರ್ಯರಂ ಬಹು । ಕುಶಲಮತಿಯುತವರಕವಿಗಳಂ । ಬಸವಮುಖ್ಯಪ್ರಮಥರಂ ಕರಡೀಶ್ವರಾದ್ಯರನು ॥ ಪಶುಪಶರಣಾಗ್ರಣಿಗಳಂ ಕಲಿ । ವಿಸರಮಂ ಪರಮಾತ್ಮನಿಷ್ಠರ । ನೊಸೆದು ಲೇಸೆನೆ ಪಡೆದುದಿದುವೇ ಕನ್ನಡದ ಸೀಮೆ ॥ ೯ ॥

ನಾಡೆ ಸೊಗಸಿಂ ಮೆರೆವ ಕನ್ನಡ । ನಾಡಿನೊಳು ಕೃಷ್ಣಾತಟದ ಬಳಿ । ಗೂಡಿ ಶ್ರೀನಾಲತ್ತವಾಡವೆನಿಪ್ಪ ಪುರಮಿಹುದು ॥ ನೋಡಲಿದು ವರ ವೀರಶೈವರ । ಬೀಡೆನಿಸಿ ದೇಸಾಯಿಗಳಿಗಂ । ನಾಡಗೌಡರಿಗಾಶ್ರಯಸ್ಥಲಮಾಗಿ ರಾಜಿಪುದು ॥ ೧೦ ॥

ಸುತ್ತುಕಲ್ಲಿನ ಕೋಟೆಯುದರೊಳು । ಕೆತ್ತಿಮಾಡಿದ ಚೆಲುವ ಪ್ರತಿಮೆಗ । ಚಿತ್ತರದೊಳಲ್ಲಲ್ಲಿಗೊಪ್ಪುಗುಮಗುಸೆ ವಪ್ರಗಳು ॥ ಕೊತ್ತಲಗಳುಗಳುಪವನಂಗಳು । ಚಿತ್ತರದ ವಾಪೀತಟಾಕಗ । ಚಿತ್ತನೋಡಿದೊಡತ್ತ ಶೋಭಿಸೆ ತೋರ್ಪುದೀ ಪುರವು ॥ ೧೧ ॥

ಸಂಗಮೇಶಪವಾಡಬಸವರ । ಮಂಗಲಶಿಲಾಮಂಟಪಂಗಳು । ಕಂಗೊಳಿಪವೊಂದೆತ್ತರದ ವೇದಿಕೆಯ ಮೇಲೆರಡು ॥ ಸಿಂಗರದ ಕಲ್ಯಾಣಬಸವನ । ತುಂಗಮಂದಿರವುಂಟು ಪೊಳಲಿನ । ಮುಂಗಡೆಯ ತೋಟದೊಳು ಬಿಲ್ವಕುಜಾವೃತಮದಾಗಿ ॥ ೧೨ ॥

ಬಸವನಾ ಕಲ್ಯಾಣದಿಂ ಕೊನೆ । ಗೊಸೆದು ಸಂಗಮಕೈದುತಿರಲಸ । ವಸದೊಳಿಲ್ಲಿ ಶಿವಾರ್ಚನೆಯನುಂ ಮಾಡಿ ನಾಲ್ವತ್ತು ॥ ಪೊಸಪವಾಡಗಳೆಸಗಿದುದರಿಂ । ಮಿಸುಗುವೀ ನಾಲತ್ತವಾಡವೆ । ನಿಸಿಹುದೀ ಪುರವೆಂದು ಪಿರಿಯರ್ಪೇಳುತಿಹರೊಳಿದು ॥ ೧೩ ॥

ವರಶಿಲಾಶಾಸನಗಳುಂ ಭಾ । ಸುರಮಹಾಲಿಂಗಂಗಳುಂ ಬಂ । ಧುರಶಿವೇತರದೇವತಾನಿಲಯುಂಗಳುಂ ಪಲವು ॥ ಮೆರವವೀ ಪುರದಲ್ಲಿನೆಲದೊಳು । ದೊರಗುಮುರುದೇವಾಲಯುಂಗಳು । ಸುರುಚಿರಜಿನಪ್ರತಿಮೆಗಳು ಮಣ್ಣಡಿವೆಡೆಗಳಲ್ಲಿ ॥ ೧೪ ॥

ಮಾರುತಿಯ ದೇಗುಲಗಳೇಳುಂ । ಟೂರಸುತ್ತಂ ರಮ್ಯತರವಿ । ಸ್ತಾರಮಾದೊಂಬತ್ತುಕೇರಿಗಳಿಂದ ಪದಿನಾಲ್ಕು ॥ ನೂರು ಮನೆಗಳ ಗುಂಪಿನಿಂ ಮೇ । ಣಾರುಸಾವಿರಜನಗಳಿಂ ಕೃಷಿ । ಸಾರವಾಣಿಜ್ಯಂಗಳಿಂದಂ ಮೆರೆದುದಾ ಪುರವು ॥ ೧೫ ॥

ಚಂದಮೆನಲಿಂತೆಸವ ಪುರದೊಳ । ಗೊಂದುಸಾವಿರ ವೀರಶೈವರ । ಮಂದಿರಗಳಿವುಗಳೊಳಗಿಪ್ಪತ್ತೆರಡು ಸುಮಠಗಳು ॥ ಇಂದು ಗಣಿಸಲು ನಾಲ್ಕುಸಾವಿರ । ಮಂದಿ ಶ್ರೀಮದ್ವೀರಶೈವರು । ಕುಂದದಿಹುದರಿನಿದುವೆ ಲಿಂಗಿಗಳೆಡೆಯೆನಿಸುತಿಹುದು ॥ ೧೬ ॥

ಶಿವಮತವನುದ್ಧರಿಸಲೆಂದು । ತ್ಸವದೆ ಶ್ರೀಬಸವೇಶನುದಿಸಿದ । ತವೆ ವಿರಾಜಿಪ ಬಾಗವಾಡಿಗಮುವನನೊಳಕೊಂಡ ॥ ಪ್ರವಿಮಲಶ್ರೀಸಂಗಮೇಶ್ವರ । ನವಿಕಲಕ್ಷೇತ್ರಕೆ ಸಮೀಪಿಸಿ । ಕವಿದ ಸೊಬಗಿಂ ಮೆರೆವ ಪುರಮಿದು ಪೆಸರುವಡೆದಿಹುದು ॥ ೧೭ ॥

ಧನಿಕರಿಂ ಮತಿವಂತರಿಂ ನಯ । ವಿನಯಕರುಣಾಚಿತ್ತರಿಂದಂ । ವಿನುತಗೌರವಶಾಲಿಗಳ ಗುರುಹಿರಿಯರೊರ್ಗಿಂದ ॥ ಘನತರದ ನವ ಪಣ್ಯವೀಥೀ । ಕನದಮಲಸೌಧಾಳಿಯಿಂ ಸೈ । ಪಿನ ವನೆಗಳಿಂದೋದುವನೆಗಳಿ ನೆಸೆವುದೀ ಪುರವು ॥ ೧೮ ॥

ಇಲ್ಲಿ ಶ್ರೀಮಾಹೇಶ್ವರಂ ಕಡು । ಬಲ್ಲಿದಂ ವರವೀರಗೋತ್ರಜ । ನುಲ್ಲಸಿತಕಂಠೀಮಠಾಧ್ಯಕ್ಷಂ ಕ್ರಿಯಾದಕ್ಷಂ ॥ ಸಲ್ಲಲಿತದೊಡ್ಡಾರ್ಯನಾಮಕ । ನೆಲ್ಲರಿಗೆಪ್ರಿಯನಾಗಿ ಲೌಕಿಕ । ದಲ್ಲಿ ಸಾತ್ವಿಕನೆನಿಸಿ ಬಾಳುತ್ತಿರ್ದನೊಳ್ಪಿನಲಿ ॥ ೧೯ ॥

ಕೆಲದ ಸಿದ್ಧಾಪುರದೊಳುಂ ಬಳಿ । ಯೊಳಗೆ ಶೋಭಿಸುವಾರ್ಯಶಂಕರ । ದೊಳುಮಲಂಪಿನ ಗಾಳಪೂಜೆಯೆನಿಪ್ಪ ಗ್ರಾಮದೊಳು ॥ ಸಲೆ ಮಠಂಗಳ್ಪೊಲಗಳುಂ ಮೇ । ಳ್ವಲವೆಡೆಗಳೊಳು ಶಿಷ್ಯನಿಲಯಾ । ವಳಿಯಿವರ ಮನೆತನಕೆ ಮೊದಲಿಂದಿಂದಿಗಿರುತಿಹವು ॥ ೨೦ ॥

ತಂದೆತಾಯ್ಗಳಧೀನತೆಯೊಳುರೆ । ಮಂದಿರದ ಕೆಲಸವನು ಮಾಡುತ । ಬಂಧುಗಳನೊಡಗೊಂಡು ತನ್ಮಠಗಳ ವ್ಯವಸ್ಥೆಯನು ॥ ಚಂದದಿಂದೆಸಗುತ್ತ ಶಿಷ್ಯರ । ವೃಂದಯೋಗಕ್ಷೇಮಮಂ ಕೊಳು । ತಂದದಿಂ ಪರಿಣಮಿಸುತಿರ್ದಂ ಲಿಂಗಪೂಜೆಯೊಳು ॥ ೨೧ ॥

ಈತಗುತ್ತಮತರಪತಿವ್ರತೆ । ಭೂತಕರುಣಾಹೃದ್ವಿರಾಜಿತೆ । ಭೀತಿ ಲಜ್ಜಾ ವಿನಯ ಶಾಂತಿ ವಿವೇಕಪರಿಪೂತೆ ॥ ಭೂತಪತಿಸಂಪ್ರೀತೆ ಸುಕುಲೋ । ದ್ಭೂತೆ ಮತಿಯುತೆ ಸನ್ನುತಶುಚಿ । ಭರ್ತೆ ರುದ್ರಾಂಬಾಖ್ಯೆ ಸತಿಯಾಗಿರ್ದಳೀ ಮಹಿಳೆ ॥ ೨೨ ॥

ಅತಿಥಿಗಳನುಪಚರಿಸುತಾಗ । ಛ್ರುತಿಯ ಸೇವೆಯನೆಸಗುತಂ ಸಮು । ಚಿತಮೆನಲ್ಸತ್ಕರಿಸುತಂ ಪಡೆದತ್ತೆ ಮಾವರನು ॥ ಹಿತವಚನದಿಂ ತನ್ನವರ ನನು । ಮತಿಸುತಂ ಬಿಡದನ್ಯಜನಕುಪ । ಕೃತಿಯ ಮಾಡುತೆ ಬಾಳುತಿರ್ದಳು ನಾಥನೊಳ್ಕೂಡಿ ॥ ೨೩ ॥

ಉಳಿದ ಲಲನೆಯರಂತೆ ಲೋಭದೆ । ಬಳಿ ಸರಿಗೆ ವಂಕಿಗಳ ನೆಲ್ಲವ । ಗಳಿಸಬೇಕೆಂದೆಳಸಲಿಲ್ಲಂ ಬಡತನದೊಳಿರಲುಂ ॥ ನೆಲವನಾಳ್ವವ ನರಸಿಗಿಂ ಮನ । ದೊಳು ಮಹೋತ್ಸವವಂ ತಳೆದು ಪೆಂ । ಗಳಿಗೆ ಧರ್ಮಾರ್ಜ ನೆಯೆ ದಿಟವೆಂದಿರ್ದಳಾ ತರುಣಿ ॥ ೨೪ ॥

ಬಡತನದ ಸಂಸಾರಿಗಳೊಳೀ । ದೃಢತರಸಮಾಧಾನವರ್ತನ । ವೊಡೆದು ಕಾಣದು ಶೀಘ್ರಮದರಿಂ ಬೂದಿ ಮುಚ್ಚಿರ್ದ ॥ ಕಿಡಿಗಳಂತೀ ದಂಪತಿ ಗಳುರೆ । ಮೃಡಸಮಾನಚರಾರ್ಯರೊಪ್ಪುವ । ನಡತೆಯಂ ಬಿಡದಿರ್ದ ರಮಲಾಚಾರಪರರಾಗಿ ॥ ೨೫ ॥

ಪತಿಕುಚಾತ್ರಿತೆಯೆನಿಸಿ ಬಾಳ್ವೀ । ಸತಿಲತೆಯು ಪತಿಸಮರತಿ ಸುಖೋ । ಚಿತಸದುಪಚಾರದೊಳಗಿರ್ದುಂ ಶಿವಕೃಪಾಜಲವು ॥ ವಿತತ ಮೆನಲೊದಗದುದರಿಂದಂ । ಸುತಕುಸುಮಮಂ ಪೆತ್ತು ತನ್ನಯ । ಪತಿಯ ದೃಗ್ಭ್ರಮರಗಳಿಗಾಗಿಸಲಿಲ್ಲ ಸೌಖ್ಯವನು ॥ ೨೬ ॥

ತನುಭವರು ಬಹುದಿನಗಳನಕಂ । ತನಗೊಗೆಯದಿರ್ದುದನು ತತ್ಕುಲ । ವನಿತೆ ಮನದೊಳು ನೆನೆದು ಚಿಂತೆಯೊಳೇನುಮಾಡುವದು ॥ ಕನಕಪರ್ವತ ವಾಸಿ ಮದ್ವ । ರ್ತನಕೊಡಂಬಟ್ಟಿರ್ದೊಡಾತ್ಮಜ । ನನು ಕೊಡದಿರುತ್ತಿರ್ದ ಪನೆ ಪಾಪಾತ್ಮಳಿಹೆನಾನು ॥ ೨೭ ॥

ವಂಚಿಸಿದೆನೋ ನಾಥನಂ ಚರ । ಸಂಚಿತಾರ್ಥವ ಕಳ್ದೆನೋ ಹರಿ । ಗಂಚೆದೇರನಿಗೆರಗಿದೆನೊ ಕುಲದೈವವೆಂದೊಪ್ಪಿ ॥ ಪಂಚಮುಖನಂ ನೆನೆಯ ದಾದೆನೊ ! ಚಂಚಲಿತಖಲಮನಕೆ ಸೋಲುತ । ಸಂಚರಿಸಿದೆನೊ ಭಕ್ತನಿಂದಾದ್ಯ ಥಮಮಾರ್ಗದೊಳು ॥ ೨೮ ॥

ನಾನು ಮಾಡಿದ ದೋಷವೆನ್ನಯ । ಮಾನಸಕೆ ಗೋಚರಿಸದಿರ್ದೊಡು । ವಿೂ ನೆಲದೊಳಾವಾದೊಡುಂ ದೋಷಂಗಳೆನ್ನಿಂದ ॥ ಮಾನವಿಲ್ಲದೆ ಘಟಿಸಿರಲುಬಹು । ದೇನುಮಘಮಿರದಿರ್ದೊಡೀಪ್ಸಿತ । ಹಾನಿಯಿಂತಾದಪುದೆ ಬಹುದುರ್ಭಾಗ್ಯಳಿಹೆನಿಂದು ॥ ೨೯ ॥

ಒಲೆದು ತಳ್ತಮರ್ದಪ್ಪಿ ಚೆಲುವೆಸೆ । ವೆಳೆಯನಂ ನಲುಲಲ್ಲೆಗೈದೆರೆ । ದಲಸದಲೆ ತೊಟ್ಟಲೊಳು ಪಾಸಿದ ಮೃದುಲ ತಲ್ಪದೊಳು ॥ ಮಲಗಿಸಿ ಸುವಸ್ತ್ರವ ಪೊದಿಸಿ ಗು । ಗ್ಗುಲದ ಧೂಮವ ಕೊಟ್ಟು ಸಲೆ ಜೋ । ಗುಳವ ಪಾಡುತೆ ತೂಗುವಂದಂ ದೊರೆವುದೆಂತೆನಗೆ ॥ ೩೦ ॥

ಚಿಕ್ಕಹರೆಯದೊಳೆಳೆಯನಂ ಪೆ । ತ್ತಕ್ಕರದೆ ಮೃದುಕರಗಳಿಂ ವೋ । ಲಕ್ಕೆ ರಯ್ಯನೆ ನೆಗೆಹುತೆತ್ತುತೆ ನಗೆನಗಿಸಿ ನೋಡಿ ॥ ಗಕ್ಕನವನೆಳೆಗಲ್ಲದೊಳು ಮನ । ವುಕ್ಕಿ ಬಾಯಿಟ್ಟಲುಗಿಸುತ್ತಂ । ಜಕ್ಕುಲಿಸಿ ಮುದ್ದಿಸುವದಂ ಪಡೆದಿಲ್ಲ ವಾಂಮೊದಲು ॥ ೩೧ ॥

ಒಂದುಮೊಲೆಯಂ ಬಾಯೊಳಿಟ್ಟೆ । ನ್ನೊಂದು ಕುಚದಗ್ರದೊಳು ಕರಮಂ । ಪೊಂದಿಸುತ ಮೊಲೆಯುಂಬ ಕಂದಗೆ ಕಾಣದಂದದೊಳು ॥ ಮುಂದಲೆಯನುರೆ ಸರಿದ ಮೇಲುದ । ದಿಂದ ಸೊಗಸೆನೆ ಮುಚ್ಚಿಕೊಂಡಾ । ನಂದದೊಳ್ಮೈಮರೆದು ಮೆರೆವಬಲೆಯ ಸುಕೃತಕೆಣೆಯೆ ॥ ೩೨ ॥

ಎನಿತು ಸಿರಿಯಿರಲೇನು ಕಮಲಜ । ನನಿತು ಕಾಲಂಬಾಳಲೇಂ ರತಿ । ಯನು ನಿವಾಳಿಸುವನಿತು ಘನಸೌಂದರ್ಯವಿರಲೇನು ॥ ವನಿತೆಗೀ ಸಂಸಾರದೊಳುವರ । ತನಯನಿಲ್ಲದೊಡವಳ ಜನ್ಮಂ । ತ್ರಿನಯನನ ನೆನೆಯದ ನರತ್ವದವೊಲುನಿರರ್ಥಕವು ॥ ೩೩ ॥

ಇಂತು ಪುತ್ರಾಪೇಕ್ಷೆಯಿಂ ತ । ನ್ನಂತರಂಗದೆ ಪಲವು ಬಗೆಯಿಂ । ಚಿಂತಿಸುವ ಸಮಯದೊಳು ಯೋಚಿಸಿ ಸೈರಣೆಯನಾಂತು ॥ ಕಂತುಹರನಿಂದಲ್ಲದೀಯ । ತ್ಯಂತಚಿತ್ತವ್ಯಾಧಿಯೆನ್ನಿಂ । ದೆಂತು ತೊಲಗುವದಾತನೇ ಕಷ್ಟಪ್ರಹರನಿಹನು ॥ ೩೪ ॥

ಕಾಲಕರ್ಮಂಗಳನು ಮಾಯಾ । ಜಾಲಮಂ ಪರಿಹರಿಸಿ ನತರಂ । ಪಾಲಿಪೀಸರನೆನ್ನಭೀಪ್ಸುವನಿತ್ತು ಪೋಷಿಸನೆ ॥ ಹಾಳುಯೋಚನೆಯೇಕೆ ನುತ್ತಾ । ಬಾಲೆ ಮನದೊಳು ನಿರ್ಧರಿಸಿ ಧೃತ । ಶೂಲನಂ ನೆರೆ ನಂಬಿ ಪೂಜಿಸಲಾದಳೊಲಿದರರೆ ॥ ೩೫ ॥

ಬಡವರಾಗಲಿ ಧನಿಕರಾಗಲಿ । ಪೊಡವಿಯಂ ಪಾಲಿಸುವರಾಗಲಿ । ಕೆಡುಕರಾಗಲಿ ಶೀಲರಾಗಲಿ ಮುನಿಗಳಾಗಿರಲಿ ॥ ಜಡಮತಿಗಳಾಗಲಿ ಕವೀಂ ದ್ರರ । ಗಡಣವಾಗಲಿ ಪುತ್ರರಂ ನಡೆ । ಪಡೆಯಲೆಂದೆಳಸುವರು ಪುತ್ರಾವಶ್ಯ ಮೆನಿತುಂಟೋ ॥ ೩೬ ॥

ಇಳೆಯ ಭೋಗಕ್ಕೆರಗದಿರ್ದೀ । ಲಲನೆಯುಳಿದಂಗನೆಯರಂದದೊ । ಳೆಳೆಯರಂ ತಾನೆಳಸಲಿಲ್ಲಂ ನೋಹದಿಂ ತನ್ನ ॥ ಕುಲವನಭಿವರ್ಧಿಸಲು ಶಿಷ್ಯರ । ಬಳಗಮಂ ಪರಿಪಾಲಿಸಲು ತ । ಕ್ಕಲಘುಗುಣದಣುಗನನು ಬಯಸಿದಳಾ ಮಹಾಸಾಧ್ವಿ ॥ ೩೭ ॥

ಮಕ್ಕಳಾಶೆಗೆ ಯಂತ್ರಮಂತ್ರಾ । ಘಕ್ಕೊಡಂಬಡಲಿಲ್ಲ ಕಡ್ಡಿಯ । ನಿಕ್ಕಿ ಹೊತ್ತಿಗೆಯೊಳು ವಿಚಾರಿಸಲಿಲ್ಲ ಭ್ರಮೆಯಿಂದ ॥ ಸಿಕ್ಕದೇವರಿಗಾತುರಿಸಿ ವೈ । ಯಿಕ್ಕಲಿಲ್ಲಂ ಶಂಭುಲಿಂಗವ । ತಕ್ಕ ವಿಧಿಯಿಂ ಯಜಿಸಿದಳು ಶಿವನಿಷ್ಠೆ ಯೆನಿತುಂಟೋ ॥ ೩೮ ॥

ಇರೆಯಿರುತ ರುದ್ರಾಂಬೆಯೆಮ್ಮಯ । ವರಚರಿತ್ರಾಧೀಶನಂ ನೆರೆ । ಧರಿಸಿದಳ್ಬಸುರೊಳು ತದುತ್ಸಂಭ್ರಮುವನೇನೆಂಬೇಂ ॥ ಶರಣನಂ ತಾಳ್ದಿಹುದರಿಂ ತನ । ಗುರವಣಿಸುವೀ ಭೋಗಮೊಮ್ಮದ । ಪರಿಯನರುಪುವೊಲೋಕರಿಕೆ ತಲೆದೋರ್ದುದಾಕೆಯೊಳು ॥ ೩೯ ॥

ಅರಿಯೆ ವಾಚಕದೋಷವಿಲ್ಲದ । ಸರಸಮೃದುವಚನದ ಮಹಿಮನಂ । ಹರುಷದಿಂದೊಳಕೊಂಡ ಜಠರದ ಮೇಲೆ ಕಡಿಯೆಂಬ ॥ ಬಿರಿಸುಹೆಸರಿನ ಚಿನ್ಹವಿರುವದು । ಸರಿಯುದಲ್ಲೆಂದರಿದು ತಾವೇ । ಸರಿದವೆಂಬಂತಡಗಿದವು ಕಡಿಗಳ್ತದಂಗನೆಯು ॥ ೪೦ ॥

ಘನಕಚೆಯ ಬಸುರೊಳ್ಮಹಾಚಿ । ದ್ಘನನಲಂಪಿಂ ಘನತರಾಕೃತಿ । ಯನು ತಳೆದು ಸೊಗಸಾಗಿ ಬಳೆವುದರಿಂದ ಮಾನಿನಿಯ ॥ ಸ್ತನಯುಗಳ ಜಘನೋದರಂಗಳು । ಘನತೆಯಂ ಪೊಂದುವವೊಲವುಗಳು । ದಿನದಿನ ದೊಳಿನಿಸಿನಿಸು ಬಲಿದವು ಕಂಗೆ ಚೆಲ್ವೆನಿಸಿ ॥ ೪೧ ॥

ಪರಮಸಾತ್ವಿಕಮೂರ್ತಿ ನೆಲೆಗೊಂ । ಡಿರುವ ಕಾರಣಮುದರ ಸಿತ ರುಚಿ । ತರುಣಿಯುದರದೊಳಿರ್ದ ತಾಮಸವೆಂಬ ಕತ್ತಲೆಯ ॥ ಹೊರಗೆಡಹಿ ದಂತವಳ ಕುಚಗಳ । ಸುರುಚಿರಾಗ್ರಂ ಬಾಸೆ ಕರ್ಪಂ । ಧರಿಸಿ ಮೆರೆದವು ನೀಲಮಣಿಗಳ ಬೆಳಗಬೀಳ್ಗಳೆದು ॥ ೪೨ ॥

ಪಳುಕುಗೊಡದೊಳಗಣಸೊಡರಿನಂ । ತೊಳಹೊರಗೆ ಪರಿಶುದ್ಧವೃತ್ತಿ ಯು । ಬೆಳಗಿ ರಾಜಿಪ ರುದ್ರಮಾಂಬೆಯ ಪಾವನೋದರದೆ ॥ ನೆಲಸಿರುವ ಶರಣೇಂದು ರುಚಿಯೊ । ಬ್ಬುಳಿಸಿ ಪೊರಪೊಣ್ಮಿದವೊಲಾಕೆಯ । ಚೆಲುವ ತನು ಬಿಳುಪಾಯ್ತು ಕಣ್ಗೊಗೆ ಕಾಂತಿಯೇರಿದುದು ॥ ೪೩ ॥

ತ್ವರಿತಗತಿಯುಂ ತ್ವರಿತವಾಕ್ಯಂ । ಪಿರಿದನರ್ಘಕ್ರೀಡವಕ್ಕುಂ । ಶರಣ ಮಾತೆಗೆ ಸರಿಯಿದಲ್ಲೆಂದೊರೆದು ಗಿರಿಸುತೆಯು ॥ ಕರುಣದಿಂದೀ ಹರಿಣನಯ ನೆಗೆ । ನೆರೆ ಕಲಿಸಿದಳೊಎಂಬತೆರದಿಂ । ದರಿಯೆ ಮಾಂದ್ಯವನಾಂತವೀಕೆಯ ಸುಗತಿ ವಚನಗಳು ॥ ೪೪ ॥

ಈ ವನಿತೆಗೀ ಬಸುರೆಸೆಯುವಂ । ತೀ ವಸುಂಧರೆಯಲ್ಲಿ ಬೇರಿ । ನ್ನಾವ ಸೀಮಂತಿನಿಯರಿಗುವೊಪ್ಪದಿದೆನುತ್ತೆಲ್ಲ ॥ ಭಾವಭೇದವನರಿದಬಲೆ ಯರು । ಭಾವಿಸುತ್ತಂ ನೋಡಿ ನೆರೆ ಸಂ । ಭಾವಿಸಿದರೀ ರುದ್ರಮಾಂಬೆಯ ದೇಂ ಸುಕೃತವತಿಯೋ ॥ ೪೫ ॥

ತೌರಮನೆಯವರರಿದು ಬಂದೀ । ವಾರಿಜಾನನೆಗುತ್ಸವಂ ಮಿಗೆ । ಶೀರೆ ಕುಪ್ಪಸಗಳನು ಕೊಟ್ಟುಣಿಸಿದರು ನಿಖಿಲರನು ॥ ಬೇರೆನೆಂಟರು ಬಂಧು ಮಿತ್ರರು । ಸೇರಿಶೃಂಗಾರವನೆಸಗಿ ನಲು । ವೇರಿಯುಚಿತವನೀಯಲಾದರ್ಮನ ವೆಳಸಿ ಬಳಿಕ ॥ ೪೬ ॥

ಮೆರೆವಿದೇ ನಾಲತ್ತವಾಡದ । ಹಿರಿಯಮಠದಧಿನಾಯಕಂ ಭಾ । ಸುರತ ಪೋನಿಷ್ಠಂ ಗರಿಷ್ಠಂ ಶಾಂತಮಯಮೂರ್ತಿ ॥ ಪರಮಪಟ್ಟಾಧ್ಯಕ್ಷನುನ್ನತ । ಚರಿತನಾಶ್ರಿತಜನಸಹಾಯಂ । ವಿರತಿವಿತರಣಚಿನ್ನಿವಾಸಂ ಪುಣ್ಯವಾರಾಶಿ ॥ ೪೭ ॥

ಲಸದಸಾಧಾರಣಮಹಿಮನುಂ । ವಿಶದವಿತತಯಶೋಭರಿತದಿ । ಗ್ವಿಸರನಮಲತರಕ್ರಿಯಾಜ್ಞಾನೋಪದೇಶಕನು ॥ ಕುಶಲನಿಚಯಸುಧಾಬ್ಧಿರಾಕಾ । ಶಶಿ ನಿರಸ್ತಮಲತ್ರಯಂ ರಾ । ಜಿಸುತಲಿರ್ದಂ ರಾಮಗಿರಿನಾಮಕನು ಪದೆದಲ್ಲಿ ॥ ೪೮ ॥

ಆ ಮಹಾಮಹಿಮಾನ್ವಿತಂ ಗುಣ । ಧಾಮದೊಡ್ಡಾರ್ಯನಕುಲಗುರು । ಸ್ವಾಮಿಯಿಹುದರಿನಾತನಂ ಬಿನ್ನೈಸಿ ಕರತಂದು ॥ ಪ್ರೇಮದಿಂ ಸತ್ಕರಿಸಿ ವಿಭವದೆ । ರಾಮಣೀಯಕಪಂಚಸೂತ್ರಯು । ತಾಮಲಸುಲಿಂಗವನಿವನು ಮುಂದಿಟ್ಟು ಪ್ರಾರ್ಥಿಸಲು ॥ ೪೯ ॥

ವೇದವೇದಾಂತಾಗಮಪ್ರತಿ । ಪಾದಿತೇಷ್ಟಪವಿತ್ರಲಿಂಗವ । ನಾ ದಯಾಘನನಾರ್ಕಲಶಗಳ ಹೂಡಿ ವಿಧಿವಿಡಿದು ॥ ಸಾದರದೊಳೆಂಟನೆಯ ತಿಂಗಳೊ । ಳೈದೆ ಗರ್ಭಸ್ಥಾರ್ಭಕಂಗೆ ಶು । ಭೋದಯಮೆನಲ್ಧರಿಸಿತದ್ಗರ್ಭಿಣಿಯೊಳಿರಿಸಿದನು ॥ ೫೦ ॥

ಶಿವಮತದ ಪ್ರಾಶಸ್ತ್ಯಮೆನಿತೋ । ಶಿವಮತೀಯಂ ಲಿಂಗಸೂತ್ರವ । ನವಿರತಂ ಪಿಡಿದಳ್ಕರಿಂದೀ ಲಿಂಗಮಂನೆನೆದು ॥ ಅವಿಕಲಮಹಾಲಿಂಗವಪ್ಪಂ । ಭುವನದೊಳು ತತ್ಸೂತ್ರವಗಲಿದೊ । ಡವಗೆ ಭವಿತನಮಪ್ಪುದೆಂದಿಹುದಾಗಮದ ಮತವು ॥ ೫೧ ॥

ಲಿಂಗಸೂತ್ರವನಗಲದಾಂತೀ । ಲಿಂಗದೊಳ್ಮನಮಂ ಮುಳುಂಗಿಸಿ । ಲಿಂಗದರ್ಚನೆ ತದನುಸಂಧಾನಂ ಮಹಾವಿದ್ಯೆ ॥ ತುಂಗಭಕ್ತಿವ್ರತಗಳಿಂದಂ । ಪಿಂಗದನಿಶಂ ಪರಿಣಮಿಸುವೀ । ಲಿಂಗಿಗಪ್ಪುದು ಮುಕ್ತಿ ಜನ್ಮೈಕದೊಳದರಿನಾಗ ॥ ೫೨ ॥

ಅದನಗಲದಂತವಳು ನಿಜಕಂ । ಠದೊಳು ಜಾಗ್ರತೆಯಿಂ ಧರಿಸಿ ಸ । ಮ್ಮುದವೆರಸಿ ಗುರುಲಿಂಗಜಂಗಮಪಾದಪಂಕಜವ ॥ ಹೃದಯದೊಳುನೆನೆದ ರ್ಚಿಸುತ್ತಂ । ಮದನಮರ್ದನನಂ ಭಜಿಸುತಂ । ಸದಮಲತೆಗುಡುತಿರ್ದಳು ದರದೊಳುಳ್ಳಕಂದನಿಗೆ ॥ ೫೩ ॥

ಕರೆಯಬಂದರ್ಪಡೆಯಲಿಕ್ಕೀ । ಸರಸಿರುಹಗಂಧಿಯನು ತೌರವ । ರರಿ ದು ಪದೆದೊಂಬತ್ತನೆಯ ತಿಂಗಳೊಳು ಸಡಗರದೆ ॥ ಬರಿದೆ ಕದನವ ತೆಗೆದು ಕಳಿಸೆನು । ಕರಿಯಲೇತಕೆ ನೀವು ಬಂದಿರಿ । ಮರುಳಿ ಹೋಗಿರಿಯೆಂದು ನುಡಿದಳು ಬಂದವರಿಗತ್ತೆ ॥ ೫೪ ॥

ಮುಳಿದಿಹಳ್ತಿಗೆಯವಳಮಾತೇಂ । ಕಳಿಸುವೆನು ಪೋಕೆಂದು ಮಾವಂ । ತಳುವದಪ್ಪಣೆಯಿಯಲದನನುಸರಿಸಿ ಮನೆಯವರು ॥ ಸಲೆ ಕರಿಯತೀರೆ ಯನುಡಿಸಿ ಕಂ । ಬಳಿಯ ಗರ್ದುಗೆಯಿಕ್ಕಿ ಸಡಗರ । ದೊಳು ಕರೆದು ತದ್ಗರ್ಭಿ ಣಿಯನುರೆಕುಳ್ಳಿರಿಸಿ ಬಳಿಕ ॥ ೫೫ ॥

ವನಿತೆಗುಡಿಯಕ್ಕಿಯನು ಹಾಕುವೆ । ನೆನುತವೋರ್ವಸುಮಂಗಲೆಯು ನಡು । ಮನೆಗೆ ಧಾನ್ಯವ ತರಲು ಪೋಗಲ್ಕನಿತರೊಳಗತ್ತೆ ॥ ಮುನಿಸಿನಿಂದೇ ಳ್ದೊಲೆಯಬೂದಿಯ । ನನುವಿನಿಂ ಬಟ್ಟಲೊಳು ತಂದೀ । ವಿನಯವತಿಯುಡಿ ಯಲ್ಲಿ ತುಂಬಿದಳೆಲ್ಲರೆದುರಿನೊಳು ॥ ೫೬ ॥

ಕೂಡಿದಬಲೆಯರೀ ವಿಕೃತ್ಯವ । ನೋಡಿ ಕಿಡಿಕಿಡಿಯಾಗಿಯೆಲೆಮತಿ । ಗೇಡಿ ನೀಂ ಚಲ್ಲಿದೆಯೆ ಬೂದಿಯ ಹದುಳೆಯುಡಿಯಲ್ಲಿ ॥ ಮಾಡಿದುದದೇ ನಿವಳು ಭೀತೆಗೆ । ಖೋಡಿ ನಿನಗೇಳೇಳುಜನ್ಮಕೆ । ಕೂಡಳಿಂತಹ ಸೊಸೆ ಯೆನುತ್ತಂ ಪಳಿದರಂದರರೇ ॥ ೫೭ ॥

ಎನಿತು ಧೂರ್ತರೊ ನಾರಿಯರು ನಿಜ । ತನಯನಂ ಪೋಷಿಸಿ ಬಳಿಕ ಬಹು । ಧನದ ವೆಚ್ಚಕೆ ಹಣಿಯದೆಲ್ಲರ ಕಾಲ್ಗಳಂ ಪಿಡಿದು ॥ ದಣಿದು ಮದುವೆ ಯಮಾಡಿ ತಂದಾ । ವನಿತೆಯಂ ಮೇಣ್ತನಯನಂ ತಾವ್ । ಮುನಿದವರಿಗತಿ ಹಾನಿಯಾಗಲೊಡರ್ಚುತಿಹರವರು ॥ ೫೮ ॥

ಮಡದಿಯಂ ಮಗನೊಪ್ಪಿ ಪ್ರೀತಿಸಿ । ದೊಡೆ ಪದಪಿನವಳೊಡನೆ ಬಿನದಿಸಿ । ದೊಡೆ ಮುದದಿನುಣಬಡಿಸಿಕೊಂಡೊಡೆ ಮಾತನಾಡಿದೊಡೆ ॥ ದುಡಿದವಳ್ಕಡುದಣಿದುದಕ್ಕಂ । ಬಿಡದೆ ಕನಿಕರದೋರಿದೊಡೆ ಸಿಡಿ । ಮಿಡಿಗೊಳುವರಾ ಪಡೆದ ನಿಗ್ಗರಬಡಿಕೆಯರು ನೆಲದೆ ॥ ೫೯ ॥

ಸೊಸೆ ಮನೆಗೆ ಬಂದೊಡನೆ ಬಿಪ್ಪೆ । ಬ್ಬಿಸಿ ಕೊಸರಿ ಮಾತಾಡುತಂಕ । ಣ್ಕಿಸಿದು ಕಸಮುಸುರೆಗಳ ತೆಗೆವೆಡೆಯಲ್ಲಿ ಪುಡುಪುಡುಕಿ ॥ ಪೊಸತೆನಿಪ ತಪ್ಪುಗಳನನ್ಯರೊ । ಳುಸುರುತಂ ಶರೆಯಾಳಿನಂತು । ಬ್ಬಸದೆ ದುಡಿಸಿಕೊಳುತ್ತಲಿರ್ಪತ್ತೀಳಿಯದತ್ತೆಯರು ॥ ೬೦ ॥

ಬಿಡದೆ ತನ್ನಯ ಮಗಳನೀ ಪರಿ । ಕಡುಹಿನಿಂದವರತ್ತೆ ಪೀಡಿಸಿ । ದುಡಿಸಿಕೊಳುತಿರ್ದೊಡೆ ತನಗೆ ಸಂಕಟಮುದೆಂತಹುದೋ ॥ ದುಡಿಯುಬಂದಾ ತನ್ನ ಸೊಸೆಯಂ । ಪಡೆದವಳಿಗಂತಪ್ಪುದೆಂಬೀ । ಕಡುವಿಚಾರಂ ಪುಟ್ಟಬಾರದಿದೇಕೆ ಹೆಂಗಳಿಗೆ ॥ ೬೧ ॥

ತನುಭವನ ಸುಖವಸ್ತುವೀ ಸೊಸೆ । ತನುಜವಂಶಮಹೀಜಮಿವಳೊ । ಳ್ಕೊನರುತಿಹುದಿವಳಿಂದಮೆನ್ನಯ ಮನೆಗೆ ಭೂಷಣವು ॥ ಘನತರದ ಸದ್ಗುಣಗಳಿವಳೊಳು । ಜನಿಸುವನುವಂ ಪ್ರೇಮದಿಂ ನೆಗ । ಳ್ದನುಪಮುಯಶಂಬಡೆಯಲೆಂದವರೇಕೆ ಯತ್ನಿಸರೋ ॥ ೬೨ ॥

ಪ್ರೀತಿಯಿಂ ಸೊಸೆಯಂ ನೆರೆದು ತನು । ಜಾತೆಯಂದದೆ ಪೊರೆವುತಂ ಕಡು । ನೀತಿಯಿಂದಂ ನಡಿಸಿಕೊಳಬಲ್ಲತ್ತೆಯಿಹ ಮನೆಯು ॥ ಸಾತಿಶಯಮೆನೆ ಶಾಂತಿಯಿಂ ಪ್ರ । ಖ್ಯಾತಿಯಂ ಪೊಂದುವದು ಸಂತತ । ಮೋತು ನೆಲಸುವಳಲ್ಲಿ ಬಿಡದಾನಂದದಿಂ ಲಕ್ಷ್ಮಿ ॥ ೬೩ ॥

ಅತ್ತೆಮಾವಂದಿರು ಭವಾನೀ । ಚಿತ್ತಜಾಂತಕರೆಂದುಮಿಳೆಯೊಳು । ಪೆತ್ತತಾಯ್ತಂದೆಗಳಿಗಿಂದತ್ಯಧಿಕರಿವರೆಂದು ॥ ಮತ್ತಮಾಣ್ಮನೆ ಗುರುವರೇಣ್ಯನೆ । ನುತ್ತ ನಂಬಿ ಸಮರ್ಚಿಸುವ ಸ । ದ್ವೃತ್ತಿಯುಳ್ಳಂಗನೆಯ ಚರಣಂ ಭಾರ್ಗವೀಸದನಂ ॥ ೬೪ ॥

ಗಂಡನಂ ಬಲುಪಿಂದ ಕೈಶರೆ । ಗೊಂಡು ಹಿರಿಯರನರಿಗಳಂದದೆ । ಕಂಡು ಕಂಡವರೊಡನೆ ಕದನಕೆ ಕಾಲುಕೆದರುತ್ತ ॥ ಲಂಡಳೆನ್ನಿಸಿ ಮನೆಯವರನುಳಿ । ದುಂಡು ಗರ್ಜಿಸುತತ್ತೆಮಾವರ । ನಂಡಲಿಸಿ ತಲೆದೆಗೆದು ನಿಂದವಳೇ ನಿರಯಶರಧಿ ॥ ೬೫ ॥

ಮನಕೆ ಸೋಲ್ದದರಂತೆ ಪೋದೊಡೆ । ಬಿನುಗರೊಳು ಬಿನುಗರನು ಮಾಳ್ಪುದು । ಮನವಗೆಲ್ದದನೆಳೆದು ತನ್ನಯ ವಶದೊಳಿರಿಸಿದೊಡೆ ॥ ಘನತೆಗೊಡುವದು ಕಾಯಭೋಗಕೆ । ಮನವನೀಯದೆ ಸದ್ಗತಿಯ ಸಾ । ಧನದೆ ಮನಮಂ ಕೊಡುವ ಸೊಸೆಯತಿಮತಿಯುತೆ ಪುನೀತೆ ॥ ೬೬ ॥

ಅಲರಮಾಲೆ ಹರಿದ್ರಚಂದನ । ಸುಲಲಿತಾಲಂಕಾರವಸನಂ । ಗಳು ನಿಜೇಶನಿಮಿತ್ತಮೆಂದಾನದೆ ವಿಷಯಗಳೊಳು ॥ ಮುಳುಗಿ ತನ್ನಯ ಭೋಗದುಬ್ಬಿಗೆ । ತಳೆದು ಗೌರವದೆಚ್ಚರಿಲ್ಲದೆ । ಬಲಿದ ಮದದಿಂ ಮೆರೆವ ಸೊಸೆಯಿಂ ಮನೆಗೆ ಲೇಸಹುದೇ ॥ ೬೭ ॥

ನಸುವೆಳಗಿನೊಳ್ಕೈಸೊಡರಿನಂ । ತೆಸೆವ ತೋಟಕೆ ಬೇಲಿಯಂದದೆ । ರಸೆಯೊಳೀ ಸಂಸಾರಸುಖಮಾರ್ಗವನು ತೋರಿಸುತೆ ॥ ಹಸಗೆಡದವೊಲ್ಬೆದರಿನಿಂಪಾ । ಲಿಸುವಳತ್ತೆಯೆನುತ್ತರಿದು ಸಂ । ತಸದೆ ಸೇವಿಪ ಸೊಸೆಗೆ ಕೇಡಿಲ್ಲದ ಸೊಗಮುದಕ್ಕುಂ ॥ ೬೮ ॥

ನೋಡಿದಾಗಲೆ ಚಂದಮೆನಿಪುದು । ನಾಡೆ ಪಡೆದುಪಭೋಗಮಂನೆರೆ । ಮಾಡಿದಾಗಳೆ ಮನಕದರುದಾಸೀನಮಾಗುವದು ॥ ಕೂಡಿದಖಿಲ ವಿಷಯಸಮೂಹದ । ಪಾಡದಂತಿಹುದೆಂದರಿದವ । ಳ್ಕೂಡುವಳು ಶಿವಶರಣೆಯರ ಬಳಗವನಿದಂತಿರಲಿ ॥ ೬೯ ॥

ಅತ್ತೆ ತನ್ನುಡಿಯಲ್ಲಿ ಕೋಪಂ । ಬೆತ್ತು ತುಂಬಿದ ಬೂದಿಯಂತಾ । ನೊತ್ತರದೊಳುತ್ಸಾಹಪೂರ್ವಕಮಾಗಿ ರುದ್ರಾಂಬೆ ॥ ಹತ್ತಿಹಿಡಿದುರೆ ಮುಚ್ಚಿಕೊಂಡವ । ಳುತ್ತಮಾಂಘ್ರಿಗೆ ನಮಿಸಿ ನಿಂದೀ । ಹೊತ್ತು ನಾಂ ಬಲು ಧನ್ಯಳಾದೆನೆನುತ್ತಹಿಗ್ಗಿನಲಿ ॥ ೭೦ ॥

ಇದು ವಿಭೂತಿಯಿದಕ್ಕೆ ಜೋಡಾ । ವುದು ಬಿದಿಯ ದುರ್ಲೇಖನಂ ದೊಡ । ವುದು ವಿಭೂತಿ ಪವಿತ್ರಮಿದರಿಂ ತನುಕರಣತತಿಯು ॥ ಸದಮಲತೆ ಯಂ ಪೊಂದುವದು ಸಂ । ಪದವನೀವುದು ಶ್ರೀವಿಭೂತಿಯು । ಪದುಳ ದಿಂದಣಿಮಾದಿಸಿದ್ಧಿಗಳುದಿಪವಿದರಿಂದ ॥ ೨೧ ॥

ಮುಕ್ತಿಮಹಿಲಾವಶಕರಂ ಶಿವ । ಭಕ್ತಿಸಮ್ಯಜ್ಞ್ಮಾಲಮಾಮ್ನಾ । ಯೋಕ್ತಸಕಲತಪಃಕ್ರಿಯಾಸಿದ್ಧಿಪ್ರದಾಯಕವು ॥ ವ್ಯಕ್ತಮೆನೆ ಸಂಸಾರಭೋಗ ವಿ । ರಕ್ತಿಯಂ ದಯೆಪಾಲಿಸೀ ಚಿ । ದ್ಯ್ಯಕ್ತಮಾದ ವಿಭೂತಿದೊರೆದುವೆ ಪುಣ್ಯಫಲಮಲ್ತೆ ॥ ೨೦ ॥

ಮನುಮುನಿಸುರಾಸುರ ಫಣೀಶ್ವರ । ರನುದಿನದೊಳೀ ಶ್ರೀವಿಭೂತಿಯ । ನನುನಯದಿನನುಲೇಪಿಸುತ್ತಂ ಸುಪ್ರತಿಷ್ಠೆಯನು ॥ ಮನದಣಿಯೆ ಸಂಪಾದಿಸಿರೆ ಚಿ । ದ್ಘನವಿಭೂತಿಯು ದೊರೆದ ಕಾರಣ । ಮೆನಗೆ ಪರಮುಜಗದ್ವಿಭೂತಿ ಯದಪ್ಪುದಚ್ಚರಿಯೇ ॥ ೨೩ ॥

ಯುವತಿಯರಿಗುಡಿಯಲ್ಲಿ ಚೆಲುಧಾ । ನ್ಯವನು ತುಂಬುವದುಂಟೆನಗೆ ನೆರೆ । ದವರೊಳೀ ನಮ್ಮತ್ತೆ ದಯೆಯಿಂ ತಾನೆ ಕೈಮುಟ್ಟ ॥ ತವಕಮುಂಮಿಗೆ ಶ್ರೀವಿಭೂತಿಯ । ನವಗಡಿಸದುಡಿಯಲ್ಲಿ ತುಂಬಿದ । ಳವನಿಯೊಳ್ಮದ್ಭಾಗ್ಯಕೆಣೆ ಯಿಲ್ಲೆಂದಳಾ ಮಹಿಳೆ ॥ ೨೪ ॥

ಬಳಿಕ ತನ್ನಂ ಕಳಿಸಬಂದಾ । ಲಲನೆಯರಿಗಂ ಪೇಳ್ದು ವಂದಿಸಿ । ತಳರ್ದು ಜನನೀಗೃಹದೊಳಾ ಭಸಿತವನು ಪ್ರತಿದಿನದೆ ॥ ಸಲೆ ಶಿವಾರ್ಚನೆಯಾದನಂತರ ವೊಲೆದು ಸೇವಿಸಲಾದಳೊಂದಣು । ನೆಲಕೆ ಬೀಳದಹಂಗೆ ಪರತರಭಕ್ತಿ ಭಾವದೊಳು ॥ ೨೫ ॥

ಮುದನಮುದರ್ಚನಭಕ್ತಹೃದಯಂ । ಮುದವನಾಳೆ ಸಮಸ್ತಬಂಧುಸ । ಮುದಯುದಕ್ಷಿಣಲೋಚನಸ್ಫುರಣಂಬಡೆಯೆ ಬಿಡದೆ ॥ ಸುದತಿ ಸೇವಿಪ ಬೂದಿ ಯದು ತೀ । ರಿದ ದಿನವೆ ಸುಖವಾಗಿ ಗುರುವಾ । ರದ ಪ್ರಭಾತಮುಹೂರ್ತ ದೊಳ್ಪೊಣ್ಣೂರೊಳಿಳೆಯರಿಯೆ ॥ ೨೬ ॥

ಶಾಲಿವಾಹನವರಶಕದ ಪದಿ । ನೇಳುನೂರೆಪ್ಪತ್ತಕೊಪ್ಪುವ । ಕೀಲ ಕಾಬ್ದದೊಳುದಯವಾದಂ ಶರಣಪುಂಗವನು ॥ ಮೇಳದರ್ಥೋದಯದೊಳೀ ತಗೆ । ಕೀಲಿಸಿದರಾ ಲಿಂಗಮಂ ಘನ । ಶೀಲೆಯರ್ಕಳು ರುದ್ರಮಾಂಬೆಯ ಕಂಠದಿಂ ತೆಗೆದು ॥ ೭೭ ॥

ಶ್ರೀಮಹಿತಮಾಹೇಶ್ವರಾರ್ಯ । ಸ್ತೋಮಮೊಯ್ಯನೆ ತಣಿದು ಶಾಸ್ತ್ರದ । ನೇಮವಿಡಿದರ್ಭಕಗೆ ಪನ್ನೆರಡನೆಯದಿವಸದೊಳು ॥ ಪ್ರೇಮದಿಂ ವೀರಾರ್ಯ ನೆಂಬೀ । ನಾಮಕರಣಂಗೈಯೆ ಕೂಡಿದ । ಕೋಮಲಾಂಗಿಯರ್ಕೈದೆ ಶಿಶುವಂ ತೊಟ್ಟಿಲೊಳಗಿಟ್ಟು ॥ ೭೮ ॥

ಗುರುಪದಾರ್ಚಕ ಜೋ ಚರಾಧಿಪ । ಚರಣರೇಣುವಿಭೂತಿಧರ ಜೋ । ಪರಮಶಿವಲಿಂಗಾನುಸಂಧಾನಪ್ರಿಯನೆ ಜೋಜೋ ॥ ಹರಗಣಸಭಾಮಾನ್ಯ ಜೋಜೋ । ವರದಬಸವಕುಮಾರ ಜೋಜೋ । ಪರತರಪ್ರಮಥಾನುಕೂಲ ವಿಚಾರಪರ ಜೋಜೋ ॥ ೭೯ ॥

ಚೆನ್ನ ಜೋ ನನ್ನಯ್ಯ ಜೋ ಬುಧ । ಸನ್ನುತಾಚಾರಪ್ರಭುವೆ ಜೋ । ಮುನ್ನಿನೀಬಂಧವನು ಪರಿಹರಿಪಣ್ಣನೇ ಜೋಜೋ ॥ ಕಿನ್ನರಿಯ ಬೊಮ್ಮಯ್ಯ ಜೋಜೋ । ಯೆನ್ನಮಡಿವಾಳಯ್ಯ ಜೋಯೆಂ । ದುನ್ನತಸ್ವರದಿಂದ ಪಾಡುತ ತೂಗಿದರು ನಲಿದು ॥ ೮೦ ॥

ಪರಮಮಂಗಲಲಿಂಗಸಂಗತ । ಸುರುಚಿರಾಂಗ ಚಿದಂಗ ಜಂಗಮ । ಚರಣವಾರಿಜಭೃಂಗ ಸದಯಾಪಾಂಗ ಯಮಿಸಂಗ ॥ ಶರಣಪುಂಗವ ತುಂಗ ಲೀಲಾ । ಕರ ಜಿತಾಂಗಭವಾಂತರಂಗ ವಿ । ತರಣಯುತ ಶರಣಾಗು ವೀರೇಶ್ವರ ಮಹಾಶರಣ ॥ ೮೧ ॥

ಅಂತು ಸಂಧಿ ೨ಕ್ಕೆ ಪದಗಳು ೧೦೬.

ಮಂಗಲಂ.

ಶ್ರೀ ಪ್ರಭವೇ ನಮಃ



## ಮೂರನೆಯ ಸಂಧಿ ಪ್ರಾರಂಭ.

ಸೂಚನೆ ॥ ಪರತರಾಚಾರಕ್ಕೆ ಸಿದ್ಧಾ । ಪುರ ಮಹಾ ಜನರೊಪ್ಪಿ ವೀರೇ । ಶ್ವರನ ಮದುವೆಯನೆಸಗಿದರು ಬಹುಸಂಭ್ರಮಂ ಪೊಣ್ಮೆ ॥ ಪಲ್ಲ ॥

ಪದ ॥ ಎಲು ತೊವಲ್ತುಲೆಯೋಡುಗಳನುರೆ । ತಳೆದು ತ್ರಿರಿದ್ದುಂಬಶುಭವೇಷದ । ಬಲು ಬಡವನಾಗಿರುವ ನಿನ್ನೊಳ್ಸರ್ವಮಂಗಲೆಯು ॥ ಒಲಿದು ಬೆರೆದು ವಿರಾಜಿಪುದರಿಂ । ದಲಘುಶರಣರು ನಿನ್ನ ಪಾದಂ । ಗಳನು ಯಜಿಸುವರೆಂದು ನಿನಗೆರಗುವೆನು ಪೊರೆಯಭವ ॥ ೧ ॥

ಬಸವರಾಜನ ಭಕ್ತಿಯುಂ ಪಿಂ । ದೆಸೆದ ಪರಮಪುರಾತನರ ಘನ । ವಿಶದಯಶಮುಂ ಚೆನ್ನಬಸವನ ಜ್ಞಾನಮಲ್ಲಮನ ॥ ಮಿಸುಪ ವಿರತಿಯು ಸಿರಿಯುಮೀಶ್ವರ । ನಸಮತೇಜಮುಮೊಬ್ಬುಳಿಸಿ ವರ । ಶಿಶುತೆಯಂ ಧರಿಸಿದವೊಲೀ ಸುಕುಮಾರನೊಪ್ಪಿದನು ॥ ೨ ॥

ದೀಪಮಿದು ಜಡಮಿದರ ಬೆಳಗಿನೊ । ಳೀ ಪುದಿದ ನಶ್ವರಜಗಜ್ಜಡ । ರೂಪುಗಳು ಗೋಚರಿಪವಾ ಚಿದ್ದೀಪದಿಂ ಶಿವನ ॥ ವ್ಯಾಪಕಾಜಡಶಾಶ್ವತಾಸಮ । ರೂಪಮದು ತೋರುವದದಕ್ಕೀ । ದೀಪಮಾಭಮೆಯೆಂದಿದಂ ನೆರೆ ನೋಡಿ ನಗುತಿಹನು ॥ ೩ ॥

ಪಿಂದೆ ಬಹುತರಜನ್ಮಗಳೊಳ್ಳೈ । ತಂದು ಸಂಸಾರಾಗ್ನಿಯೊಳ್ಕಡು । ಬೆಂದು ಪೊಂದಿದಸಹ್ಯದುಃಖವನಾತ್ಮದೊಳು ನೆನೆದು ॥ ನೊಂದು ಪೆಳರ್ದಳುವಂದದಿಂದೀ । ಕಂದನಗಿದಳುತಿರ್ದನಸವಸ । ದಿಂದ ಜನನಿಯು ಸೈತಿರಿಸಲೊಂದೊಂದು ಸಮಯದೊಳು ॥ ೪ ॥

ಕ್ಷೋಣಿಯೊಳು ಜನಿಸಿದ ಬಳಿಕ್ಕಂ । ಸ್ಥಾಣುವಂ ಸೇವಿಸಿ ಶಿವಗಣ । ಶ್ರೇಣಿಯಂ ಪೊಂದುವದೆ ಯೋಗಿಗೆ ಭೂಷಣಮಿದೆಂದು ॥ ಮಾಣದರಿದೀ ಶಾಂಘ್ರಿಯುಗಮಂ । ಜಾಣತನದಿಂ ಜಾನಿಪಂದಂ । ಕಾಣುವವೊಲೊಮ್ಮೊಮ್ಮೆ ಕಣ್ಮುಗಿವಂ ಪ್ರಿಯಾರ್ಭಕನು ॥ ೫ ॥

ವೀರಶೈವಾಚಾರವೇ ಈ । ಧಾರುಣಿಯೊಳತ್ಯಧಿಕಮೆಂಬುದ । ತೋರುವಂದದೆ ತೋಳ್ಗಳಂ ಬಿಡದೆತ್ತುವಂ ಮತ್ತೆ ॥ ಸಾರಭಕ್ತಿಯನಿಂತು ಪಿಡಿವೆನು । ಮೀರದಿಂತೆಂಬಂತೆ ಕಂದಂ । ಚಾರುಕರಮಂ ಮುಷ್ಟಿಗೈದೆಸೆದಂ ಪೊಡರ್ಪಿಂದ ॥ ೬ ॥

ಜಂಗಮಾಂಘ್ರಿಯ ದಿವ್ಯತೀರ್ಥವ । ಪಿಂಗದಿಂತಾಂ ಸೇವಿಸುವೆನೆಂ । ಬಿಂಗಿತವನರುಪುವವೊಲೀ ಸುಕುಮಾರಕಂ ತನ್ನ ॥ ಅಂಗುಲಿಗಳಂ ಬಾಯೊಳಿಟ್ಟು ಕ । ಡಂಗಿ ಪೀರ್ವಂ ಸ್ತನ್ಯಮಂ ತ । ಳ್ತಂಗವಣಿಸದೆ ಮರೆದು ತತ್ಸುಖಭರದೊಳೊಮ್ಮೊಮ್ಮೆ ॥ ೭ ॥

ಹೇಸಿಕೆಯ ಮಾಯಾಪ್ರಪಂಚದ । ಮೋಸಮಂ ತಿಳಿಯದೆ ಜಗಂಬಲು । ರೋಸಿ ಬಳಲುವದಾಗಳಿದರೊಳು ಸಿಲುಕಿ ನಾನಿದನು ॥ ಲೇಸುಮಿಗೆಯಿಂತೊದೆವೆನೆಂಬವೊ । ಲಾಸರಿಯದಂಘ್ರಿಗಳನಾಡಿಪ । ಕೂಸಿದೇಂ ಕಂಗೆಸೆದುದೋ ರಮಣೀಯಮೆಂದೆನಿಸಿ ॥ ೮ ॥

ಅಕ್ಕರಿಂ ಸೋಗಿಲೊಳವಚಿ ಮೇ । ಲಕ್ಕೆ ಕುಪ್ಪಸವೋಸರಿಸಿ ಪಾ । ಲೊಕ್ಕಿಸುತೆ ಮೈಜುಮ್ಮೆನಲ್ಮೊಲೆಗೊಟ್ಟು ಶರಗಿಂದ ॥ ಮಿಕ್ಕವರ್ಕಣ್ಣಿಕ್ಕದಂದದೆ । ತಕ್ಕನಿತು ಮರೆಗೈದುಣಿಸಿ ಮನ । ವುಕ್ಕಿ ಮುದ್ದಿಸಿ ತೊಟ್ಟಲೊಳು ತೂಗುವಳು ರುದ್ರಾಂಬೆ ॥ ೯ ॥

ತಾನು ಮುಖಮಂ ತೊಳೆದು ಭಸಿತವ । ನೂನಮಿಲ್ಲದೆ ಧರಿಸಿಕೊಂಡಾ । ಮಾನಿನೀಮಣಿ ನಿಜಕುಮಾರಗೆ ಭಸ್ಮಮಂ ಧರಿಸಿ ॥ ಸಾನುರಾಗದೊಳಾವಗಂ ಸ್ತನ । ಪಾನಮಂ ಮಾಡಿಸುತಲಿರ್ದಳು । ಸೂನುವಿನ ಪುಣ್ಯಮಿದು ಮುಂದೇಳನೆಯ ತಿಂಗಳೊಳು ॥ ೧೦ ॥

ಕರೆಯಬಂದವರೊಡನೆ ತವರವ । ರರಿದು ತ್ರೊಟ್ಟಿಲು ಬಟ್ಟಿಲಂದುಗೆ । ಯುರಳೆಲೆಯುಲರ್ಗುಂಡು ಬಿಂದಲಿಯಂಗಿಪೊದಲಾದ ॥ ಪರಿಪರಿಯ ದಿನಸಿತ್ತು ಕಳಿಸಿದ । ರುರುವಿಭವದಿಂ ಪೆತ್ತದಿಬ್ಬಣ । ವೆರಸಿ ತಾಯ್ಮಕ್ಕಳನು ನಡೆ ನಾಲತ್ತ ವಾಡಕ್ಕೆ ॥ ೧೧ ॥

ಒಗುವ ಜೊಲ್ಲೊಳೆವಲ್ಗಳಿಂಪಿನ । ನಗೆ ಪೊಳೆವ ಗಲ್ಲಗಳು ಚೆಂದುಟ । ಬಗೆಗೊಳಿಪ ಭಸಿತದ ಪಣೆ ಪೊದಳ್ವಂಬೆಗಾಲ್ನಡಿಗೆ ॥ ಸೊಗಸುಮಿಗೆ ದಾ ದಾಯೆನಿಪ ನುಡಿ । ಯೊಗಪಿನ ತೊದಲ್ವಾತು ದಟ್ಟಡಿ । ಬಗೆಬಗೆಯ ಬಿನದ ಗಳೆಸೆಯೆ ಬಳೆದಂ ಕುಮಾರಕನು ॥ ೧೨ ॥

ನೆರೆದ ಬಾಲ್ಯದೊಳುಳಿದ ಹುಡುಗರ । ತೆರದೆ ಬಾಲಕ್ರೀಡೆಯೊಳ್ನಡೆ । ತಿರುಗಲಿಲ್ಲೀ ಬಾಲಕಂ ಕಿಡಿಗೇಡಿಯೆಂದೆನಿಸಿ ॥ ಹರಲಿಯಂ ಪೊರಲಿಲ್ಲ ಪಿಶು ನತೆ । ಪುರುಡು ಪುಸಿ ಕಳವುರ್ಕು ಕುಟಲತೆ । ಬಿರುನುಡಿ ನುಸುಳ್ವಗಳಗಳಿ ಗೊಂದಿನಿಸೆರಗಲಿಲ್ಲ ॥ ೧೩ ॥

ಸಾಲೆಯೊಳು ಶಿಕ್ಷಕನ ಮಾತಂ । ಕೇಳುತೊಳ್ಪಿಂ ಕಲಿಪುತಿರ್ದನು । ಡಾಳಹುಡುಗರ ಸಂಗದೊಳು ಸಿಗಲಿಲ್ಲಮೆಂದೆಂದು ॥ ಹೇಳಿದಾ ವಿಷಯವನು ಮರೆಯದೆ । ವೇಳೆಯಂ ಸುಮ್ಮನೆ ಕಳೆಯದನು । ಕೂಲಮೆನೆ ಪಿತೃಭಕ್ತಿ ಯಿಂದಂ ಮೆರೆದನೀ ಸುತನು ॥ ೧೪ ॥

ಕಾಡಲಿಲ್ಲಂ ತಂದೆತಾಯ್ಗಳ । ಬೇಡಲಿಲ್ಲಂ ರಮ್ಯವಸ್ತುವ । ನಾಡಲಿಲ್ಲಂ ನಿಷ್ಠುರವನನುಚಿತವ ಮರೆದೊಮ್ಮೆ ॥ ಮಾಡಲಿಲ್ಲಂ ಕೆಟ್ಟಕೆಲಸವ । ಕೂಡ ಲಿಲ್ಲಂ ದುಷ್ಟಜನದೊಳು । ನೋಡಲಿಲ್ಲಂ ಪರಪದಾರ್ಥವನೀ ಕುಮಾರ ಕನು ॥ ೧೫ ॥

ಇಂತು ಸುಗುಣಗಳಿಂದ ಬಳೆವು । ತ್ತಂತರಿಸದೋದುವ ಕುಮಾರಗೆ । ಸಂತಸದೆ ಶ್ರೀವೀರಮಾಹೇಶ್ವರಸುದೀಕ್ಷೆಯನು ॥ ಶಾಂತಿಸಮನಿಸೆ ಕೊಡಿಸ ಬೇಕೆಂ । ದಂತರಂಗದೆ ಭಾವಿಸುತ್ತಂ । ತಾಂ ತಳುವದೊದಗಿಸಿದನಯ್ಯನವಶ್ಯ ವಸ್ತುಗಳ ॥ ೧೬ ॥

at what age ?



ಲಿಂಗಮಂ ಮೊದಲಿತ್ತ ಕುಲಗುರು । ಪುಂಗವಂಗಿವನೆರಗಿ ಪ್ರಾರ್ಥಿಸೆ । ತುಂಗಕರುಣಾರಸಕಟಾಕ್ಷದಿನೀಕ್ಷಿಸುತ್ತೊಪ್ಪಿ ॥ ಮಂಗಲಮುಹೂರ್ತದೊಳವಂ ಭವ । ಭಂಗಕರವರದೀಕ್ಷೆಯಂ ಶ್ರುತಿ । ಸಾಂಗಮೆನೆ ವೀರಾರ್ಯಗಿತ್ತಂ ಧರ್ಮಿಗಳು ನಲಿಯೆ ॥ ೧೭ ॥

ಕೆಲವು ದಿನಮಿವನೊಲಿದು ಸಾಲೆಯೊ । ಳೆಳಸಿ ಕಲಿಯುವ ವಿದ್ಯೆ ಮುಗಿದುದು । ಮೊಳೆವ ಜವ್ವನವೊದಗಿದುದಿವಂಗಾಗ ದೊಡ್ಡಯನು ॥ ಸ್ವಲ್ಪ ತ್ವದನುಜರು ಕೂಡಿನಡೆಯದೆ । ಪದುಳವೆರಸಿ ವಿಭಕ್ತರಾದರು । ಪೊಲಮನೆಗಳಂ ಪಂಚಿಕೊಂಡರ್ಸಪ್ರಮಾಣದೊಳು ॥ ೧೮ ॥

ವಿನಯಮಾನಸನಾದ ದೊಡ್ಡಾ । ರ್ಯನಿಗೆ ನಮ್ಮ ಚರಿತ್ರನಾಯಕ । ನೆನಿಸಿರುವ ವೀರಾರ್ಯನುಂ ಮಲ್ಲೇಶ್ವರಾಭಿಧನುಂ ॥ ಘನತರದ ಪ್ರಭುನಾಮನಿಂತೀ । ತನಯರಿರ್ದರ್ಮೂವರಿವರನು । ಮಿನಿಯಳನು ಮೊಡಗೊಂಡನಂ ಸಂಸಾರವೆಸಗುತ್ತ ॥ ೧೯ ॥

ಬಾಳುತಿರೆ ಮನೆತನದ ವೆಚ್ಚಕೆ । ಪೇಳಲೇನಾತನ ದುಡಿಮೆಯದು । ಸಾಲದುದರಿಂ ತನ್ನ ಪಾಲಿನ ಪೊಲಗಳನ್ಯರಿಗೆ । ಸಾಲದೊಳು ಮಾಡಾಟವಾದವು । ಜೋಳಿಗೆಯ ಬಲದಿಂ ಕುಟುಂಬವ । ಪಾಲಿಸುತ್ತಿರ್ದಂ ತ್ವನ್ವರ್ಮನೆಯಾಗಿ ಬಡತನಕ್ಕೆ ॥ ೨೦ ॥

ಬಡತನದ ಕಷ್ಟವನು ಸೈರಿಸಿ । ಮಡದಿಮಕ್ಕಳ ಪೋಷಣಾರ್ಥಂ ದುಡಿವ ತಂದೆಯ ಶ್ರಮವ ನಿರುಕಿಸಿ ತನ್ನ ಮನದಲ್ಲಿ ॥ ಮಿಡುಕುತಿರ್ದಂ ತಚ್ಛ್ರಮಕೆ ಕೈ । ಗೊಡಲುಬೇಕೆಂದೆಳಸಿ ಕಜ್ಜವ । ಪುಡುಕುತಿರ್ದಂ ವೀರನಾಮಂ ಪಲವು ಬಗೆಯಿಂದ ॥ ೨೧ ॥

ಅನಿತರೊಳು ಸಿದ್ಧಾಪುರದ ಸ । ಜ್ಜನರು ತಮ್ಮೂರಲ್ಲಿ ಜನರಿಗೆ । ವಿನುತಶಿವಧರ್ಮವನು ಹುಡುಗರಿಗೋದುಬರಹವನು ॥ ಮನವೊಲಿದು ಸಲೆ ಕಲಿಸಬಲ್ಲತಿ । ವಿನಯಗುಣಿಯೆನಿಸುವ ಸುಶಿಕ್ಷಕ । ನನು ಪುಡುಕಿ ತರಬೇಕೆನುತ್ತಂ ಕೂಡಿ ಯೋಚಿಸುತ ॥ ೨೨ ॥

ವೀರನಾಮನ ವಿನಯವಿದ್ಯಾ । ಚಾರಕರುಣಾದ್ಯಖಿಲಸದ್ಗುಣ । ವಾರ ಮಂ ದೊಡ್ಡಾರ್ಯನ ದರಿದ್ರತ್ವಮಂ ಬಗೆದು ॥ ಬೇರೆ ಪುಡುಕುವದೇತಕಿವನೆ । ಮ್ಮೂರಮಠದಾರ್ಯನುಮಿಹನು ಮನ । ವಾರೆ ಸಾಗುವದೀತನಿಂದೀ ಕಾರ್ಯ ವೆಂದೆಣಿಸಿ ॥ ೨೩ ॥

ತವಕದಿಂ ನಿಯಮಿಸಿದರಾ ಕಾ । ರ್ಯವನವರು ವೀರಾರ್ಯಗೀತಂ । ತವೆ ತದುದ್ಯೋಗಂಗಳೊಳ್ಸರ್ವರಿಗೆ ಬೇಕಾಗಿ ॥ ಸವೆಯದ ಯಶೋಭಾಗಿ ಯೆನಿಸಿದ । ನವರು ಧನಧಾನ್ಯಾದಿಗಳಿನೊಲಿ । ದಿವರಿಗಂ ನೆರವಾಗತೊಡಗಿದ ರೇಕಭಾವದಲಿ ॥ ೨೪ ॥

ಕೆಲವು ದಿನಮಾವೂರೊಳೋದಂ । ಕಲಿಸುತಿರಲಲ್ಲಿಯ ಪ್ರಮುಖ ಜನ । ರೊಲಿದಿವನ ಮದುವೆಯನು ಮಾಡಲುಬೇಕೆನುತ ಬಗೆದು ॥ ಕುಲ ಗುರುವಿನಂ ಪಿತನನಿಪ್ಪ । ರ್ಕಳನೊಡಂಗೊಂಡಳ್ಕರಿಂದಂ । ಪಲವೆಡೆಗಳೊಳ್ಕ ನ್ಯೆಯಂ ನೋಡುತ್ತ ಪರಿತಂದು ॥ ೨೫ ॥

ಬಿದರಕುಂದಿಯೆನಿಪ್ಪಸದ್ಗ್ರಾ । ಮದೊಳು ವರಮಾಹೇಶವಂಶದೊ । ಳುದಿಸಿ ಕಡುಚೆಲ್ವಿಂದೆಸೆವ ಗುರುದೇವಿಯೆಂಬೋರ್ವ ॥ ಸದ್ಗುಣದ ಕನ್ಯೆ ಯನು ನಿರುಕಿಸಿ । ಹೃದಯದೊಳೊಡಂಬಟ್ಟು ನಿಶ್ಚಯಿ । ಸಿದರು ತತ್ಪಿತನಿಂದ ವಾಗ್ದಾನವನು ಪಡೆದಿವರು ॥ ೨೬ ॥

ಮರುಳಿ ಸಿದ್ಧಾಪುರಕೆ ಬಂದೀ । ಹಿರಿಯರಾ ದೊಡ್ಡಯನಮಠಮಂ । ಭರದೆ ಸಾರಣೆಕಾರಣೆಗಳಿಂ ಚೆಲ್ವೆಸಗಿ ಬಿಡದೆ ॥ ಹರುಷದಿಂದಾವೂರನಾರೀ । ಪುರುಷರೆಲ್ಲರ್ತಮ್ಮಕುಲದೇ । ವರಮಹೋತ್ಸವದಂತರಿದು ನೆರೆದರ್ವಿಜೃಂಭಿ ಸುತೆ ॥ ೨೭ ॥

ಸಲೆ ಹರಿದ್ರವ ಕುಂಕುಮವ ತಂ । ಡುಲವ ಹಿಟ್ಟುಪ್ಪೆಣ್ಣೆ ತುಪ್ಪಂ । ಗಳ ನು ಸಕ್ಕರೆ ಬೆಲ್ಲ ಕೊಬ್ಬರಿ ಬೇಳೆ ಕಾರಗಳ ॥ ಎಲೆಯಡಕೆ ಹುಳಿ ತೆಂಗುಗಳ ನಿ । ನ್ನುಳಿದ ಸಾಮಗ್ರಿಗಳನೆಲ್ಲವ । ನಲಸದಲೆ ಸಂಗ್ರಹಿಸಿದರಿವರ್ತಮ್ಮ ತಮ್ಮೊಳಗೆ ॥ ೨೮ ॥

8/100

ಬರಸಿದರು ಪತ್ರಿಕೆಗಳಂ ತಾವ್ । ತರಿಸಿದರು ಬಹುವಾದ್ಯದವರಂ । ಕರಸಿದರು ನಂಟರನು ಬಳಗವನಿಷ್ಟಮಿತ್ರರನು ॥ ಮೆರಸಿದರು ಗಣತಿಂಥಿಣಿ ಯನಾ । ಚರಿಸಿದರ್ಸತ್ಕಾರಮಂ ಬಿಡ । ದಿರಿಸಿದರ್ಘನಸಂಭ್ರಮವನೀ ಪೂರ ಜನರೆಲ್ಲ ॥ ೨೯ ॥

ಗುಳಿಗೆಯಂ ಕೆಲವಬಲೆಯರು ಹ । ಪ್ಪಳಗಳಂ ಕೆಲತರುಣಿಯರು ಕೆಲ । ಕೆಲಮಹಿಳೆಯರು ಸಣ್ಣಶಾವಿಗೆಸೆಂಡಿಗೆಯನೆಲ್ಲ ॥ ಕೆಲಬರುಪ್ಪಿನಕಾಯ್ಗ ಳಂ ಮೇ । ಣ್ಬಲಿದ ಕುಂಬಳಕಾಯ್ಗಳಂ ಪೊ । ತ್ತೊಲೆದು ತಾವೇ ತಂದರಾರಂ ಕೇಳದೊರೆಯದಲೆ ॥ ೩೦ ॥

ತಿಳಿಯೆ ನಿಜಪುತ್ರರವಿವಾಹದೊ । ಳುಳಿಸಿಕೊಳ್ಳುವದುಂಟು ತಮ್ಮಯ । ನಿಳಯದೊಳಗುಳ್ಳೆಲ್ಲ ಸಾಮಗ್ರಿಗಳು ಪೋಕೆಂದು ॥ ಲಲನೆಯರ್ಕಳ್ಸಹಿತವಿೂ ಬಗೆ । ಯೊಳು ಬಿಡದೆ ಹುರಿದುಂಬಿ ನಿಲ್ವಡೆ । ಚೆಲುವ ವೀರಣನೇಂ ಮರುಳು ಗೈದಿರ್ದನೋ ಜನಕೆ ॥ ೩೧ ॥

ಬರಿದೆ ಸೋಲುವದುಂಟೆ ಜನರಾ । ಪುರುಷನಿವರಿಗೆ ತಂದೆ ಮಿತ್ರಂ । ಗುರುಸಹೋದರನಾಗಿ ಬಹುಕಲ್ಯಾಣಚಿಂತನವ ॥ ಪರಮವಿಶ್ವಾಸವನು ಶಾಸ್ತ್ರೋ । ತ್ಕರದ ಬೋಧವನುರೆಸಹಾಯವ । ನರಿದೆಸಗುತಿರ್ದಂ ಗುಣಂ ಸೌಖ್ಯದಮಿದಂತಿರಲಿ ॥ ೩೨ ॥

ಅಲೆವ ಧವಳಾರುಣಪತಾಕಾ । ವಳಿಗಳಿಂ ಮೇಲ್ಕಟ್ಟನಿಂದಂ । ತಳಿರ ತೋರಣಗಳಸೊಬಗಿನಿಂ ಕನ್ನಡಿಗಳಿಂದ ॥ ಅಲರಮಾಲೆಗಳಿಂದ ಬಿಣ್ಣೊನೆ । ದಳೆದಬಾಳೆಯಕಂಬಗಳಬ । ಲ್ಬಳಗದಿಂ ರಮಣೀಯಮೆನೆ ರಚಿಸಿದರು ಮಂಟಪವ ॥ ೩೩ ॥

ಮಂದಗಮನೆಯರಬ್ಜಗಂಧಿಯ । ರಿಂದುಮುಖಿಯರ್ಕೋಕಕುಚೆಯ ರು । ಕುಂದರದನೆಯರಂಗಭವದರ್ಪಣಕಪೋಲೆಯರು ॥ ಸುಂದರಾಂಗಿಯರಳಿ ಕಬರಿಯರು । ಚೆಂದುಟಯರಮಣೀಮಣಿಯರರ । ವಿಂದಲೋಚನಯುಗಳೆಯರು ಕಲಕೀರವಾಣಿಯರು ॥ ೩೪ ॥

ಕಲಶಕುಚಯುಗಭರಕೆ ಬಡನಡು । ಬಳುಕೆ ಜಘನಂ ಪೊಡರೆ ನೂಪುರ । ಮುಲಿಯೆ ಸುತ್ತಂ ಚಂದ್ರಿಕಾಚಂಚಲಕಟಾಕ್ಷಗಳು ॥ ಪೊಳೆಯೆ ಕಚಗಂಧಕ್ಕೆ ಭ್ರಮರಂ । ಗಳು ಭರದೆ ಮೊರೆದೆರಗೆ ವಿಭವಂ । ದಳೆದು ಪರಿತಂದರ್ವಿವಾಹಸುಮಂಟಪಕೆ ಮುದದೆ ॥ ೩೫ ॥

ಮತಿಯುತರ್ಬಹುಶಾಸ್ತ್ರಲೌಕಿಕ । ಚತುರರುಂ ರಸಿಕರ್ಕಳತ್ಯೂ । ರ್ಜಿತವಿಚಾರಿಗಳಾರ್ಯಧರ್ಮಪರಾಯಣೋತ್ತಮರು ॥ ವಿತತಕೀರ್ತನ ಗಾಯನಕಲಾ । ಪ್ರತಿವಿದಗ್ಧರು ಕಾರ್ಯದಕ್ಷರು । ನುತಧನಾಢ್ಯರ್ಬಂದರೀ ಹಂದರಕೆ ಚಂದಮೆನೆ ॥ ೩೬ ॥

ವನದವೊಲ್ಪ್ರಮದಾಳಿರಂಜಿತ । ಮನಿಮಿಷಾಲಯದಂತೆ ಸುಮನೋ । ವಿನುತರಂಭಾಸಂಭ್ರಮಂ ಗೀರ್ವಾಣಪಥದಂತೆ ॥ ಘನಗುರುಕವಿಪ್ರಯುತ ಮುಂ ವಾ । ಗ್ವನಿತೆಯಂತೆ ಪ್ರವಾಲಶೋಭಿತ । ಮೆನೆ ವಿರಾಜಿಸಿದುದು ವಿವಾಹನಿಕೇತನಮದಂದು ॥ ೩೭ ॥

ಮಿಸುಪ ವಿಚಕಿಲಮಾಲೆಯಂ ವಿರ । ಚಿಸುತ ಸಿರಿಕಂಡವನು ತೇವು । ತ್ತೊಸೆದು ಕಲಶವ ತುಂಬುತಂ ಸೇಸೆಯನು ಹುಯ್ಯುತ್ತ ॥ ಪೊಸದುಕೂಲ ಹರಿದ್ರಕುಂಕುಮ । ಕುಸುಮಪರಿಮಳತೈಲದರ್ಪಣ । ಭಸಿತಗಳನಳವಡಿಸುತಿರ್ದರ್ಸುಂದರಾಂಗಿಯರು ॥ ೩೮ ॥

ಮಧು ಘೃತಂ ಜವೆ ತಂತು ಕಳಮಂ । ದಧಿ ಕಚೂರಂ ಪೂರ್ಣಕುಂಭಂ । ಸುಧೆರಸಾಲಂ ಗುಗ್ಗುಲಂ ಕದಳೀಫಲಂ ದೂರ್ವೆ ॥ ಮಧುರಗಂಡೋಲಾದ್ಯಖಿಲಸ । ದ್ವಿಧಿಗವಶ್ಯಪದಾರ್ಥಗಳನಾ । ವಿಧುಮುಖಿಯರಳವಡಿಸಿದರ್ಜಾಗ್ರತೆಯನಾಂತಲ್ಲಿ ॥ ೩೯ ॥

ಕವಿದ ಮಂಗಲವಾದ್ಯರವಮದು । ಕಿವಿಗೆ ಸೊದೆಯೆನಲಿಂಪುಗುಡುತಿರೆ । ವಿವಿಧಸುವಿನೋದಂಗಳೆಲ್ಲರೊಳೊಡೆದು ಕಾಣುತಿರೆ ॥ ಯುವತಿಯುರು ದನಿಗೂಡಿ ಪಾಡುವ । ಸವಿಗೆ ಪುಳಕಾಂಕುರವಮುದಿಸಲು । ತ್ಸವಸರಸಸಲ್ಲಾಪಗಳು ಚಿತ್ತಂಗೊಳುತಮಿರಲು ॥ ೪೦ ॥

ಕದಕದಿಪ ವಕ್ಷೋಜತಟದೊಳು । ಪುದಿದ ಚಂದನಕರ್ದಮಂ ಬಿರಿ । ದುದುರುತಿರೆ ಧಮ್ಮಿಲ್ಲದಿಂ ಕುಸುಮಗಳು ಸುರಿವುತಿರೆ ॥ ಕದಪಿನೊಳು ಮಣಿ ಕುಂಡಲದ ಬೆಳ । ಗುದಿಸಿ ಚಲಿಸುತ್ತಿರೆ ವಿಜೃಂಭಿಸಿ । ರದನಧವಲದ್ಯೋತಿ ಮುಂಬರೆಸರಸವಾಡುತ್ತ ॥ ೪೧ ॥

ವರಸುಮಂಗಲೆಯರ್ಕಳುತ್ಸವ। ವೆರಸಿ ಗುರುದೇವಿಯನು ವೀರೇ। ಶ್ವರ ನ್ನಾನ ಮಂಟಪವ ಕರೆತಂದರಿಸಿನವ ಬೊಳೆದು ॥ ಪರಿಮಳಾಂಬುವಿನಿಂ ಮಿನಿಸಿ ಭಾ । ಸುರವಸನಭೂಷಣಗಳಿನಲಂ । ಕರಿಸಿ ಭಸಿತವ ಧರಿಸಿ ಗಂಧವ ಕುಂಕುಮವನಿಟ್ಟು ॥ ೪೨ ॥

ಪರಿಮಳಿಪ ಬಿರುಮುಗುಳಮಾಲೆಯ । ನುರುತರದ ಪೂದಂಡೆಯಂ ಸಡ । ಗರದೊಳರವಿಂದಾಕ್ಷಿಯರ್ಕಳ್ಧರಿಸಿದರು ಬಳಿಕ ॥ ಹರಸುತನವೊಲ್ಮೆರೆವ ವೀರೇ । ಶ್ವರನಿಗಂ ಬಾಸಿಗವ ಮಾವಂ । ಪರಸುತಂ ಸೂಡಿದನವರ ನಾನೇಸುಬಣ್ಣಿಸಲಿ ॥ ೪೩ ॥

ಹರಭವಾನಿಯರೆಂಬೆನೇ ಗಲ । ಗರಳಚಂಡಹತಿಗಳವಿಲ್ಲಂ । ಹರಿ ರಮೆಯರೆಂಬೆನೆ ಕುಟಿಲತಾಚಪಲತೆಗಳಿಲ್ಲ ॥ ಮೆರೆವಜ ಸರಸ್ವತಿಯರೆಂಬೆನೆ । ಪಿರಿಯ ಪುಸಿ ವಿದ್ಯಾಮದಗಳಿ । ಲ್ಲೊರೆಯಲೇನೀ ನಿಷ್ಕಲಂಕವಧೂವರರ ಸೊಬಗ ॥ ೪೪ ॥

ಗುರುಹಿರಿಯರಾಜ್ಞಾನುಸಾರಂ । ಪರತರಶ್ರೀವೀರಮಾಹೇ । ಶ್ವರನಿಕರ ಕಭಿನಮಿಸಿ ಫಲಪುಷ್ಪಾದಿಗಳನಿಟ್ಟು ॥ ಪುರಮಥನನಂ ನೆನೆವುತ ವಧೂ ವರರು ಷಟ್ಕಲಶಗಳೆದುರಿನೊಳು । ಹರುಷದಿಂ ಮಂಡಿಸಿದರಾಚಾರ್ಯನಿಗೆ ಮೈಯಿಕ್ಕಿ ॥ ೪೫ ॥

ಒಲವಿನಿಂದಾ ಗುರುವರಂ ಷ । ಟ್ಕಲಶಪರಿವೃತಸೂತ್ರಮಂ ಕೊ । ಟ್ಟಲಘುವಿಧಿಗನುಸರಿಸಿ ನಿಯಮಿತಶುಭಮುಹೂರ್ತದೊಳು ॥ ಸುಲಲಿತಶ್ರುತಿ ಘೋಷಮುಣ್ಮಿರೆ । ಪಲವು ವಾದ್ಯಂಗಳ್ಮೊಳಗೆ ಬಲು । ಪೊಳೆವಮಂಗಲಸೂತ್ರ ಧಾರಣಪೂರ್ವಕಂ ನೋಡಿ ॥ ೪೬ ॥

ಜಯಜಯಮಹಾದೇವ ಎಂಬೀ । ಜಯನಿನಾದಂ ಮಿಸುಗೆ ಸತತಮ । ಕ್ಷಯಸುಖಂಗುಡುವಕ್ಷತಾರೋಪಣವನುರೆಮಾಡಿ ॥ ಕ್ರಿಯೆಗಳೆಲ್ಲವ ತೀರ್ಚಿ ಶುಭಮೆನೆ । ದಯೆಯೊಳಾಶೀರ್ವದಿಸಿದಂ ಸ । ನ್ನಯದೆ ಹರಸಿದರೆಲ್ಲರಾ ದಂಪತಿಗಳಂ ಕೂರ್ತು ॥ ೪೭ ॥

ಸೇಸೆದಳೆದಾರತಿಯ ಮಾಡಿದ । ರಾ ಸುವಾಸಿನಿಯರ್ಕಳಿಂಪದು । ಸೂಸು ವೆಳೆನಗೆಗೂಡಿ ಮಂಗಲಗೀತಮಂ ಪಾಡಿ ॥ ಲೇಸುಮಿಗೆ ಪಿರಿಯರ್ಕಳು ಗಣಾ । ಧೀಶರಂ ನೆರೆ ತಣಿಸಿದರು ನಾ । ನಾಸುಭೋಜನದಕ್ಷಿಣಾದ್ಯುಪಚಾರದಿಂ ನಲಿದು ॥ ೪೮ ॥

ವಿತತಮಹಿಮಂ ಚಿಲ್ಲತಾಲಿಂ । ಗಿತಸುರೋರ್ವೀಜನಪ್ರತರ್ಕ್ಯಮ । ಹಿತವಿರಾಗಿ ದಿಗಂತಪೂರ್ಣಯಶೋವಿರಾಜಿತನು ॥ ಜಿತಮದಂ ಪಶುಪ ಸ್ವರೂಪಂ । ಮತಿಯುತಂ ವಿಜಿತತ್ರಿತಾಪಂ । ನುತಜಗದ್ದೀಪಂ ಪೊರೆಗೆ ವೀರೇಶ್ವರಂ ಪದೆದು ॥ ೪೯ ॥

ಅಂತು ಸಂಧಿ ೩ಕ್ಕಂ ಪದಗಳು ೧೫೫.

ಭದ್ರಂ.



ಶ್ರೀಮತೇ ಜಂಗಮಾಯ ನಮಃ



## ನಾಲ್ಕನೆಯ ಸಂಧಿ ಪ್ರಾರಂಭ.

ಸೂಚನೆ ॥ ಸತಿಯೊಡನೆಸಂಸಾರಮಂ ಮಾ । ಡುತೆ ವಚನ ಶಾಸ್ತ್ರಾನುಭವದಿಂ । ದತುಲಚ್ಚರದಾಸತ್ತೆಯನಾಂತಂ ವೀರ ನಾಮಕನು ॥ ಪಲ್ಲ ॥

ಪದ ॥ ಸರ್ವಶಬ್ದಾಧಾರೆಯೆನಿಸಿದ । ಸರ್ವಮಂಗಲೆಯಂಘ್ರಿಗಳನುಂ । ಸರ್ವದಾಸರ್ವಾರ್ಥಗಳಿಗಾಧಾರನಾಗಿರುವ ॥ ಶರ್ವನ ಪದಾಂಭೋರುಹ ಗಳನು । ಮುರ್ವಿಯೊಳು ನಲುವೇರಿ ಧ್ಯಾನಿಸಿ । ಸರ್ವಶಬ್ದಪದಾರ್ಥಗಳ ನಾನರಿದು ಬಾಳುವೆನು ॥ ೧ ॥

ಸದರಮೆನೆ ಮಲ್ಲೇಶ್ವರಾಖ್ಯನ । ಮದುವೆಯೊ ಮದುವೆಯೊಳ ಗಾದುದು । ಪದೆದು ಮುಂದೊಂದಬ್ದದೊಳಗಾ ಕಿರಿಯಮಗನಾದ ॥ ಸದಮಲ ಪ್ರಭುನಾಮನ ವಿವಾ । ಹದ ಮಹಾಭಾರವನಿಳುಹಿಕೊಂ । ಡುದರನಿರ್ವಾಹವ ನೆಸಗುತಿರೆ ಕೆಲದಿನಂಗಳೆದು ॥ ೨ ॥

ಪಿಡಿದ ರುಜೆಯಿಂ ದೊಡ್ಡಯಂ ಮೇ । ಣ್ಮಡದಿಯಾದಾ ರುದ್ರಮಾಂಬೆ ಯು । ಮೃಡನೊಳಡಗಿದರಾಗಳೆಲ್ಲ ಕುಂಟುಂಬಭಾರವದು ॥ ಒಡನೆ ವೀರಾ ರ್ಯನ ಕೊರಳಿಗಂ । ತೊಡಕಿದುದಿವಂ ಜ್ಯೇಷ್ಠಪುತ್ರತೆ । ವಡೆದ ಕಾರಣ ದಿಂದ ಮಾಡುವದೇನು ಕಾಲಕ್ಕೆ ॥ ೩ ॥

ತರುವ ಕೊಡುವದು ಗುರುತುಮಿಲ್ಲಂ । ಪಿರಿಯಪರಿಚಯಮಿಲ್ಲ ಧನಿ ಕರ । ಭರದೆ ಸಾಗುವ ಮನೆಯ ವೆಚ್ಚಂ ನಿಲ್ಲುವಂತಿಲ್ಲ ॥ ತಿರಿದು ತರಲದು ಸಾಲುವಂತಿ । ಲ್ಲರರೆ ಪೊಸಜವ್ವನಿಗನೀ ದು । ರ್ಧರಮಹಾಕಷ್ಟಕ್ಕೆ ಗುರಿಯಾದಂ ಪ್ರಪಂಚದೊಳು ॥ ೪ ॥

ತಂದೆತಾಯ್ಗಳ್ಪೋದದುಃಖಂ । ಬಂಧುಗಳಸಂತೈಪದುಃಖಂ । ಮುಂದೆ ಹಳ್ಳಿಯ ಸಾಲೆಯಿಂದಂ ದೊರೆವಸಂಬಳವು ॥ ಮಂದಿರದ ವೆಚ್ಚಕ್ಕೆ ಸಾಲದಿ । ದೆಂದು ತೋರುವ ಪಿರಿಯ ದುಃಖಂ । ಬಂದಡುಂ ಮನದಲ್ಲಿಧೃತಿಗೆಡಲಿಲ್ಲ ಮೆಳ್ಳನಿತು ॥ ೫ ॥

ಪುರುಷನಾದವಗಿರಲುಬೇಕೀ । ಪಿರಿಯಧೈರ್ಯಂ ಧೈರ್ಯವಿಲ್ಲದ । ನರನೆ ಪುರುಷಾಧಮನವಂ ಭೂಮಿಯೊಳು ಕಡೆತನಕ ॥ ಕೊರತೆಯೊಳು ಜೀವಿಸುವನವನಿಂ । ವರಜಗದ್ಧಿತಕಾರ್ಯಮಾಗದು । ಪರಮಧೈರ್ಯವೆ ಸರ್ವ ಸಾಧನವೆಂದಿಹುದುನೀತಿ ॥ ೬ ॥

ಪೊಡವಿಯೊಡೆಯಂ ಮುಳಿದೊಡುಂ ಪುಲಿ । ಘುಡಿಘುಡಿಸಿ ಮೈಮೇಲೆ ಬರಲುಂ । ಬಡಬತಿಖಿಸುಡಲೈದಲುಂ ಪಗೆಯುಸಿಯನೆತ್ತಿದೊಡುಂ ॥ ಸಿಡಿಲು ಹೊಡೆಯಲಿಕೊತ್ತರಿಸಲುಂ । ನಡುಗಡಲೊಳುರುಳಿರ್ದೊಡುಂ ಧೃತಿ । ಗೆಡನು ಪಿಡಿದ ವ್ರತವನು ಬಿಡನೆದೆಗಾರನುತ್ತಮನು ॥ ೭ ॥

ಅಳಲೊದಗಿತೆಂದಳುತಕುಳಿತೊಡೆ । ತೊಲಗುವದೆ ತದ್ದುಃಖಮುಳುಕದೆ । ಬಲುಹಿನಿಂ ಶಿವಧರ್ಮವಂ ಕೈಬಿಡದೆ ಯತ್ನವನು ॥ ನೆಲದೊಳೆಸಗುವದೇ ಮನುಷ್ಯನ । ಕೆಲಸವೆಂದು ವಿದಗ್ಧಸಂಚಯ । ಮುಲಿಗುಮದರಿಂ ಧೈರ್ಯವೇ ಸೌಖ್ಯದಮಿದಂತಿರಲಿ ॥ ೮ ॥

ಮೊಗವನೊಣಗಿಸಿಕೊಂಡು ಕುಳ್ಳಿರ । ದಗಿಯದಾ ಸಾಲೆಯನು ಬಿಟ್ಟೀ । ಮಗನು ಧೈರ್ಯಂಗೊಂಡು ಕೋರಿಗೆ ರೊಕ್ಕಕಂಪಿಡಿದು ॥ ಸುಗಿಯ ದನ್ಯರ ಹೊಲವ ಮಾಡುತ । ಬಗೆಯೊಳನ್ಯಾಯುವನು ನೆನೆಯದೆ । ಸೊಗಸಿನಿಂದ ಕುಟುಂಬವಂ ಸಾಗಿಸುತ ಬರುತಿರಲು ॥ ೯ ॥

ಮುಂದೆ ತುಸುದಿನಗಳೊಳಗಾಣ್ಮನ । ಮಂದಿರಕೆ ಗುರುದೇವಿ ತಾನೈ । ತಂದಳೀಕೆಯ ರೂಪುಗುಣಗಳನೆಲ್ಲ ಬಣ್ಣಿಸಲು ॥ ಮಂದಮತಿಯೆನ್ನಿಂದ ಸಾಲ್ಗುಮೆ । ಕಂದುಗೊರಲನ ಪವಕಮಲಕೃಪೆ । ಯಿಂದಲಲ್ಲದೆ. ದೊರೆಯಲಿಂತಹ ಮಹಿತಕುಲವನಿತೆ ॥ ೧೦ ॥

ಕುಮುದನಯನಂ ಕುಂದರದನಂ । ಸಮುದಗಮನಂ ಮೃದುಲ ಚರಣಂ । ವಿಮುಲಮಂದಸ್ಮಿತಮುಖಂ ಕಲಧೌತರುಚಿಗಾತ್ರಂ ॥ ಭ್ರಮರಚಿಕುರಂ ಘನಕುಚಂ ತಿಲ । ಸುಮಸುನಾಶಿಕಮರ್ಧಹಿಮುಕರ । ಸಮುಳಿಕಂ ಪದೆದೊಪ್ಪೆ ನೆರೆ ತೊಳಗಿದಳು ಗುರುದೇವಿ ॥ ೧೧ ॥

ಪಲವು ಮಾತೇನಿವಳು ರೂಪಿಂ । ಚೆಲುವರತಿದೇವಿಯನು ಕ್ಷಮೆಯಿಂ । ದಲಘುಭೂಲಕ್ಷ್ಮಿಯನು ದಯೆಯಿಂ ದೇವಗಂಗೆಯನು ॥ ತಳೆದ ಪಾತಿವ್ರತ್ಯದಿಂದಂ । ವಿಲಸಿತಾರುಂಧತೆಯನಲಸದೆ । ಗೆಲೆವ ಪಾಂಗಿಂ ಕಣ್ಗೆ ಮಂದಳ್ಪೂತಗುರುದೇವಿ ॥ ೧೨ ॥

ಶಾಂತಿಗೆಟ್ಟಂ ಗೌರಿಯಾಣ್ಮಂ । ಕಂತುಪುರಗಳನುರುಪುವೆಡೆಯೊಳು । ಶಾಂತಿಗೆಟ್ಟಶೌರಿವಿಧಿಗಳ್ಮದಿಸಿದೆಡೆಯಲ್ಲಿ ॥ ಶಾಂತಿಗೆಟ್ಟಂ ಗೌತಮಂ ಮುನಿ । ಸಂತತಿಯ ಕುಟಿಲತೆಯನೀಕ್ಷಿಸಿ । ಶಾಂತಿಗೆಡಲಿಲ್ಲೆಂದಿಗುಂ ಗುರುದೇವಿ ಮನದಲ್ಲಿ ॥ ೧೩ ॥

ಗುರುಪಯೋಧರಯುಗಳಮುದ್ಯ । ದ್ಗುರು ಜಘನವಲಯಂ ಮಧುಪರುಚಿ । ಗುರುಕಚಭರಂ ಗುರುಪುನೀತಸುವರ್ತನಮದೆಸೆವೀ ॥ ಗುರುಕುಲ ವಧೂಗಣದತಲೆವಣಿ । ಗುರುತರದ ಗುರುದೇವಿಯೆಂಬೀ । ಗುರುಫಲದ ನಾಮಂ ಸಮನ್ವಯಿಸಿದುದು ಸಹಜಮೆನೆ ॥ ೧೪ ॥

ತನುವಿಗಂ ಕೈಯುಂದದಿಂ ಲೋ । ಚನಕೆವೆಯಪಾಂಗಿಂದ ನಿಜನಾ । ಥನ ಹಿತಾತಿಥ್ಯಂ ಸ್ವಭಾವಮದಾಗಿ ನಿತ್ಯದೊಳು ॥ ಇನಿಯನಿಗೆ ತಾನಾಗೆಸೆದಳೀ । ವನಿತೆಯಿೂ ಸದ್ವೃತ್ತಿಸಂಪ । ತ್ತನದೆನಿತು ಘನಪುಣ್ಯಬಲದಿಂ ಪಡೆದಳೋ ಜಗದೆ ॥ ೧೫ ॥

ದಣಿದೆಡೆಯೊಳುಂ ಬಿನದಿಪೆಡೆಯೊಳು । ಮಣಿಯರಂ ಮೃಷ್ಟಾನ್ನದಿಂದಂ । ತಣಿದೆಡೆಯೊಳುಂ ಪತಿಯು ಕೋಪಿಸುವೆಡೆಯೊಳುಂ ಮತ್ತೆ ॥ ಇಣಕು ಸಂಧಿಸಿದೆಡೆಯೊಳುಂ ಮ । ನ್ನಣೆಪಳಿಗಳೆಡೆಗಳೊಳು ಮೇನುವ । ನೆಣಿಸದೆಳೆನಗೆ ಮೊಗದ ಬೊಂಬೆಯುವೊಲ್ಮೆರೆದಳಬಲೆ ॥ ೧೬ ॥

ಒಡನೆ ಮಾರ್ನುಡಿಗೊಡುವ ಗುಡಿಯಂ । ತಡಿಗಡಿಗೆ ಪತಿಯೊಡನೆ ಶಿವನಂ । ಬಿಡದೆ ನುತಿಪಳು ರನ್ನಗನ್ನಡಿಯೊಳಗೊಡೆದು ತೋರ್ಪ ॥ ಪಡಿ ನೆಳಲಿನಂತಿನಿಯನೊಳ್ಪೆರೆ। ದೆಡೆವಿಡದೆ ನೆರೆವಾಗುವಳ್ಮಿಗೆ । ಸಡಗರದೆ ಮೃಡಗಣ ವರರ ಸೇವೆಯೊಳಗೀ ಲಲನೆ ॥ ೧೭ ॥

ಅಮೃತಕರಗುಣವತಿಯೆನಿಸಿದೀ । ಯಮೃತಕರಮುಖಿಯೆಸಗಿದಮೃತ ಮ। ದಮೃತದಿಂ ನೂರಾರುಮಡಿಮೇಲಾಗಿ ಮನವೆಳಸಿ ॥ ಅಮೃತಚರರುಣುವ ವೊಲಿರುತ್ತಿ । ತ್ತಮೃತಸುಖವಿೂಕೆಯ ನಿಲಯದಿನಿ । ಸಮೃತಮಂ ಕುಡಿದವ ನಿಗಪ್ಪಂತಿತ್ತು ದಿಟವಾಗಿ ॥ ೧೮ ॥

ಮಲಿನವೀಕೆಯ ಮನೆ ತನು ಮನಂ। ಗಳನು ಮೇಣ್ಪಾತ್ರಾಂಬರಂಗಳ। ನುಳಿದು ತೆರಳ್ದಾರೋಗ್ಯರಕ್ಷಣದೆಚ್ಚರಿಕೆಯಿರದ ॥ ಕೆಲಬರಾವಾಸವನು ದುಷ್ಪರ। ಬಳಗದೊಳಗಾಡುವರ ಮನಮಂ । ನೆಲೆಯೆನಗಿವೆಂದೊಳ್ಪಿನಿಂದಾಶ್ರಯಿಸಿದುದು ಭರದೆ ॥ ೧೯ ॥

ಉಣಲುಬಂದತಿಥಿಗಳನುರೆ ತ । ನ್ನಣುಗರೆನೆ ಕೈದವರಭಾರ್ಯಾ । ಮಣಿಗಳಿಂ ಪಿಂಧಗಲಿಸಿದಳನಸೂಯೆ ಕೆಲದಿನವು ॥ ಪ್ರಣುತಗಣದಂಪತಿ ಗಳಂ ಕರೆ । ದುಣಿಸಿ ಶಿವಶಿವೆಯರ್ಕಳಿವರೆಂ । ದೆಣಿಸಿ ಮಣಿದು ಕಳುಂಪುವೀ ಮಾನಿನಿಗವಳು ಸರಿಯೆ ॥ ೨೦ ॥

ತೊಡೆಯಮೇಲೊರಗಿರ್ದ ಪತಿಯಂ । ತುಡುಕಿ ಶಳೆದೊಯ್ವರ್ಕಸುತ ನಿಂ । ಬಿಡಿಸಿಕೊಂಡೈತಂದಳಾ ಸಾವಿತ್ರಿ ಗುಣದಿಂದ ॥ ಬಿಡದೆ ತನ್ನಂಗಣ ದೊಳಂತಕ । ನಡಿಯನಿಡಗೊಡದಂತೆ ನಡೆವೀ । ಜಡಜಮುಖಿಗವಳೆಂತು ನೆಲದೊಳ್ಸಾಟವಂದಪಳು ॥ ೨೧ ॥

ಎಲ್ಲ ಕಾಲದೊಳೆಲ್ಲ ತಾವಿನೊ । ಳೆಲ್ಲ ಕಾರ್ಯಂಗಳೊಳು ಜಾಗ್ರದೊ । ಳೆಲ್ಲ ಬಗೆಯ ಪದಾರ್ಥಸಂದೋಹದೊಳು ಕನಸಿನೊಳು ॥ ಎಲ್ಲ ಸಂಭ್ರಮ ಗಳೊಳು ತನ್ನಯ । ವಲ್ಲಭನನೆಡೆಬಿಡದೆ ಕಾಣುವ । ಳಲ್ಲದಿನ್ನೊಂದಂ ಬಯಸ ದಿರ್ದಳು ವಿಮಲಚರಣೆ ॥ ೨೨ ॥

---

೧. ಮುಕ್ತಿ; ೨. ಚಂದ್ರ; ೩. ಅನ್ನ; ೪. ಸುಧೆ. ೫. ಆಕಾಶಚರರಾದ ದೇವತೆಗಳು; ೬. ನಾಶವಾಗದ; ೭. ನೀರು.

ತಾಳಗತಿಗನುಸರಿಸಿ ಕುಣಿವುತ । ಮೇಲೆ ನಾದಂಬಿಡಿದು ಪಾಡುತ । ಲೀಲೆಯಿಂದಭಿನಯುವ ಮಾಡುತ ಪೊತ್ತ್ರಕುಂಭವನು ॥ ಬೀಳದಂದದೆ ನಟಪ ನಟಯಂ । ತೋಳಿಯಿಂ ಗೃಹಕೃತ್ಯಗಳನತಿ । ಶೀಲಮೆನಲೆಸಗುತ್ತ ಕಾಯ್ದ ಳ್ಪರಮಧರ್ಮವನು ॥ ೨೩ ॥

ಚರಪದಾಂಬುವ ಬಯಪಳಲ್ಲದೆ । ಸಿರಿಗೆಳಸಲಿಲ್ಲಂ ಮಹೇಶ್ವರ । ಚರಣಯುಗಮಂ ನೆನೆವಳಲ್ಲದೆ ವಿಷಯಭೋಗವನು ॥ ಸ್ಮರಿಸಲಿಲ್ಲಂ ಪತಿ ವಚನಕೆದೆ । ಗರಗುವಳದಲ್ಲದೆ ಪ್ರಪಂಚದ । ಸರಸನುಡಿಗಳಿಗೊಲೆಯಲಿಲ್ಲೀ ಪುಣ್ಯಮಯಗಾತ್ರೆ ॥ ೨೪ ॥

ನೂರುಕಲ್ಪಗಳೊಳು ನೆಲಕೆ ತಲೆ । ಯೂರಿ ತಪಿಸಿದೊಡುಂ ದೊರೆಯ ದಿಹ । ಸಾರತರಪತಿಭಕ್ತಿಚರಸೇವೆಗಳ ಸಂಪದಕೆ ॥ ಹೀರಪಾಣಿಯ ಭೋಗ ಮದು ಸರಿ । ಬಾರದುದರಿಂದಿವುಗಳೊಳು ಮನ । ವಾರೆ ರಮಿಸೀ ನಾರಿ ಬಯ ಪಳೆ ಬೇರೆ ಭಾಗ್ಯವನು ॥ ೨೫ ॥

ಇಂತೆಸವ ಗುರುದೇವಿ ಸುರತರು । ವಂ ತೊಡರಿದಾ ಕಲ್ಪವಲ್ಲರಿ । ಯಂತೆ ಪತಿಯೊಡಗೂಡಿ ನಿಷ್ಕುಟಿಲಪ್ರಪಂಚವನು ॥ ಸಂತಸಂಮಿಗೆ ಮಾಡು ತಿರಲಿವ । ರಂತರಂಗವನರಿದು ಹರಗಣ । ಸಂತತಿಯು ಪೊಗಳುತ್ತಲಿರ್ದುದು ಪೂಜ್ಯಭಾವದೊಳು ॥ ೨೬ ॥

ನುತಪುರಾಕೃತಸುಕೃತಚಯಸಂ । ಸ್ಕೃತಿಯಬಲದಿಂದಂ ನಿಸರ್ಗ । ಸ್ಥಿತಿಯೆನಿಸಿದುದ್ವೃತ್ತಿಯುಳ್ಳೀ ವೀರನಾಮಕನ ॥ ಮತಿಗೆ ಶಿವಶಾಸ್ತ್ರಾವ ಲೋಕನ । ವತಿರುಚಿಸುತಿರ್ದತ್ತದರಿನಭಿ । ರತಿಯೊಳೋದುತ್ತಿರ್ದನಾಗ ಳ್ದೊರೆದ ವೇಳೆಯೊಳು ॥ ೨೭ ॥

ವರಪುರಾತನವಚನಶಾಸ್ತ್ರೋ । ತ್ಕರವನೋದಿ ತದರ್ಥಸಾರವ । ನರಿದನುಭವಂಬಡೆಯಲಾಚರಣೆಯೊಳದಂ ತಂದು ॥ ಕರಣಗಳ ಚೇಷ್ಟೆಯ ನಡಂಗಿಸಿ । ಪರಮಲಿಂಗಾಕಾರಮೆನೆ ನಿ । ರ್ಧರಿಸಿ ವೃತ್ತಿಯನೆಸಪ ಯತ್ನವ ನಾಂತನಿವನಂದು ॥ ೨೮ ॥

ಎನಿತೆನಿತು ಶಾಸ್ತ್ರಾವಲೋಕನ । ವನು ಬೆಳಿಸಲಾರಂಭಿಸಿದನನಿ । ತನಿತು ಸಂಸಾರಪ್ರಮೋಹಂ ಸರಿವುತಂ ಶ್ರದ್ಧೆ ॥ ಘನವಿಚಾರಂ ಶಾಂತಿ ಲಿಂಗಾ। ರ್ಚನೆ ವಿರಕ್ತಿಪ್ರಮಥದಾಸತೆ । ವಿನಯಕರುಣಾದಿಗಳು ವರ್ಧಿಸಲಾದ ವೀತನೊಳು ॥ ೨೯ ॥

ಮನಮಲಸದೆರಡೆತ್ತಿನೊಕ್ಕಲ । ತನವ ಸಾಗಿಸಿಕೊಂಡು ಭಕ್ತರ । ಮನೆಗಳೊಳಗಾಗುವ ಶುಭಾಶುಭಕಾರ್ಯಗಳೊಳರಿದು ॥ ಅನುವಿನಿಂದನುಕೂಲಮಾಗುತ । ಮನಸಿಜಹರಪ್ರಮಥಸೇವಾ । ಘನಸುಖದೊಳೋಲಾಡುತಿರ್ದಂ ವೀರನಾಮಕನು ॥ ೩೦ ॥

ಬಿಡದೆ ತನ್ನೆರಡೆತ್ತಿನಿಂದಲೆ । ಹಿಡಿದ ಪೊಲಗಳ ಕೆಲಸವೆಲ್ಲವ । ನಡಿಸುತಿರ್ದಂ ಕೂಲಿ ಬಾಡಿಗೆಗಳನು ಹಚ್ಚದಲೆ ॥ ದುಡಿವುತಿರ್ದಂ ತಾನೆ ಬೇಸರು । ವಡೆಯುದಲೆ ಬೇರೊಂದು ಕರ್ಮದ । ಕಡೆಗೆ ಮನವಿಡದಾಚರಿಸುತಿರ್ದಂ ಪ್ರಮೋದದೊಳು ॥ ೩೧ ॥

ಗಳಿಸಿ ಕೂಡಿಡುವಾಶೆಯಿಲ್ಲಂ । ನೆಲದೆಯಾಚಿಪ ಬಯಕೆಯಿಲ್ಲಂ । ಬಲುಬೆಳೆಯಬೇಕೆನ್ನ ಹೊಲಮೆಂಬಿಚ್ಛೆ ಮೊದಲಿಲ್ಲ ॥ ಕೆಲದ ಹೊಲವದು ಬೆಳೆಯಿತೆನ್ನಯ । ಹೊಲಮದಕೆ ಸರಿಯಾಗಲಿಲ್ಲೆಂ । ಬಳಿಮನಂಗೈದೀ ಮಹಾತ್ಮಂ ಚಿಂತೆಗೊಳಲಿಲ್ಲ ॥ ೩೨ ॥

ಪ್ರಮಥರೇ ನಡಿಸುವರು ಮನೆಯಂ । ಪ್ರಮಥನಿವಹಕೆ ಚಿಂತೆಯುಲ್ಲದೆ । ಪ್ರಮಥರಾಳ್ಗಳಿಗೇಕದರೊಳಾಲೋಚನೆಯೆನುತ್ತ ॥ ಪ್ರಮಥಸೇವೆಯೊಳಾಗಳುಂ ಸಂ । ಭ್ರಮದೆ ಸುಖಿಸೀ ದಂಪತಿಗಳಂ । ಪ್ರಮುಖರೆಲ್ಲರ್ನುತಿಸಲಾದರ್ಶರಣರಿವರೆಂದು ॥ ೩೩ ॥

ಶರಣಸಂಸಾರಮದು ಲೋಕದೆ । ನರರೆಸಪ ಸಂಸಾರದಂತ । ಲ್ಲರಿಯೆ ಶರಣರ್ಶಂಭುಸೇವೆಯೆ ನಿರುತಮಸುವಾಗಿ ॥ ಕರಮೆಸಗುವರ್ಮಾನವರ್ತನು । ಕರಣಸತಿಪುತ್ರಾಭಿಮಾನದೆ । ಬೆರೆದು ಭೋಗನಿಮಿತ್ತಮೆಸಗುವರಾಶೆಗೊಳಗಾಗಿ ॥ ೩೪ ॥

ಅಲಘುಸಾತ್ವಿಕಗುಣವೆ ರೂಪಂ । ದಳೆದ ಮಾಕ್ಕಿಯೊಳೊಪ್ಪುವೀ ಸ । ತ್ಕುಲಭವಂ ವಂದಿಸದ ಮಾಹೇಶ್ವರಚರಾಧಿಪರು ॥ ಸಲೆ ಕರುಣಗೈಯದಿಹ ಜೀವ । ರ್ಕಳು ನಡಿಸದಿಹ ಸುಗುಣವರ್ತನ । ಗಳು ವಿಚಾರಿಸಿ ನೋಡ ಲಿದ್ದಿಲ್ಲೆಂಬುದೇಂ ಪೊಸತು? ॥ ೩೫ ॥

ಪ್ರಮಥದಂಪತಿಗಳನು ಭಾವದೆ । ಪ್ರಮಥಪತಿಪಾರ್ವತಿಯರಂದದೆ । ವಿಮಲಶರಣಂ ಕಾಣುತಿರ್ದಂ ಭೇದವಿಲ್ಲದಲೆ ॥ ಕಮಲಮುಖಿಗುರುದೇವಿ ಯುವರಂ । ಭ್ರಮೆಗೊಳದೆ ಚಿಲ್ಲಿಂಗವೇದು । ತ್ರಮವಿಚಾರದಿನರಿವುತಿರ್ದಳಿದೇಂ ಪ್ರಬುದ್ಧತೆಯೋ ॥ ೩೬ ॥

ಭಾವಿಸಲ್ವೀರಾರ್ಯಗೀ ಗುರು । ದೇವಿ ಸತಿಯಾದುದರಿನಿಂಪದು । ತೀವಿ ಬೆಳದಿಹ ಕಬ್ಬಿನೊಳು ಜೇನಿಟ್ಟತೆರನಾಗಿ ॥ ಪಾವನಪ್ರದಜಂಗಮವ್ರಜ । ಸೇವೆಗತಿಕಳೆದುಂಬಿದುದು ಜಗ । ತೀವಲಯದೊಳ್ಪರ್ಬಲನುವಾಯ್ತಿವರ ಬೆಳ್ಚಸವು ॥ ೩೭ ॥

ಶರಣನೀ ಗುರುದೇವಿಯಿಂದಲೆ । ಪರತರೌನ್ನತ್ಯವ ಪಡೆದನೆಂ । ದೊರೆ ದೊಡೆನ್ನಿಸದತಿಶಯೋಕ್ತಿಯದೂಟಕೈತಂದ ॥ ಹರಗಣಂಗಳನ್ಯೆದೆ ಕಾಣುತ । ಹರುಷಶರಧಿಯೊಳಾಳ್ದು ಬಿಡದುಪ । ಚರಿಸುತಿರ್ದಳು ಶಂಕರಂ ಖಣಿಯಾಗು ವಂದದೊಳು ॥ ೩೮ ॥

ಇವರಿಗಂ ಸಂಗಾಂಬೆ ಬಸವಂ । ಪ್ರವಿಮಲಾನ್ವಿತೆ ರುದ್ರಮಾಂಬೆಯು । ತವೆಯೆಸೆವ ಕಂಠಾರ್ಯನುಂ ಪಂಚಾಕ್ಷರಾಹ್ವಯನು ॥ ವಿವರಿಸಲ್ಕೀ ತೆರದೆ ಪರಿವಿಡಿ । ದವತರಿಸಿದರ್ಮಕ್ಕಳೈವ । ರ್ಮವರರಿವರತಿಸಭ್ಯಸುಂದರಲಕ್ಷಣ ಗಳಿಂದ ॥ ೩೯ ॥

ಬೆಳೆದುದಿಂತು ಕುಟುಂಬವದು ಮೇ । ಣ್ಬೆಳೆದುದಿವರ ವಿರಕ್ತಿಯೋಗಂ । ಬೆಳೆದವು ಯಶೋಭಕ್ತಿಗಳು ನೀರೆರೆದ ಮರದಂತೆ ॥ ಬೆಳೆಯಲಿಲ್ಲಂ ಶಂಕೆ ಸಾಲಂ । ಬೆಳೆಯಲಿಲ್ಲ ಪ್ರಪಂಚವಾಸನೆ । ಮೊಳೆಯದಿರ್ದೂಷರದೆ ಬಿತ್ತಿದ ಜೊಳ್ಳುಗಾಳಂತೆ ॥ ೪೦ ॥

3+

ಒಂದುದಿನಮಾವೂರಗುಡಿಯೊಳು । ಬಂದುಳಿದು ಬಂಡಿಯುವನ್ನೋ ರ್ವ್ವಂ । ಮುಂದೆಗತಿಯೇನೆತ್ತುಗಳಿಗುಪವಾಸವಿಹವೆನುತ ॥ ನಿಂದು ಯೋಚಿ ಸುವನಿತರೊಳು ಭರ । ದಿಂದ ತಮ್ಮಯ ಮನೆಯುದನಗಳಿ । ಗೆಂದು ಮೇವಿನ ಹೊರೆಯು ತರುವೀ ಶರಣನಂ ನೋಡಿ ॥ ೪೧ ॥

ಎಲವೊ ಹಾಕುವದೇನು ಮೇವಿದು । ತಿಳಿಸು ನೀನೆಂದವನು ಕೇಳಲು । ತಳುವದಿದು ಹಾಕುವದಹುದಪಾ ಹಾಕಬೇಕೆಲ್ಲಿ ॥ ಸಲೆ ಬೆಸಸೆನುತ್ತಿವನು ನುಡಿದಾ । ಗಳೆಯುವನು ಪೇಳ್ದಂತೆ ತದ್ವೃಷ । ಗಳಿಗೆ ಮುಂಗಡೆಯಲ್ಲಿ ಚಲ್ಲಿ ನಿಜಾಲಯುವ ಕೂರ್ತು ॥ ೪೨ ॥

ನಡೆವುತಿರಲೆಲೊ ಹುಲ್ಲಿನವನೆ । ಹಿಡಿ ತೆಗೆದುಕೋ ಹುಲ್ಲಬೆಲೆಯಂ । ಕೊಡುವೆನೀ ರೊಕ್ಕವನುಳಿದು ಸುಮ್ಮನೆ ನಡೆವೆಯಲ್ಲ ॥ ಬಿಡುವೆಯೋ ಮಱ ದಿರುವೆಯೋ ಬೇ । ರೆಡೆಗೆ ಪೋಗಿ ಮಗುಳ್ದು ಬಱುವೆಯೊ । ಬಿಡದರುವು ನಿಲ್ಲಿನಿಸು ನೆರೆ ನೋಡಿತ್ತ ನೀನೆನಲು ॥ ೪೩ ॥

ನೋಡಲಿಲ್ಲಂ ನಿಲ್ಲಲಿಲ್ಲಂ । ಬೇಡುವದದಂತಿರಲಿ ಸುಮ್ಮನೆ । ನಾಡೆ ಭರದಿಂ ನಡೆವ ಶರಣಾಗ್ರಣಿಯ ರೀತಿಯನು ॥ ಕೂಡಿದವರಿಂದರಿದು ಶಿವ ಶಿವ । ಮಾಡಲಿಲ್ಲ ವಿಚಾರಮಂ ಮತಿ । ಗೇಡಿಯೂನೆಂದಳ್ಕಿ ಬೆಂಬತ್ತಿದನವಂ ಬಿಡದೆ ॥ ೪೪ ॥

ಆವ ಪರಿಯಿಂ ಬೇಡಿಕೊಂಡೊಡು । ಮಾವನಿಂದಂ ಪೇಳಿಸಿದೊಡಂ । ಮೇವದೇಯೆತ್ತುಗಳಿಗೆಂದಾಂತಂದಿರುವೆನಪ್ಪಾ ॥ ನೀವುರೊಕ್ಕವ ಕೊಡುವ ದಾರಿಗೆ । ನಾವು ನಿಮ್ಮವರಲ್ಲವೇನಪ । ನೀವು ನಾವೆಂದೇಕೆ ಮನದೊಳು ಭಾವಿಸುವಿರಪ್ಪ ॥ ೪೫ ॥

ರೊಕ್ಕದವನಾನಲ್ಲ ಭಕ್ತರ । ಕಕ್ಕುಲತೆಯೊಳು ಬಾಳ್ವೆನಪ್ಪಾ । ರೊಕ್ಕ ಮಂ ತಕ್ಕೊಂಡು ಕೂಲಿಗನೆನಿಸಿಕೊಳ್ಳುವದು ॥ ತಕ್ಕುದೇ ಹೇಳಪ್ಪ ನೀನಿನಿ । ಸುಕ್ಕಲಿಸಬೇಡೆಂದು ಮಾನಸ । ವುಕ್ಕಿ ಸಂತೈಸಿದನು ಶರಣಂ ತತ್ಪ್ರವಾಸಿ ಯನು ॥ ೪೬ ॥

ಗುಡಿಗಳೊಳ್ಮಠಗಳೊಳು ಬೇರೊಂ । ದೆಡೆಯೊಳುಳಿದ ಪರಸ್ಥಲದವರ । ಹುಡುಕಿ ಕರತಂದುಣಿಸುತಿರ್ದಂ ಪಗಲುರಾತ್ರಿಯೊಳು ॥ ಬಿಡದೆ ಪುರುಷಸ್ತ್ರೀಯರಂ ಸರಿ । ವಿಡಿದವಂ ಬಿನ್ನೈಸಿ ತಣಿಸುತ । ನಡಿಸುತಿರ್ದಂ ಪ್ರಮಥ ದಾಸೋಹವನು ನಿತ್ಯದೊಳು ॥ ೪೭ ॥

ಹುಡುಗರನು ಕರೆದೀವುತಿರ್ದಂ । ಕಡಲೆಬೆಲ್ಲವನಳ್ಕರಿಂದಂ । ಗಿಡಕೆ ಕಟ್ಟದ ನೆಲುವಿನೊಳು ಪಕ್ಷಿಗಳ ಸಲುವಾಗಿ ॥ ಕುಡಿಯಲುದಕವನಿಡುತಲಿರ್ದಂ । ನಡೆವುತಿರ್ದಂ ನೋಡಿ ಜೀವಿಗ । ಳಡಿಗಳೊಳು ಸಿಗದಂದದಿಂದಂ ಸಾವಧಾನದೊಳು ॥ ೪೮ ॥

ನೀರ ತರಲಿಕೆ ಪೋದ ಸಮಯದೆ । ನೀರಡಿಸಿ ಬಾವಿಯ ಸಮೀಪದೊ । ಳಾರಯಿಪ ಹುರುಪಡಿಯ ದನಗಳಿಗಾಗಿ ತಾಂ ಪೊತ್ತು ॥ ನೀರ ಕುಡಿಸಿ ಬಳಿಕ್ಕ ಡೋಣಿಯ । ಪೂರಯಿಸಿ ನಿಜಮಂದಿರಕ್ಕಂ । ನೀರನೊಯ್ಯುತ್ತಿರ್ದನಖಿಲಪ್ರಾಣಿಕರುಣಾಳು ॥ ೪೯ ॥

ಬಾವಿಯೊಳು ಬಹುಜನರ ದಟ್ಟಣೆ । ತೀವಿರುವ ವೇಳೆಯೊಳಗೀಸನು । ಭಾವನ್ನೈದಿರ್ದಡಮುದೆಲ್ಲಂ ಸರಿವನಕಮಲ್ಲಿ ॥ ಕೌವರಿಯಿನಾ ಬರಿಗೊಡವ ಪೊ । ತ್ತೋವರಿಯೊಳುರೆ ನಿಂದು ಬಳಿಕಂ । ಬಾವಿಯೊಳಗಿಳಿದೊಯ್ಯುತಿರ್ದಂ ನೀರನಾಲಯಕೆ ॥ ೫೦ ॥

ಇಡಿದ ಪರಳ್ಗಳು ಜನರಕಾಲಿಗೆ । ನಡಲುಬಾರದೆನುತ್ತ ಮನಮೊ । ಲ್ದಡುಗುತಿರ್ದಂ ಬಾವಿಗೈದುವ ದಾರಿಯಂ ಬಿಡದೆ ॥ ನಡುವೆ ಹೋಗದೆ ಮಾರ್ಗದೊಳಗೊ । ಕ್ಕಡೆಯೊಳಡ್ಡಾಡುತ್ತಲಿರ್ದಂ । ಕಡೆತನಕಮುಂ ಪಾದುಕೆಗಳಂ ಮೆಟ್ಟಲಿಲ್ಲರಿಯೆ ॥ ೫೧ ॥

ಪ್ರತಿದಿನಂ ಕುಲಗುರುವೆನಿಸಿದ । ಪ್ರತಿಮಕೆಂಚಬಸವನೆನಿಪ ಸ । ನ್ನುತಮಹಿಮನಂ ಕರೆದು ಪೂಜಿಸಿ ತತ್ಪದಾಂಬುವನು ॥ ಸತಿಯು ತಾನುಂ ಮಕ್ಕಳುಂ ಕೊಂ । ಡತಿಥಿಗಳನುಪಚರಿಸಿ ಬಳಿಕೂ । ರ್ಜಿತಗುರುಚರೇಶಪ್ರಸಾದವ ಸ್ವೀಕರಿಸುತಿಹರು ॥ ೫೨ ॥

ದಿನದಿನಂ ಕುಲಗುರುವರಂ ಭೋ । ಜನವ ಮಾಡಿದ ಬಳಿಕ ಭುಂ ಜಿಸಿ । ರೆನುತ ಶರಣರಿಗಪ್ಪಣೆಗೊಡುತ್ತಿರ್ದನವನೊಂದು ॥ ದಿನದೊಳಾಜ್ಞೆಯು ನೆಸಪುದಂ ಮರೆ । ದನುಮತಿಸಿ ನಿಜಮಠಕೆ ಪೋಗ । ಲ್ಘನಗುರೂತ್ತಮ ನಾಜ್ಞೆಯೆಮಗಾಗಿಲ್ಲಮಿಂದೆಂದು ॥ ೫೩ ॥

ಶರಣದಂಪತಿಗಳು ಹುಡುಗರೆ । ಲ್ಲರುಪವಾಸದೆ ಸಂಜೆಯನಕಂ । ಕೊ ರಗದಿರ್ದರದಂ ತಿಳಿದು ಗುರುವರ್ಯನಾಕ್ಷಣವೇ ॥ ಮರುಗಿ ಬಂದಪ್ಪಣೆಯ ನೀಯಲು । ಹರುಷದಿಂ ಭುಂಜಿಸಿದರೀ ಪರಿ । ಗುರುವರನನವಲಂಬಿಸಿದವರಿ ಗಾರು ಸರಿ ಜಗದೆ ॥ ೫೪ ॥

ಶ್ರಾವಣಸಿತಪ್ರತಿಪದೆಯೊಳೀ । ಪಾವನಾಂಗಂ ಗುರುವರನ ಪೂ । ಜಾ ವಿಭವಮಂ ತೀರ್ಚಿ ಲಿಂಗಕೆ ಪೊಸಕರಡಿಗೆಯನು ॥ ಕಾವಿಯದ್ದಿದ ಕಪ್ಪಡ ಗಳನ । ತೀವಸದ್ವಾಸನೆಯಧೂಪವ । ನೀವುತಿರ್ದಂ ಭಕ್ತಿಯಿಂ ತನಗಿದು ನಿಯಮವಾಗಿ ॥ ೫೫ ॥

ಒಂದು ದಿವಸಂ ವೀರಶರಣನ । ಮಂದಿರದೊಳುಳ್ಳೆಮ್ಮೆಗತಿರುಜೆ । ಬಂದು ನೀರಂ ಮೇವನೊಲ್ಲದೆ ಬಳಲುತಿರುವದನು ॥ ನಿಂದು ನಿರುಕಿಸಿ ತನ್ನ ಮನದೊಳು । ನೊಂದು ಶಿವಶಿವ ಮಹಿಷಿಯಿದು ಬಲು । ಚಂದಮಿಹುದಿದಕೇ ಕಡಸಿದುದೊ ದುರ್ಧರಾಮಯವು ॥ ೫೬ ॥

ಇದಕೆ ಸರಿ ಬೇರೆಮ್ಮೆಗಾಣೆನು । ಸದನದೊಳಗಿಂತಹ ಮಹಿಷಿಯಿರೆ । ಸೊದೆಗೆ ಕೊರತೆಯದಿಲ್ಲ ಮಾಡುವದೇನು ರುಜೆಯಿಂದ ॥ ಬದುಕಿದೊಡೆ ಮೇಣುದಿಸಿದಂತ । ಪ್ಪುದಿದೆನುತ್ತಂ ಕನಿಕರಂದೋ । ರಿದನು ಗುರುಚರ ಪಟ್ಟದಾರ್ಯಂ ಸಹಜಭಾವದಲಿ ॥ ೫೭ ॥

ಗುರುವಿನೀ ಮಾತುಗಳನಾಲಿಸಿ । ಗುರುಮನಕ್ಕಿದು ಬಂದಿರುವದೆಂ । ದರಿದು ಗುರುಸಂತರ್ಪಣಾನಂತರದೊಳವನೊಡನೆ ॥ ಶರಣನಾ ಮಹಿಷಿಯನು ಮಾಣದೆ । ಗುರುವಿನ ಮಠಕ್ಕೊಯ್ದು ಬಂಧಿಸಿ । ಗುರುಸಮರ್ಪಣವೆಂದು ವಂದಿಸಿ ಬಂದನಾಲಯಕೆ ॥ ೫೮ ॥

ಅಂದೆ ತದ್ರುಜೆಯಳಿದು ಮೇವಂ । ತಿಂದು ಬಲುಚೆನ್ನಾಗಿ ಕಾಡದೆ । ಮುಂದವಿಚ್ಛಿನ್ನಮೆನೆ ಮೂಬರಿಸನ್ನವಮಾಯೆಮ್ಮ ॥ ಕುಂದದಲೆ ಬಲ್ಗರೆದುದಾ ಸುಧೆ । ಯಿಂದ ಮಠದವರೆಲ್ಲರಲ್ಲಿಗೆ । ಬಂದವರು ಪರಿತುಷ್ಟಿವಡೆದರು ಪೇಳ ಲೇನದನು ॥ ೫೯ ॥

ಗುರುಚರರೆ ತನಗಂಗವೆಂದುಂ । ಗುರುಚರರೆ ಶಿವಲಿಂಗವೆಂದುಂ । ಗುರು ಚರರೆ ಪಿತೃದೈವಪಂಚಮರುನ್ನಿಕರಮೆಂದುಂ ॥ ಗುರುಚರರೆ ಕರಣಂಗಳೆಂದುಂ । ಗುರುಚರರೆ ನಿಜಲಿಂಗಕಳೆಯೆಂ । ದರಿದು ಸೇವಿಸುತಿರ್ದನವರಂ ದಾಸಭಾವ ದೊಳು ॥ ೬೦ ॥

ಮೆರೆವ ಕಂಠಾರ್ಯನನು ಪಂಚಾ । ಕ್ಷರನನುಂ ಪೆತ್ತಂದು ತೆರೆಯೊಳ । ಗಿರುತಿರುವ ಬಾಣಂತಿಯಾದ ನಿಜಾಂಗನೆಯಕೂರ್ತು ॥ ಹರುಷದಿಂ ಕೂತಲ್ಲಿ ಯೇ ಕು । ಳ್ಳಿರುವ ನಿಮಗುಪಚಾರವಿನಿತೇ । ಕರಿಯದರೆ ನೀವೆಂದು ಪೇ ಳುತ್ತಂ ಸರಾಗದಲಿ ॥ ೬೧ ॥

ಅವಳನೆರೆಯಲ್ಕಿಟ್ಟ ನವತೈ । ಲವನು ಪ್ರಮಥರ ಪದತಳಕೆ ತಲೆ । ಗಿವನು ಪೂಸಿ ಕರಾಬ್ಜದಿಂದಂ ತಿಕ್ಕಿ ಕುಳ್ಳಿರಿಸಿ ॥ ತವೆ ತದುಷ್ಣೋದಕದಿನ ಲಸದ । ಲವರನೆರೆದರ್ಚಿಸಿ ಮಧುರದೂ । ಟವನು ಮಾಡಿಸಿ ನಮಿಸಿ ಕಳಿಸು ತ್ತಿರ್ದನೊಮ್ಮೊಮ್ಮೆ ॥ ೬೨ ॥

ಕಿರಿಯತನುಭವನಾದ ಪಂಚಾ । ಕ್ಷರಗೆ ನಾಮವನಿಡುವ ದಿನದೊಳು । ಶರಣನರೆಪಡಿಜೋಳಮಂ ತಂಡುಲಮನೊಚ್ಚೇರು ॥ ಹರುಷದಿಂ ತಂದಿತ್ತು ನೀವೇ । ಸರಸಮೆನೆ ಪಾಕವನೆಸವುದೆಂ । ದೊರೆಯುಲಾ ಗುರುದೇವಿಯುದ ಕೊಡಬಟ್ಟು ಮಡಿಯಾಗಿ ॥ ೬೩ ॥

ಅಡಿಗೆಯಂ ಸಮೆದಾಕೆಯೊಲೆಯಿಂ । ಕಡೆಗಿಳುಹಿ ಭಾಂಡವ ಪೆಗಲ್ದೊಳೆ । ದೊಡನೆ ಭಸಿತದ ಪಟ್ಟಮಂ ಬರೆದಳು ಬೆಸಸಿದಂತೆ ॥ ನುಡಿಯಲೇನನಿತಶನ ಮೆನಿತುಂ । ಕಡಿಮೆಯಾಗದೆ ನೂರುಮಂದಿಗೆ । ನಡೆ ತಣಿಯೆ ಪೂರಯಿಸಿದದು ಬೆರಗಾಗೆ ಜನರೆಲ್ಲ ॥ ೬೪ ॥

---

೧. ಶರಣನು ತಮ್ಮ ಪತ್ನಿಯನ್ನು ಬಹುವಚನದಿಂದ ಕರೆವುತ್ತಿದ್ದರು.

ಶರಣನಿಂತು ಸದಾಚರಣೆಯಿಂ । ದಿರೆ ತದನುಜರೆನಿಸಿದ ಮಲ್ಲೇ । ಶ್ವರನು ಪ್ರಭುನಾಮಕನಿವರ್ತಮ್ಮಯ ಮಡದಿಯರನು ॥ ಕರೆದುಕೊಂಡಾದರದೆ ಸೊನ್ನಲ । ಪುರಕೆ ನಡೆತಂದಲ್ಲಿ ನಿಂದರು । ಪರಮಶಾಲಾಶಿಕ್ಷಕೋದ್ಯೋಗವನು ಕೈಕೊಂಡು ॥ ೬೫ ॥

ಇಳಿದುದನುಜಕುಟುಂಬಭಾರಂ । ಬೆಳೆಯಲಾದುದು ವಿರತಿಯೋಗಂ । ಸುಳಿಯಲಾದುದು ಚಿತ್ತದೊಳು ಚಿತ್ಕ್ರಿಯೆಗಳುತ್ಸವವು ॥ ಮೊಳೆಯಲಾದುದು ಶಿವಕಲಾಂಕುರ । ಮಿಳಿಯಲಾದುದು ಲೋಕಭಯಮದು । ಹೊಳೆಯಲಾದುದು ಸತ್ಪ್ರಭಾವಂ ಶರಣಪುಂಗವನ ॥ ೬೬ ॥

ಸತ್ಯಭಾಷಂ ಧೂತಪಾಶಂ । ನಿತ್ಯನಿರ್ಮಲನಖಿಲವಿಬುಧ । ಸ್ತುತ್ಯನುದ್ಯದ್ಗುಣಮಣಿಗಣಾಂಭೋಧಿಕರುಣಾಳು ॥ ಮೃತ್ಯುಭಯದೂರಂ ಪ್ರಮಥಗಣ । ಭೃತ್ಯಭಾವಂ ನಿರುಪಮಂ ಕೃತ । ಕೃತ್ಯಚಿತ್ತಂ ಪೊರೆಗೆ ವೀರೇಶ್ವರ ಶರಣನೊಲಿದು ॥ ೬೭ ॥

ಅಂತು ಸಂಧಿ ನಾಲ್ಕಕ್ಕೆ ಪದಗಳು ೨೨೨.

ಶಿವಂ.



ಶ್ರೀ ಗುರುಸಚ್ಚಿದಾನಂದ ಪರಬ್ರಹ್ಮಣೇ ನಮಃ



## ಐದನೆಯ ಸಂಧಿ ಪ್ರಾರಂಭ.

ಸೂಚನೆ ॥ ಕೃಷಿಯಕರ್ಮವನುಳಿದು ಲೌಕಿಕ । ವಿಷಯ ವಿರತಿಯ ಪೆರ್ಚೆ ಶರಣಂ । ವೃಷಭವಾಹನಕಾಯಕವ ಕೈಕೊಂಡನಾತುರದೆ ॥ ಪಲ್ಲ ॥

ಪದ ॥ ಮದವ ತೂಳ್ದು ದುರಾಶೆಯಂ ಕಾ । ಲ್ದುದಿಯಿನಾಚೆಗೆ ನೂಂಕಿ ಮೋಹವ । ಸದೆದು ತನುಕರಣಾಳಿವೃತ್ತಿಯನೆಲ್ಲ ನುರ್ಗೊತ್ತಿ ॥ ಪುದಿದಹಂಕಾರವ ತುಳಿದು ಪೆ । ರ್ಚಿದ ವ್ಯಸನಮಂ ಕೀಳ್ತು ಘನಚಿ । ತ್ಪದವ ಸಾರ್ಚುವ ಗುರುವನೆನಗುರೆ ಕರುಣಿಸಗಜೇಶ ॥ ೧ ॥

ಸುಜನಮಾನಿತಮಹಿತವೃತ್ತಂ । ಕುಜನಭೀಷಣಗೌರವಯುತಂ । ಭುಜಗಭೂಷಣಪದಕಮಲಸೇವಾಪರಾಯಣನು ॥ ವಿಜಯಶೀಲಂ ಘನಜಿತಾಕ್ಷ । ವ್ರಜಸಹಾಯಂ ವಿತರಣಂ ಗುರು । ಭಜನಶೀಲಂ ಸುಗುಣಿ ಸಂಗಪ್ಪಾಖ್ಯದೇಸಾಯಿ ॥ ೨ ॥

ನೀತಿಪಥಮಂ ಪಿಡಿದು ಬಾಳ್ವ ಪು । ನೀತರೊಳಗೊಲೆದಾಡುತಂ ವಿ । ಖ್ಯಾತಪಂಡಿತರಲ್ಲಿ ಸಂಪ್ರೀತಿಯನು ತೋರುತ್ತ ॥ ಸಾತಿಶಯಮೆನೆ ಲಿಂಗಪೂಜೆಯ । ನೋತು ಮಾಡುತ್ತಾಶ್ರಿತಜನ । ವ್ರಾತಹಿತನೆನಿಸಿರ್ದನಾ ನಾಲತ್ತವಾಡದೊಳು ॥ ೩ ॥

ಅವನವಿರತಂ ಪುರಹರಕಥಾ । ಶ್ರವಣದೊಳು ಪರಿಣಮಿಸುತಿರ್ದು । ತ್ಸವದೆ ಬಸವಪುರಾಣಮನದೊಂಬತ್ತುಬಾರಲ್ಲಿ ॥ ತವೆ ನೆಗಳಿದನತುಲತರವೈ । ಭವದೊಡನೆ ಪೆಸರಾಗುವಂದದೆ । ಕಿವಿಗೆ ಶಿವಕಥೆಯಮೃತಮೆಂದೊಪ್ಪಿರ್ದನಾ ನೃಪನು ॥ ೪ ॥

ನಾಡಗೌಡನ ಬಣಮದೊಂದುಂ । ನಾಡೆ ದೇಸಾಯಿಯಬಣಮದೊಂ. ದಾಡಲೇನಿಂತಿಬ್ಬಣಗಳಾ ಗ್ರಾಮದೊಳಗಿರ್ದು ॥ ನಾಡರಿಯೆ ಸಂಗಪ್ಪದೊರೆ ವಃದ । ಗೂಡಿಯೊಂದುಪುರಾಣಸಮಯದೆ । ಮಾಡಿದಂ ಮಂಗಲಗಣಾರಾಧ ನೆಯನೊಲೆದೊಮ್ಮೆ ॥ ೫ ॥

ಶರಣವರನೀ ದೊರೆಯಬಣದೊಳ । ಗಿರುವದರಿನಾ ಪ್ರಸ್ಥದೊಳು ನೆರೆ । ಪಿರಿಯತನಮಂ ಮಾಡುತಿರ್ದುದರಿಂದ ಸಮತೆಯೊಳು ॥ ಎರಡುಬಣದ ಸಮಸ್ತಮಾಹೇ । ಶ್ವರರಿಗೂಟಕೆ ಪೇಳಿಸಿದನಾ । ದರದೊಳಿದನರಿದೊಪ್ಪದಾ ಸಂಗಪ್ಪದೇಸಾಯಿ ॥ ೬ ॥

ಮರುಳುಹಿಡಿದುದು ಶರಣಗೀತನ । ಹಿರಿಯತನಮದು ಸಾಕು ತಾನರಿ । ದರಿದುಮಿಂತೆಸಗಿದನೆನುತ್ತುರಿದೀತನಭಿಮತವ ॥ ಪರಿಕಿಸದೆ ಛಲಮುಂ ಮಿಗೆ ನಿರಾ । ಕರಿಸಿ ತನ್ನಯ ಬಣದ ಮಾಹೇ । ಶ್ವರರನೇ ಕರಿಸಿದನು ಮಿಕ್ಕರನುಳಿದಿದಂ ತಿಳಿದು ॥ ೭ ॥

ಮನದೊಳಳುಕಿ ಮಹಾಶರಣನಾ । ಜನಪನಂ ಕೂರ್ತರಸ ಕೇಳ್ಪಾ । ವನಗಣಾಧಿಪರಲ್ಲಿ ಸಲ್ಲದು ಪಕ್ಷಪಾತಮಿದು ॥ ಮನಸಿಜಾರಿಯ ಭಕ್ತರೀ ವಂ । ಚನೆಗೆ ಬಗೆಗೊಡಬಾರದೆಂದುಂ । ಘನವಿಚಾರವ ಮಾಡು ಛಲಮಂ ತಡೆ ತಿಳಿದುನೋಡು ॥ ೮ ॥

ಗಣವರರೊಳಪರಾಧಮಿರ್ದೊಡು । ಮೆಣಿಸುತವರಂ ತ್ಯಜಿಸದೊಲವಿಂ । ದುಣಿಸಿ ಬೋಧಿಸಿ ತಿದ್ದುವದೆ ಯುಕ್ತಂ ಶಿವಾನ್ವಯಕೆ ॥ ತಣಿಪ ಮಣಿವೆಡೆಗಳೊಳಗವರಂ । ತ್ರಿಣಯನೆಂದೇ ಕಾಣಬೇಕೊಂ । ದಣುಮುದಾಸೀನಮನೆ ತಿಳಿದೊಡೆ ಪಾಪಮಂಟುವದು ॥ ೯ ॥

ಭಕ್ತರಂ ದ್ವೇಷಿಸುವ ಮನುಜನ । ಯುಕ್ತಮಾದಾ ವಿಟ್ಕ್ರಮಿತೆಯಂ । ವ್ಯಕ್ತಮೆನೆ ಪೊಂದುವನು ಭವಭವಗಳೊಳು ತಾನೆಂದು ॥ ಪ್ರಾಕ್ತನರ್ಪೇಳು ತ್ತಿರಲು ಸ । ನ್ಮುಕ್ತಿಗೆಡಿಸುವ ಗಣವಿರೋಧಾ । ಸಕ್ತಿಯಿಂದಂ ದುರ್ಗತಿಯ ಕಷ್ಟಗಳು ಸಮನಿಸವೇ ॥ ೧೦ ॥

ಒಬ್ಬನಂ ಕರೆದುಣಿಸಿ ಮುಳಿದಿ । ನ್ನೊಬ್ಬನಂ ತ್ಯಜಿಸಿದೊಡೆ ಧರ್ಮಕೆ । ನಿಬ್ಬರಮದಲ್ಲೆಂದದಾರ್ಪೇಳ್ದಪರು ಜರುಗಿರ್ದ ॥ ಹಬ್ಬದೊಳು ನಿನ್ನಯ ಹಟವ ಬಿಡು । ಸಬ್ಬರಂ ಕರೆದುಣಿಸಿದೊಡೆ ವ್ಯೈ । ಯುಬ್ಬಿ ನಿನ್ನಂ ಕಾವನಾ ಕಾವನಪಗೆಯನೊಲೆದು ॥ ೧೧ ॥

ಪುರಹರನೆ ಭಕ್ತವ್ರಜವನು । ದ್ಧರಿಸಲೆಂದು ಚರೇಂದ್ರರೂಪವ । ಧರಿಸಿ ಕೃಪೆಯಿಂ ಭೂಮಿಗಿಳಿದಿಹನೀ ಮಹಾತ್ಮರೊಳು ॥ ಮರೆದು ಗ್ರಾಹ್ಯಾಗ್ರಾಹ್ಯತೆಗಳಿಂ । ಬೆರಡು ಬಗೆಯಂ ಭಾವಿಸಿದೊಡಾ । ಹರನನಿತ್ತೆರನಾಗಿ ಕಂಡಂತಾಗದೇ ಪೇಳು ॥ ೧೨ ॥

ಚರನ ವೇಷವ ಧರಿಸಿ ಬಂದಾ । ಚರನ ಚರಣವ ತೊಳೆಯದಿಹ ತ । ನ್ನರಸಿಯ ಕರಾಬ್ಜವನು ಕಲಿಕಂಬಂ ಕಡಿದು ಪಿಂದೆ ॥ ಹರಗಣೇಶತೆವಡೆದುದಂ ನೀ । ನರಿಯದನೆ ಬಿನ್ನಪವ ಪೇಳಿದ । ವರಗಣಂಗಳನುಳಿವುದೆಲ್ಲಿಯ ನೀತಿಯವನೀಶ ॥ ೧೩ ॥

ಕದನರಂಗದೆ ತನಗೆ ಪ್ರತಿಭಟ । ಸಿದ ಭಟನ ಪಣೆಯೊಳು ಭಸಿತಮಿ । ರ್ದುದನು ಕಂಡಕಟಕಟ ಶಿವಭಕ್ತರೊಳು ವೈರವನು ॥ ಮದದಿನೆಸಗಿರ್ದೆನ್ನ ಪಾಪ । ಕ್ಕಿದುವೆ ನಿಷ್ಕೃತಿಯೆಂದಳಿದು ಶಿವ । ಪದವ ಪಡೆದೇಣಾಧಿನಾಥರ ಕಥೆಯ ನೀನರಿಯ ॥ ೧೪ ॥

ಬರದೊಳುದರಂಭರಣದಿಚ್ಛೆಗೆ । ಚರಪದಾರ್ಥವನುಂಡ ಬಳಗವ । ತರೆದು ಸದುಗತಿವಡೆದ ಕೋಲ್ಪುಲಿಯಾಂಡನುತ್ಕಥೆಯ ॥ ಮರೆದೆಯೇಂ ತನುಪತ್ನಿಸುತರಿಂ । ಪರಮಗಣವರರತ್ಯಧಿಕರೆಂ । ದರಿದ ಕಾರಣದಿಂದಸುವನವನಿತ್ತನೂಹಿಸಲು ॥ ೧೫ ॥

ರಣದೆ ಜಡೆದಲೆಯಂತೆ ಕಂಡಾ । ಪೆಣದ ತಲೆಯಂ ನೋಡಿ ಯೋಚಿಸಿ । ಗಣವರನನಾನಿಕ್ಕಿದೆನೆನುತ್ತರಿದಸುವ ತೊರೆದು ॥ ಪ್ರಣುತಶಿವಸುಖಮಂ ಪಡೆದ ಸ । ದ್ಗುಣಿ ಪಗಲ್ಪೋಳನ ಚರಿತ್ರವ । ನಣಿಯುರಂ ಕೇಳಿಲ್ಲವೇ ಪೇಳಿಲ್ಲವೇ ನೀನು ॥ ೧೬ ॥

ಸಡಗರದೆ ಪಸೆನಿಂದ ಮಗಳೊ । ಳ್ಮಡಿಯನುತ್ಸಾಹದೊಳು ಖಂಡಿಸಿ । ತಡೆಯದಲೆ ಚರವರನಪಾದುಕೆಗಿತ್ತು ಮುಕ್ತಿಯನು ॥ ಪಡೆದ ಶ್ರೀಮನ್ಮಾನ ಕಂಜರ । ನಡಿಗಳಬ್ಜಭವಾಂಡಕೋಟಿಯೊ । ಳೆಡೆವಿಡದೆ ಪೂಜ್ಯತ್ವಮಂ ಪಡೆದುದನು ನೀನರಿಯ ॥ ೧೭ ॥

ಇಂತು ಪಿಂತೆ ಪುರಾತನರ್ಕಳು । ಸಂತಸದೆ ಚರವರವಿಧೇಯತೆ । ಯಂ ತಳೆದು ಮೋಕ್ಷಂಬಡೆದು ವಿಖ್ಯಾತರಾಗಿರಲು ॥ ಶಾಂತಚಿತ್ತನೆ ಪಕ್ಷಪಾತಮಿ । ದೆಂತು ನಿನ್ನೊಳು ಸಂಜನಿಸಿದುದು । ಕಂತುಹರಸಮಚರವರೇಣ್ಯರೊಳುಚಿತವೇ ಛಲವು ॥ ೧೮ ॥

ಕರಿಸಬೇಕಿಂದೂಟಕಾ ಗಣ । ವರರನೆಲ್ಲರನೆಂದು ಪೇಳ್ವೀ । ಶರಣನುಕ್ತಿಗೆ ಮನಗರಗಿ ತನ್ನಯ ಬಣದೊಳಿರುವ ॥ ಪಿರಿಯ ಮಾಹೇಶ್ವರರನಿರದಾ । ದೊರೆ ವಿಚಾರಿಸಲವರೊಡಂಬಡ । ದೊರೆದರಾ ಬಣದವರ ಕರೆದೊಡೆ ಪೋಪೆವಾವೆಂದು ॥ ೧೯ ॥

ಅದನು ಕೇಳ್ದಾ ಸಂಗಮಾಖ್ಯಂ । ಬೆದರಿ ಶರಣವರೇಣ್ಯನಭಿಮತ । ವದನು ಪಿಂದಕ್ಕಿಟ್ಟು ತನ್ನಯ ಬಣದ ಗಣಪರನು ॥ ಪದೆದುಣಿಸಿದಂ ಬಳಿಕ ಶರಣಂ । ಹೃದಯದೊಳು ಖೇದಂಬಡೆದು ನಿಜ । ಸದನದೊಳಗಡಿಗೆಯನು ಸವೆದುಳಿದವರನುಣಿಸಿದನು ॥ ೨೦ ॥

ಒಂದೆ ಗ್ರಾಮದ ಚರವರೇಣ್ಯರ । ವೃಂದದೊಳಗರ್ಧವನು ದುಶ್ಛಲ । ದಿಂದುಳಿದು ಭುಂಜಿಸುವದತ್ಯನ್ಯಾಯವೆನ್ನಿಸದೆ ॥ ಮುಂದೆ ಮಂದಿಯ ಮನೆಗೆ ಭೋಜನ । ಕೆಂದುಮೈದಲುಬಾರದಾನಿಂ । ತೆಂದು ವೀರೇಶ್ವರನು ತನ್ನಯ ಚಿತ್ತದೊಳು ನೆನೆದು ॥ ೨೧ ॥

ಮಂದಿಯ ಪೊಲಂಗಳನು ಮಾಳ್ಪುದ । ರಿಂದಮೊಕ್ಕಲತನದ ಕೆಲಸದೆ । ಮಂದಿಯ ಸಹಾಯವನು ಬೇಡುತ್ತಿಹುದರಿಂ ನಾನು । ಮಂದಿಯಳುಕಿನ ಕೂಸಿನಂತಿಹೆ । ನಿಂದಿದಂ ಮಾಳ್ಪುದನೆ ಬಿಟ್ಟೊಡೆ । ಮುಂದೆ ಮಂದಿಯ ಹಂಗದೇನೆಂದಿವನು ಯೋಚಿಸಲು ॥ ೨೨ ॥

ಅಂದಿನಿಂ ಮೊದಲುಳ್ಳ ವಿರತಿಗೆ । ಬಂದುದುತ್ಕಟತೇಜಮುಂ ತಾಂ । ಮುಂದೆ ಕೃಷಿಯಂ ಬಿಟ್ಟು ತತ್ಸಾಮಗ್ರಿಯಂ ಮತ್ತೆ ॥ ಚೆಂದಮುಳ್ಳೆರಡೆತ್ತು ದನಗಳ । ನಂದು ಮಾಹೇಶ್ವರರಿಗಂ ಕರ । ತಂದು ದಾನಮದಾಗಿ ಸಂತಸದಿಂದ ಬಿಡದಿತ್ತು ॥ ೨೩ ॥

ಪರಮಭಿಕ್ಷಾವೃತ್ತಿಯಂ ತಾಂ । ಧರಿಸಿದನಿದೇ ತಕ್ಕುದೆನುತಂ । ತೊರೆದನಾ ಲೌಕಿಕರ ಸಂಗವನಭವಚಿಂತನದೆ॥ ಬೆರೆದನನವರತಂ ಚರಾಧಿಪ । ಚರಣ ಸೇವಾವಿಭವಮೊಂದರೊ । ಳಿರಕುಗೊಂಡಂ ಬೇರೆ ವ್ಯವಹಾರಂಗಳಂ ಮರೆದು ॥ ೨೪ ॥

ಫಾಲದೊಳು ಭಸಿತಂ ಶಿವಾಕ್ಷದ । ಮಾಲೆ ಕೊರಳೊಳು ವಾಮ ಹಸ್ತದೆ । ಜೋಳಿಗೆಯು ದಕ್ಷಿಣಕರದೆ ವೇತ್ರಮದು ಮಸ್ತಕದ ॥ ಮೇಲೆ ಕಾವಿಯಪಾವುಡಂ ಸಮ । ಶೀಲಗೌರವಕಲೆ ವದನದೊಳು । ಮೇಳಯಿಸಿ ರಾಜಿಸೆ ಮಹಾತ್ಮನ ಸೊಬಗನೇನೆಂಬೇಂ ॥ ೨೫ ॥

ಆರೊಡನೆ ಮಾತುಗಳನಾಡದೆ । ದಾರಿಯೊಳಗೆಲ್ಲೆಲ್ಲಿಯುಂ ನಿಲ । ದೋರೆವಿಡಿದವಸರದೆ ಭಕ್ತರಮನೆಗಳಿಗೆ ಹೋಗಿ ॥ ಕೋರುಧಾನ್ಯದ ಭಿಕ್ಷೆ ಯೆನ್ನದೆ । ದ್ವಾರದೊಳಭಾಗದೊಳು ಸೌಮ್ಯವ । ಬೀರುತಿಹ ರೂಪಿಂದ ಸುಮ್ಮನೆ ಮೂಕನಂದದೊಳು ॥ ೨೬ ॥

ನಿಂದಿನಿಸುಪೊಳ್ತೀಕ್ಷಿಸಿ ವಲಂ । ಪಿಂದಕೈತರುತಿರ್ದನಾ ಮನೆ । ಮುಂದಿ ಕಾಣದೊಡುಂ ಭರದೆ ಭಿಕ್ಷೆಯನು ತಾರದೊಡುಂ ॥ ಒಂದು ಹಿಡಿಯಲ್ಲದಲೆ ಹೆಚ್ಚಿಗೆ । ತಂದ ಧಾನ್ಯವನವನು ಹಿಡಿಯುದೆ । ಮುಂದೆ ತನ್ನಿಲಯಕ್ಕೆ ಪೋಗಂ ಭಿಕ್ಷೆಗೆಂದೆಂದು ॥ ೨೭ ॥

ಕಣಕೆ ಪೋದೊಡವಲ್ಲಿ ನೆರೆದಿಹ । ಗಣವರರಿಗಿತ್ತನಿತನಾದೊಡು । ಮೆಣಿಸಲದರಿಂದೂಣೆಯಾದೊಡುಮಿತ್ತೊಡೀತಂಗೆ ॥ ಸನುಮತಂ ಪೆರ್ಚಾದೊ ಡದನಿವ । ನನುಕರಿಸದುಳಿದಾ ಕಣಕೆ ಮುಂ । ದೆನಿತು ಕರೆದೊಡುಮೊಪ್ಪ ಲಿಲ್ಲೀ ಶಿವಸುಕೃತರಮನು ॥ ೨೮ ॥

ಎಸೆವ ಸಿದ್ಧಾಪುರದೊಳವಿರತ । ಮೊಸೆದು ಬಹುತರಧಾನ್ಯಭಿಕ್ಷೆಯು। ನೆಸಗುತಿರ್ದಂ ಶರಣನಾ ನಾಲತ್ತ್ರವಾಡದೊಳು ॥ ನಿಸದಮೆನೆ ಗಂಡೋಲಮಂ ಮಾ। ನಸಕೆ ಬಂದಾ ದಿನಗಳೊಳು ಯಾ । ಚಿಸುತಲಿರ್ದಂ ಪೆರ್ಚಿಗೊಲ್ಲದೆ ತಕ್ಕನಿತನೊಪ್ಪಿ ॥ ೨೯ ॥

ಅರಿಯದವರೀಕ್ಷಿಸಿದೊಡೀತಂ । ಮರುಳನಂದದೆ ಕಂಡಡುಂ ಗುರು। ಚರವರಸಮಾಜದೊಳು ಪಂಡಿತನಾಗಿ ತೋರುವನು ॥ ಮರೆದವರಿಗರಿದವರಿ ಗಂತರ। ಮಿರುವದಾ ಕತ್ತಲೆವೆಳಗುಗಳ । ತೆರದಿನದರಿಂದಿವನನೆಂತರಿದಪರು ಲೌಕಿಕರು ॥ ೩೦ ॥

ಪಕ್ಷಿಗಳು ಫಲಗಳನು ಪಥಿಕರು । ವೃಕ್ಷಗಳ ತಣ್ಣೆಳಲನಾಗಳ್ । ಭಿಕ್ಷಕರು ದಾತೃಗಳನಂಬುದಜಲವ ಚಾದಗೆಯು ॥ ಮೋಕ್ಷಸಾಮ್ರಾಜ್ಯವನು ಪರಮಮು । ಮುಕ್ಷುಗಳ್ಬಯಸುವವೊಲೀ ಘಾ । ಲಾಕ್ಷಶರಣನಪೇಕ್ಷಿಸುತ್ತಿರ್ದಂ ಗಣಾರ್ಚನೆಯ ॥ ೩೧ ॥

ಬಡವನಡವಿಯೊಳಿಡಿದ ಪೊನ್ನಿನ । ಕೊಡವನೀಕ್ಷಿಸಿದಂತೆ ಮನುಜರು । ಬಿಡದವರ್ಷಣಕಾಲದೊಳು ಮೇಘವನು ಕಂಡಂತೆ ॥ ನಡಸಿಕೊಂಬತ್ತೆಯ ಮನೆಯಸೊಸೆ । ಸಡಗರದೆ ತವರೂರ ಕಂಡಂ । ತೊಡನೆ ಶರಣಂ ಪ್ರಮಥರಂ ಕಂಡುಬ್ಬುವಂ ಮುದದೆ ॥ ೩೨ ॥

ಕಾಯಕವ ಬಿಡಲಿಲ್ಲ ಭೌತಿಕ । ಕಾಯನಲ್ಲದ ಶರಣನೆಂದುಂ । ಕಾಯದಿಚ್ಛೆಗೆ ಸೋಲ್ದು ಭುಂಜಿಸಲಿಲ್ಲ ಕಡೆತನಕ ॥ ಕಾಯವೆನ್ನದಿದೆನ್ನದೊಳ್ಪಿಂ । ಕಾಯಚಾರಿಯ ಪ್ರಮಥಸೇವೆಯ । ಕಾಯಮೆಂದುಪಯೋಗಿಸಿರ್ದಂ ಶಿವನ ಕಾರ್ಯದೊಳು ॥ ೩೩ ॥

ಕಾರಹುಳಿಯುಪ್ಪುಗಳ ರುಚಿಯಂ । ಬೇರೆ ಬೇರೆಂದರಿದು ಸವಿಯುದೆ । ಸಾರತರಷಡ್ರಸವನೇಕೀಕರಿಸಿ ವಿಧಿಯಂತೆ ॥ ಮೀರಿದ ಪ್ರಸಾದವನೆಸಗಿ ಮುದ । ವೇರಿ ದಿವದೊಳಗೊರ್ಮೆಯಲ್ಲಾ । ಹಾರಮೆನೆ ಸೇವಿಸುತಲಿರ್ದಂ ಶರಣಪುಂಗವನು ॥ ೩೪ ॥

ತಿಳಿಯೆ ರಸನೋಪಸ್ಥಗಳೆ ಜಗ । ದೊಳಗೆ ನಿಖಿಲಪ್ರಾಣಿಗಳನಂ । ಡಲಿಸಿ ಮೋಕ್ಷಾಯನವ ತಪ್ಪಿಸಿ ಜನನಚಕ್ರದೊಳು ॥ ತಳುವದೀ ಜಗದಾದಿಯಿಂದಂ । ನಿಲದೆ ತಿರುಗಿಪವವುಗಳಂ ಚಂ । ಚಲಿಸದಂತಿರಿಸಿರ್ದ ಶರಣನದೇಂ ಬಲಾನ್ವಿತನೋ ॥ ೩೫ ॥

ವಿಷವನೊಲ್ಲದು ನಾಲಿಗೆಯು ಘನ । ವಿಷಸಮಾನಕಠೋರವಚನವ । ಮೃಷೆಯ ಪಿಸುಣವನಾಡಲೊಪ್ಪುವದತಿಮಧುರವಾದ ॥ ವಿಷಯಕೊಲೆವುದು ಕುಡಿಯಲೊಲ್ಲದು । ವಿಷಗಲನ ಭಜನಾಮೃತವನೀ । ವಿಷಯದೂರನ ರಸನೆ ವಶದೊಳಗಾಗಳಿರ್ದತ್ತು ॥ ೩೬ ॥

ಬೇಡನೆಂಜಲಮಾಂಸರುಚಿಗೊಲೆ । ದಾಡಿದಗಜಾವರನ ನಾಲಿಗೆ । ನಾಡೆ ಮಧುರಾಮೋದಬಹುಪರಿಶುದ್ಧತೆಗಳಿಂದ ॥ ಕೂಡಿದ ಪದಾರ್ಥಗಳ ರುಚಿಯಂ । ಬೇಡದಿರುವೀ ಶರಣರಸನೆಗೆ । ಜೋಡದೆಂದಾರಾಡಿದಪರೀ ಮೇದಿನೀತಲದೆ ॥ ೩೭ ॥

ಲಿಂಗಿಗಳನುಪಚರಿಪನಲ್ಲದ । ಲಿಂಗಿಗಳಿಗನ್ನಂಗುಡಂ ತ । ಲ್ಲಿಂಗಿಗಳೊಳುಚ್ಛಿಷ್ಟಸೂತಕವೀಕ್ಷಿಸದಲಿಹನು ॥ ತುಂಗಮಾಹೇಶ್ವರರು ಭಕ್ತರು । ಹೆಂಗಳರ್ಭಕರೊಂದೆಯೆಂದೇ । ಪಿಂಗದರಿಯುತ್ತಿರ್ದನೂಡುವ ಸಮಯದೊಳು ಮುದದೆ ॥ ೩೮ ॥

ತಾನೆ ಬಿನ್ನಪವೆಸಗಿಯೂಟಕೆ । ತಾನೆ ಕರೆತರುತಿರ್ದನಲಸದೆ । ಸಾನುರಾಗದೆ ಪ್ರಮಥರಂ ಬಿನ್ನಪವ ಕೈಕೊಂಡ ॥ ಮಾನಿಗಳೊಳಾರಾದೊಡೂಟಕೆ । ಮಾನಿಸದೆ ಬಾರದೊಡೆ ತಾನುಂ । ಮಾನಿನೀ ತನುಭವರುಮುಣುತಿರ್ದಿಲ್ಲವಾದಿನದೆ ॥ ೩೯ ॥

ಒಸೆದು ಮೊದಲೊಳು ಪ್ರಮಥಪಙ್ಕ್ತಿಯ । ನೆಸಗಿಯವರಕರಂಗಳೊಳಗು । ಳ್ಳಸಮಲಿಂಗಂಗಳಿಗೆ ಶರಣಂ ತಾನೆ ಕೈಮುಟ್ಟಿ ॥ ಮಿಸುಪ ಮಜ್ಜನ ಭಸಿತಚಂದನ । ಕುಸುಮಬಿಲ್ವಾದಿಗಳಿನುರೆ ಪೂ । ಜಿಸಿ ಬಳಿಕ್ಕೆಡೆಬಡಿಸುತಿರ್ದರ್ಶರಣಶರಣೆಯರು ॥ ೪೦ ॥

ಬೇಡಿದನಿತೆಡೆಬಡಿಸುತಿರ್ದರು । ಕೂಡಿ ದಂಪತಿಗಳ್ಪ್ರಸಾದವ । ನೀಡಿ ದನಿತೊಂದಿನಿಸುಳಿಯದಂತಾ ಪ್ರಮಥರುಂಡು ॥ ನಾಡೆ ತಮ್ಮೆಡೆಬಟ್ಟಲವ ಕೈ। ಯಾಡಿಸುತ ತೊಳೆದಾ ಜಲವನುರೆ । ನೋಡಿ ಕುಡಿದದನೊರಸಿಡುವ ನೇಮ ವನು ಮಾಡಿರ್ದಂ ॥ ೪೧ ॥

ಕೆಳಗೆ ಸೂಸದವೊಲ್ಪ್ರಸಾದವ । ಬಳಸುತಿರ್ದರ್ಶರಣದಂಪತಿ । ಗಳು ಪ್ರಮಥರೆಡೆಬಟ್ಟಲಿನ ಸುತ್ತೊತ್ತುಕ್ಕುದಂ ನೋಡಿ ॥ ತಿಳಿಸುತಿರ್ದರ್ಕೊಳ್ಳಿರೆನುತಿ । ನ್ನೆಳೆಯರಿರ್ದೊಡೆ ತಾವೆ ತೆಗೆದವ । ರ್ಗಳ ವದನದೊಳು ಹಾಕುತಿರ್ದರು ಸ್ನೇಹಭಾವದೊಳು ॥ ೪೨ ॥

ಅವರು ಭುಂಜಿಸಿ ಪೋದ ಬಳಿಕೀ । ಶಿವಶರಣನಾ ಸ್ಥಲದೆ ನಿರುಕಿಸಿ । ಸ್ರವಿಸಿದ ಪ್ರಸಾದಾಂಶವನು ಬಟ್ಟಲೊಳು ಕೂಡಿಟ್ಟು ॥ ತವಕದಿಂ ಪೂಜಿಸಿಯದಂ ತಾಂ । ಸವಿವುತಿರ್ದಂ ಪಾಕಭಾಂಡವ । ತವೆ ತೊಳೆದು ಸೇವಿಸುತಲಿರ್ದಂ ಕಣಮುಳಿಯದಂತೆ ॥ ೪೩ ॥

ಎರೆವುತಿರ್ದರ್ಸಲಿಲಮಂ ಪ್ರಮ । ಥರಿಗೆ ಕುಡಿವನಿತವರಗಿಂಡಿಯೊ । ಳರುಪುತಿರ್ದರ್ನೀರನೆಲ್ಲವ ಕುಡಿದು ಗಿಂಡಿಯನು ॥ ಒರಸಿರೆಂದಿಂತೀ ಪ್ರಸಾದದೆ । ಪರಮತೀರ್ಥದೊಳುಳ್ಳ ಶ್ರದ್ಧೆಯ । ನೊರೆಯಲೆನ್ನಿಂ ಸಾಧ್ಯಮೇ ವಿಖ್ಯಾತಮಿಹುದವರ ॥ ೪೪ ॥

ಬಿಂದುಮಾತ್ರಂ ತುಪ್ಪಮಿರಲುಂ । ಬಂದ ಸರ್ವಪ್ರಮಥರಿಗೆ ಸ । ಲ್ವಂದದಿಂದೆಡೆಮಾಡುತಿರ್ದರ್ಸರ್ಜಿಯಿಂ ಬಿಡದೆ ॥ ಒಂದಡಕೆಯೊಂದೆಲೆಯದಿರಲುಂ । ಬಂದನಿತನೆಲ್ಲರಿಗದರೊಳಾ । ನಂದದಿಂ ಸರಿಗೊಳಿಸುತಿರ್ದನಿದೇನ ಭಿನ್ನತೆಯೊ ॥ ೪೫ ॥

ಒಂದು ಸಮಯದೊಳುಜ್ಜಯಿನಿಯಾ । ಸುಂದರಜಗದ್ಗುರುವರೇಣ್ಯನ । ಮಂದತರಶಾಖಾಧಿಕಾರಸುಶಾಸನವ ಪಡೆದು ॥ ಪೊಂದಿ ಚರಪಟ್ಟದವ ನೋರ್ವಂ । ಬಂದನೀ ನಾಲತ್ತವಾಡಕೆ । ದುಂದುಭೀಕಾಹಳೆಗಳಾರವವೆಸೆಯೆ ಪೆಂಪಿಂದ ॥ ೪೬ ॥

ಎರಡುಗಜವಿರೊರೊಂಟೆ ಮೇಣೀ । ರೆರಡು ಹಯಮೆಂಟೆತ್ತು ತೊಂಬ । ತ್ತೆರಡು ಪರಿಜನರಿರ್ದರವನೊಳು ಬಿನ್ನಪವನೆಸಗಿ ॥ ಕರೆದುತಂದಂ ಭೋಜ ನಾರ್ಥಂ । ಶರಣನವರೊಳಲಿಂಗಿಗಳನುಳಿ । ದುರೆನಿಜಾಲಯಕಾತನಂ ಪರಿವಾರ ಸಹವಾಗಿ ॥ ೪೭ ॥

ಮನೆಯೊಳಗೆ ದಿನಸೇನುಮಿಲ್ಲಂ । ವನಿತೆಯುಂತಾನುಂ ತನಯರುಂ । ದಿನದಿನದೊಳೊಪ್ಪತ್ತುಮಾಡುವರೂಟವಿಂತಿರಲು ॥ ತನಗಿದೇಕೊಣಹೆಮ್ಮೆ ನೂರಾ । ರ್ಜನರನೆಂತಿವನುಣಿಪನೆನುತಂ । ಮನಕೆ ಬಂದಂತಣಕವಾಡಿದರೂರ ಕೆಲಜನರು ॥ ೪೮ ॥

ಸಣ್ಣಹಳೆಮಂದಿರವನೆಸಗಿದ । ಸಣ್ಣಡಗಿಯಂ ಪರಿದ ಶೀರೆಯ । ಸಣ್ಣ ನಡುವಿನ ಧರ್ಮಭಾರ್ಯಾಮಣಿಯನೊಣಗಿರ್ದ ॥ ಸಣ್ಣಕಾಯದಶರಣನಂ ಕಂ । ಡುಣ್ಣುವದದೇನಿಲ್ಲಿಯೆನುತಂ । ಸಣ್ಣಮನದಿಂ ಗುಜುಗುಜಿಸಿದರ್ಬಂದ ತಜ್ಞನರು ॥ ೪೯ ॥

ಲಿಂಗಪೂಜಾನಂತರಂ ಪಾ । ಕಂಗಳಂ ಬಿಡದೆಡೆಬಡಿಸಿ ಬಲು । ಪೊಂಗಿ ವಂದಿಸಲುಣ್ಣಲಾರಂಭಿಸಿದರವರಂದು ॥ ಸಂಗಳಿಸಿದರ್ಪಣಪದಾರ್ಥಸು । ಖೇಂಗಿತವನಾನೇನುಹೇಳಲಿ । ಪಿಂಗಿದರು ಬೇರಾದ ವ್ಯವಹಾರಂಗಳೆಚ್ಚ ರವ ॥ ೫೦ ॥

ಪಿಂದೆ ಮೋಳಿಗೆಮಾರವಿಭುವಿನ । ಮಂದಿರದೆ ಗಣವರರು ಷಡುರಸ । ದಿಂದ ತಣಿದುದನಾಲಿಸುತ್ತಿರ್ದೆವು ಪುರಾಣದೊಳು ॥ ಇಂದು ಶರಣನ ಸುಪ್ರ ಸಾದವ । ನಂದದಿಂ ನಲಿದುಂಡು ಪರಮಾ । ನಂದಮಂ ಪೊಂದಿದೆವೆನುತ್ತಂ ಪೊಗಳ್ದರವರೊಪ್ಪಿ ॥ ೫೧ ॥

ಬಸವರಾಜನ ಮಂದಿರದೊಳಂ । ದೆಸಗುತಿರ್ದಾ ಬಗೆಬಗೆಯ ಷ । ಡ್ರಸಮಯೋದನವಿರೊ ಮಹಾಶಿವಶರಣನಾಲಯದ ॥ ಮಿಸುಪ ದಿವ್ಯೋಗರಕೆ ಸರಿಯೆ । ನ್ನಿಸುವದೋ ಸರಿಯಾಗದೋ ನಾ । ವುಸುರುವದದೆಂತೆಂದವರು ಹಿಗ್ಗಿದರು ನಲುವೇರಿ ॥ ೫೨ ॥

ನೀಡಿದನಿತವರುಣ್ಣುತಿರ್ದರು । ಬೇಡಿದನಿತಿವರೂಡುತಿರ್ದರು । ನೀಡಿದುದನುಂಡುಂಡು ಕೊನೆಗಿನ್ನೊಲ್ಲೆವೆಂದೆನುತ ॥ ಬೇಡಿಕೊಂಡರು ಬಳಿಕ ಶರಣಂ । ನೋಡಿ ತಚ್ಚರಪಟ್ಟೆದಾರ್ಯಗೆ । ನಾಡೆ ಕಾಣಿಕೆಯಾಗಿ ಕೊಟ್ಟಂ ಕಲ್ಲುಸಕ್ಕರೆಯ ॥ ೫೩ ॥

ಇದು ಪ್ರಸಾದಮೆನುತ್ತವಂ ಸ । ಮ್ಮುದದೆ ನಿಜಪರಿವಾರದೊಳು ಹಂ । ಚಿದನು ಭೂಹಿತಮಾದಿವನ ಮಹಿಮೆಯನು ಮನಗಂಡು ॥ ಕುದುರೆಯೆತ್ತು ಗಜೌಷ್ಟ್ರಗಳಿಗಂ । ದೊದಗಿಸಿದನಾಹಾರಮನಿವಂ । ಪದೆದಿದೆಲ್ಲವನರಿದು ವಿಸ್ಮಿತರಾದರೂರವರು ॥ ೫೪ ॥

ಮನೆಯಡಿಗೆಯುಟ್ಟಿರ್ದ ವಸನಂ । ತನುವಿವೆಲ್ಲಂ ಸಣ್ಣವಿರಲೇ । ನನ ಘನಾದೀ ಶರಣನ ಮನಂ ಸಣ್ಣದೇ ತಿಳಿಯೆ ॥ ಮನಸಿಜಾರಿಯ ಶರಣರಿರವಂ । ಮನಸಿಜಾರಿಯ ಭಕ್ತರಲ್ಲದೆ । ಮನುಜರೆಂತರಿವರ್ಪ್ರಪಂಚವಿಮೂಢ ಮಾನಸರು ॥ ೫೫ ॥

ಎಂತು ತಂದನೊ ಬೇಳೆಯಕ್ಕಿಯ । ನೆಂತು ತಂದನೊ ಹಿಟ್ಟು ಬೆಲ್ಲವ । ನೆಂತು ತಂದನೊ ತುಪ್ಪ ಸಕ್ಕರೆ ಹಾಲು ಮೊಸರುಗಳ ॥ ಎಂತು ತಂದನೊ ಪಾಕಭಾಂಡವ । ನೆಂತು ತಂದನೊ ಪಲವು ದಿನಸನು । ಕಂತುಮರ್ದನಗಲ್ಲ ದಿನ್ನುಳಿದರ್ಗೆ ಗೋಚರವೇ ॥ ೫೬ ॥

ಬೇರೆ ಜನರಂ ಕರೆಯಲಿಲ್ಲೀ । ನಾರಿ ಪಾಕವನೆಸಗಲೆಂದತಿ । ಸಾರತರ ಮೆನಲೆಸಗಿದಳ್ತಾನೋರ್ವಳೇ ಬಳಿಕ ॥ ಗೌರವದ ಶಾಖಾಧಿಪತಿಪರಿ । ವಾರ ಮಂ ಗೊಂದಲಮದಿಲ್ಲದೆ । ಚಾರುಜಾಯಾಪತಿಗಳೀರ್ವರೆ ನೀಡಿ ತಣಿಸಿದರು ॥ ೫೭ ॥

ಕ್ರಮಯುತಂ ಷಟ್ಸ್ಥಲಕಲಾವಿದ । ನಮಿತಗೌರವಶಾಲಿ ವಿಷಯ । ಭ್ರಮವಿಭಂಜನನರ್ದಿತಾಶಂ ಶಂಭುಸುವ್ರತನು ॥ ಶಮದಮಾದಿಗುಣೋದಯಂ ಶಿವ । ಸಮಯಮಂದಾರಂ ಸುಶಾಂತಂ । ವಿಮಲವೀರೇಶ್ವರಶರಣನಭಿವಂದ್ಯನಕ್ಕೆನಗೆ ॥ ೫೮ ॥

ಅಂತು ಸಂಧಿ ೫ಕ್ಕೆ ಪದಗಳು ೨೮೦. ಶಿವಂ.



ಶ್ರೀ ಮಹಾಲಿಂಗಾಯ ನಮಃ



## ಆರನೆಯ ಸಂಧಿ ಪ್ರಾರಂಭ.

ಸೂಚನೆ ॥ ಬಾಲಕನಿಗಿನಿ ವಣ್ಣನಿತ್ತನು । ಕ್ಷೂಲಮೆನ್ನೆ ರ್ಘೋಗಿಯನುಪಾಲಿಸಿ । ಲೀಲೆಮಿಗೆವೀರೇಶ್ವರಂ ಗುರುಕರ ಜನೆನಿಸಿದನು ॥ ಪಲ್ಲವ ॥

ಪದ ॥ ವಾರಣಾಜಿನಚೇಲ ಸದ್ಗುಣ । ವಾರಮಂಡನ ಭಾಳಲೋಚನ । ವಾರಿಜಾನನಪಾಕಶಾಸನಮುಖ್ಯಸುರಮಾನ್ಯ ॥ ಮಾರಮರ್ದನ ಭವವಿಮೋಚನ । ಧೀರ ಪಾವನಗಾತ್ರ ಚಿದ್ಘನ । ಮೇರುಕಾರಣ ನಂದಿವಾಹನ ಪೊರೆ ಶಿವಾರಮಣ ॥ ೧ ॥

ಅವುದೋ ಕಾರ್ಯಾರ್ಥಮೆಂದೀ । ದೇವನೊಂದೋಣಿಯೊಳು ಬರಲಾ । ತಾವಿನೊಳು ಕಲಬುರಗಿಯಾ ಗಂಗಪ್ಪನೆಂಬವನ ॥ ಜೀವದೆಳೆಬಾಲಕನು ಹಟದಿಂ । ಮಾವಿನಫಲಕ್ಕಾಗಿ ನಿಡುಸರ । ದೀವೆ ರೋದಿಸುತಿರ್ಪುದಂ ಕಂಡಾಗ್ರಹಿಸುತಾಗ ॥ ೨ ॥

ಎಲವೊ ಗಂಗಪ್ಪಾಖ್ಯ ನೀನೇ । ಕಳಿಸುವೆಯೊಯಿ ಚಿಕ್ಕಮುಗುವಂ । ತಿಳಿವುದಿಲ್ಲವೆ ದೇವರಿತ್ತೀ ಸುತನು ಬೇಡಿದುದ ॥ ಒಲವಿನಿಂ ನೀನಿತ್ತು ಸಂತೈ । ಸಳಿಸಬಾರದು ಮಕ್ಕಳನೆನು । ತ್ತಲಸದುಸಿರಲ್ತಾಯಿತಂದೆಗಳೀತನಂ ಕೂರ್ತು ॥ ೩ ॥

ಓ ಗುಣಾಢ್ಯ ಮಹಾನುಭಾವನೆ । ಪೋಗಿರುವದಾ ಸುಗ್ಗಿಯೊತಂ । ಗೀಗಳೆಲ್ಲಿಂ ತರ್ಪುದೈ ಮಾಪಣ್ಣನರ್ಥಿಪನು ॥ ರಾಗದಿಂ ಬೆಲ್ಲವನು ಕೊಡೆಬಲು । ಬೇಗಿ ರೋದಿಪನೇನುಮಾಳ್ಪುದು । ನೀಗುವದದೆಂತೆಮ್ಮ ಕೈಯಿಂದೆನಲದಂ ಕೇಳ್ದು ॥ ೪ ॥

4*

ಶರಣನಲ್ಲಿಯೆ ನೆರೆದ ಜನರೊಳು । ಸರಸಮೃದುಲವಚನದಿನೋರ್ವನ । ಕರೆದು ನಿಮ್ಮಯ ಮನೆಯ ಮಾಡದೊಳಿಹುದು ಮಾಹಣ್ಣು ॥ ಭರದಿನೀತಗೆ ತಂದದಂ ಕೊಡು । ತರುಳನಳುತಿಹನೆಂದು ಪೇಳಲು । ಬೆರಗುವಡೆದಾಲಯಕೆ ಬಂದಾ ತಾಣದೊಳೆ ನೋಡೆ ॥ ೫ ॥

ಇದ್ದುದೊಂದಿನಿವಣ್ಣದಂ ನೆರೆ । ದಿದ್ದ ಜನರೆದುರಿನೊಳು ತಂದಾ । ಮುದ್ದುಮೊಗದೆಳೆಯಂಗೆ ಕೊಟ್ಟೆಮ್ಮಯ ನಿವಾಸದೊಳು ॥ ಸದ್ದಯಾತ್ಮನ ಮಹಿಮೆಯೇ ಮಡು । ಗಿದ್ದುದಲ್ಲದಕಾಲದೊಳಗೀ । ಸುದ್ದಿಯಂ ನಾವರಿಯೆವೆಂದವನಂದು ನುತಿಸಿದನು ॥ ೬ ॥

ಶರಣನಾ ಮಂದಿರದ ಮುಂದಿನ । ಪಿರಿಯಕಟ್ಟೆಯಮೇಲೆ ಕುಳಿತಾ । ದರದೆ ನೆರೆದ ಜನಾವಳಿಗೆ ಸಾಮಾನ್ಯಧರ್ಮವನು ॥ ಸರಳಭಾಷಾಸರಣಿಯಿಂದಂ । ಸುರಸಮೆನೆ ಗಾಂಭೀರ್ಯಮುಂಮಿಗೆ । ಯೊರೆವುತಂ ಕರುಣಾರಸಾನ್ವಿತದೃಷ್ಟಿಯಿಂ ನೋಡಿ ॥ ೭ ॥

ದೂರದೊಳು ಸಿದ್ಧಪ್ಪನೆಂಬಾ । ಘೋರಕುಷ್ಠಾಮಯದ ಮನುಜಂ । ನಾರುತಿಹ ದುರ್ಗಂಧದಿಂ ಪೋದಂಗುಲಿಗಳಿಂದ ॥ ಸೋರುತಿಹ ಕೀವ್ನೆತ್ತರಿಂಬಾ । ವೇರಿದಡಿಕೈಮೊಗಗಳಿಂ ಚಲು । ವಾರಿ ಬತ್ತಿದ ದೇಹದಿಂ ಕಡುದೀನಭಾವದೊಳು ॥ ೮ ॥

ನಿಂದು ತನ್ನಂ ನೋಡುತಿರಲವ । ನಂ ದಯಾಘನನಾದ ಶರಣಂ । ಚೆಂದದಿಂದಂ ಕರೆದು ಬಳಿಯೊಳು ಕುಳ್ಳಿರಿಸಿ ಕೊಂಡು ॥ ಇಂದಿವನನುಣ್ಣಿಸುವೆನೆಮ್ಮಯ । ಮಂದಿರದೊಳಿದಕೊಪ್ಪುವರೊ ಕೇ । ಳೆಂದು ಗೌಡನ ಬಳಿಗೆ ಕಳಿಸಿದನೋರ್ವನಂ ಕರೆದು ॥ ೯ ॥

ಘೋರಕುಷ್ಠಾಮಯದ ಸಿದ್ಧನ । ನೂರಹೊರಗಿಡಬೇಕೆನುತ್ತೀ । ಯೂರವರು ಮಾಡಿರುವರಾದೊಡೆ ತಮ್ಮ ಮನಕಿಂದು ॥ ತೋರಿದಂದದೆ ಮಾಡಲೆಂದೀ । ವೀರಶರಣಂಗಂದು ಗೌಡಂ । ವೀರದಲೆ ಬಂದವನೊಡನೆ ತಾಂ ಪೇಳಿ ಕಳಿಸಿದನು ॥ ೧೦ ॥

ಗೌಡನಾಡಿದ ಮಾತನಾಲಿಸಿ । ಗೌಡನನುಮತಿಸಿದನು ಸಾಕಾ । ಗೌಡನೊರೆದ ಬಳಿಕ್ಕ ಭಯಮಿನ್ನೇನುಗ್ರಾಮಕ್ಕೆ ॥ ಗೌಡನೇ ತಾಯ್ತಂದೆ ತಾನೆಂ । ದಾಡುತವನಂ ತನ್ನಮನೆಯೊಳ । ಗೂಡಿಕಳುಪಿದನಂದಿನಿಂ ಮುಂದಲ್ಪ ಕಾಲದೊಳು ॥ ೧೧ ॥

ಬಿಟ್ಟು ಪೋದುದು ಸಿದ್ಧನಾಮನ । ಕೆಟ್ಟಕುಷ್ಠಂ ಮೈಯೊಳಿರ್ಪಳ । ವಟ್ಟು ಕೈಕಾಲ್ಗಳ ಬೆರಳು ಮೊಳೆತವನು ಮೊದಲಂತೆ ॥ ನೆಟ್ಟಗಾಗಿ ಮಹಾತ್ಮ ನಡಿಯಂ । ಮುಟ್ಟಿ ವಂದಿಸಿ ಮುಗುಳ್ದು ನಿನ್ನಿಂ । ಪುಟ್ಟಬಂದೆನು ದೇವ ಕರುಣಾರ್ಣವ ಚಿದನುಭಾವ ॥ ೧೨ ॥

ಹೇಸುತಿರ್ದರು ನೋಡಿ ಗ್ರಾಮದೊ । ಳಾ ಸಮಸ್ತನರರ್ಕಳೆನ್ನಂ । ಕೂಸನೊಲ್ಪಿಂ ತಂದೆ ತಾಯ್ಗಳು ಹತ್ತಿಗರೆವಂತೆ ॥ ಹೇಸದೋಸರಿಸದಲೆ ಕೃಪೆಯಿಂ । ದಾಸರವನಿತ್ತೋವಿದ್ದೆ ಮು । ನ್ನೇಸುಕಾಲಕೆ ಮರೆದಪೇಂ ನಿನ್ನುಪಕೃತಿಯನಾನು ॥ ೧೩ ॥

ನೆಟ್ಟಗಿರ್ದೊಡೆ ಮಡದಿ ಮಕ್ಕಳು । ನೆಟ್ಟಗಿರ್ದೊಡೆ ತಂದೆತಾಯ್ಗಳು । ನೆಟ್ಟಗಿರ್ದೊಡೆ ನಂಟರಿಪ್ಪರು ಮಿತ್ರಬಂಧುಗಳು ॥ ನೆಟ್ಟಗಿರ್ದೊಡೆ ಜಾತಿಕುಲಗಳು । ನೆಟ್ಟಗಿರ್ದೊಡೆ ಜಾಣ್ಮೆಬಲಗಳು । ಕೆಟ್ಟೊಡಾರಾರಿಲ್ಲ ಕೇಳನಿಮಿತ್ತ ಹಿತಬಂಧು ॥ ೧೪ ॥

ಗುರುವೆ ಕೇಳ್ವೆ ಕರ್ಚಿದೆಲ್ಲಂ [೧] । ಪಿರಿದು ಮಲಿನತೆ ದಾಳಿದೆನ್ನಂ । ಧರಣಿಯೊಳು ಸರ್ಪಗಳ ಬಳಗಂ ಕರ್ಚಲಂಜಿದುದು ॥ ಅರರೆ ಕನಿಕರದಿಂದ ನೀನೇ । ಕರೆದು ಕರ್ಚಿ [೨] ಸಮಂತು ಶುದ್ಧೀ । ಕರಿಸಿ ಪೊರೆದೆಯನಾಥ ರಕ್ಷಣಕಾಯವಾಗ್ಭಾವ ॥ ೧೫ ॥

ನಿನ್ನದರ್ಶನವಾಕ್ಪ್ರಭಾವಂ । ನಿನ್ನ ಪಾಣಿಸ್ಪರ್ಶನಂ ಮೇ । ಣ್ನಿನ್ನಸಹಸಂಚಲನವಿಭವಂ ಶಾಂತಿಕರಮಾದ ॥ ನಿನ್ನಮಲನಿಲಯಪ್ರವೇಶಂ । ನಿನ್ನದಿವ್ಯತರಪ್ರಸಾದಂ । ಮುನ್ನಿನಭವಂಗಳೆಯದೇ ಮಹಿಮಾಮೃತ ಸಮುದ್ರ ॥ ೧೬ ॥

೧. ಮಾಂಸ. ೨. ಕಚ್ಚು. ೩. ತೊಳೆದು.

ನೀನೆ ಪ್ರಮಥಕುಲಾಗ್ರಗಣ್ಯಂ । ನೀನೆ ಮಹಿತಾಗಣ್ಯಪುಣ್ಯಂ । ನೀನೆ ಮನುಮುನಿನಿಕರಮಾನ್ಯಂ ಶೈವಸುಖಪೂರ್ಣಂ ॥ ನೀನೆ ಭುವನೋತ್ತ ರಸುಧನ್ಯಂ । ನೀನೆ ಯೋಗಿವ್ರಜವರೇಣ್ಯಂ । ನೀನೆ ಮುಕ್ತಿಮನೋರಮಾ ರಮಣಂ ಜಗತ್ತ್ರಾಣಂ ॥ ೧೭ ॥

ಹಿಂದೆ ಬಹುಜನ್ಮಗಳೊಳೆಸಗಿದ । ಮಂದಘನಪುಣ್ಯಪ್ರಭಾವದಿ । ನಿಂದು ನಿನ್ನ ದಯಾಮೃತರಸಾಪಾಂಗದೀಕ್ಷಣದೆ ॥ ಹೊಂದಿದೆನು ಸಾಮಾನ್ಯ ರಿಗೆ ನಿ । ನ್ನಂದಮದು ಗೋಚರವೆ ಗುರುವೇ । ತಂದೆ ನೀನೆನಗೆಂದು ಸಿದ್ಧಾಖ್ಯಂ ನುತಿಸಲಾಗ ॥ ೧೮ ॥

ಏನಪಾ ಸಿದ್ಧಪ್ಪ ಸುಮ್ಮನೆ । ನೀನು ಪೊಗಳುವೆಯೇತಕೀ ಪರಿ । ಮೀನರಥರಿಪುಗಣವರೇಣ್ಯರ ದಾಸರೊಳಿಗದ ॥ ದೀನನಾದೆನ್ನಲ್ಲಿ ಲೇಸಿ । ಲ್ಲಾ ನಿರಘುಗುರು ಪೊರೆದನವನಂ । ಧ್ಯಾನಿಸೆಂದೊರೆದಾತನಂ ಶರಣಂ ಕಳುಂಪಿದನು ॥ ೧೯ ॥

ಕ್ಷಿತಿಯೊಳವಿಚಾರಿಗಳು ತಮ್ಮಯ । ತುತಿಗೆ ಮೇಣ್ಪರನಿಂದೆಗೊ ಪ್ಪುವ । ರಿತರಸುಗುಣಸ್ತುತಿಗೆ ಸೈರಿಸರಮಲಗುಣಮುಳ್ಳ ॥ ನುತಸದಾಚಾರಿ ಗಳು ನಿಜಗುಣ । ವಿತತಿಯಂ ಮರೆಪಿಡುತಮನ್ಯ । ಸ್ತುತಿಗೆ ಹಿಗ್ಗುವರಿವ ರೊಳೆಂತುಟೊ ಗುಣವಿಭೇದಗಳು ॥ ೨೦ ॥

ವ್ರತತಪೋನುಷ್ಠಾನಜಪಸ । ತ್ಕೃತಿಗಳಿಗೆ ಮೆಚ್ಚದಿಹ ದಾಂಭಿಕ । ಮತಿಯಮೂರ್ಖಮನುಷ್ಯಮೃಗಮಂ ಮರುಳ್ಗೊಳಿಸಲೆಂದು ॥ ಅತಿಶಯದೆ ಪರದೂಷಣಾತ್ಮ । ಸ್ತುತಿಗಳೆಂಬೀ ಘೋರವೋಹಾ । ನ್ವಿತಮಹಾಜಾಲಗಳ ನೆಸಗಿದನಜನದೇಂ ಬುಧನೋ ॥ ೨೧ ॥

ಸುಗುಣಮಂ ಕಾಣದಲೆ ನರರಂ । ಪೊಗಳುವವರಲ್ಲೆಮ್ಮ ಶರಣರು । ಸುಗುಣಿಗಳ ಸಮ್ಮುಖದೊಳವರಂ ನುತಿಸುವವರಲ್ಲ ॥ ಪೊಗಳ್ದು ಕಾರ್ಯವ ಸಾಧಿಸುವರ । ಲ್ಲಗಸುತಾಧವಚರಣನುತಿಯಿಂ । ದಗಲುವವರಲ್ಲನ್ಯದೂಷಣೆ ಗೊಪ್ಪುವವರಲ್ಲ ॥ ೨೨ ॥

ಅನವರತಮಾತ್ಮಸ್ತುತಿಪ್ರಿಯ । ನೆನಿಸಿರುವ ಗೌರೀಶಗಿಂದೆ । ಳ್ಳನಿತು ಮಾತ್ಮಸ್ತುತಿಗೆ ಸೈರಿಸದೀ ಶರಣತತಿಯು ॥ ವನರುಹಭವಾಂಡದೊಳಧಿಕಮೆಂ । ದೆನುತುಲಿವ ನಿಗಮಾಗಮಂಗಳ । ಘನವಚನಮುಪಚಾರವಾಕ್ಯಮಿದೆಂಬ ರಾರ್ಮತ್ತೆ ॥ ೨೩ ॥

ಕರಮುರಿಯೆ ನಾಲತ್ತವಾಡದ । ಪುರದೆ ಮೆರೆವ ಪಿನಾಕಿಮಠದೊಳು । ಗುರುಚರಣಸೇವಾನಿರತೆ ಲಿಂಗಾರ್ಚನಾಪ್ರೀತೆ ॥ ಚರವರಾತಿಥ್ಯಪ್ರಪೂರಿತೆ । ವರಶಿವಾನುಭವೈಕನಿಷ್ಠೆ ಸು । ಚರಿತೆಯಿರ್ದಳ್ವೀರಮೂಂಬೆಯೆನಿಪ್ಪ ಶಿವ ಶರಣೆ ॥ ೨೪ ॥

ಆ ಮಹಿಳೆ ನಿಡಗುಂದಿಯೆಂಬುವ । ಗ್ರಾಮದೊಳಗಿರುತಿರ್ದ ಕಾವಲಿ । ಸ್ವಾಮಿಯಿಂದಮನುಗ್ರಹಂಬಡೆದಭವಭಕ್ತಿಯೊಳು ॥ ಭೂಮಿಯೊಳಗಕಲಂಕ ವೃತ್ತಿಯೊ । ಳಾ ಮಹಾವಚನಾನುಭವದೊಳು । ಪ್ರೇಮದಿಂ ಪರಿಣಮಿಸುತಿರ್ದಳು ಶಾಂತಮನಳಾಗಿ ॥ ೨೫ ॥

ಅವಳ ಭಕ್ತಿವಿರಕ್ತಿಗೊಲೆದು । ತ್ತವದೊಳಾಕೆಯ ಮಠಕೆಗುರುಪುಂ । ಗವನು ಬರುಹೋಗುತ್ತಲಿರ್ದಂ ಸಂತತಂ ಬಿಡದೆ ॥ ಅವನು ಬಂದಾ ಸಮಯ ದೊಳಗೀ । ಶಿವಶರಣನವನೆಡೆಗೆ ಪೋಗು । ತ್ತವಿಕಲಶಿವಾನುಭವಸುಖದೊಳು ಪರಿಣಮಿಸುತಿರ್ದಂ ॥ ೨೬ ॥

ಆ ಶರಣೆಯೆಡೆಗೊಲ್ಪಿನಿಂ ಬಿಡ । ದೀ ಶರಣನೊಮ್ಮೊಮ್ಮೆಯಿವನೆಡೆ । ಗಾಶೆಯಿಂದವಳೈದುತಭವಾನುಭವ ಶಾಸ್ತ್ರವನು ॥ ಸೋಸಿ ನೋಡಿ ವಿಚಾರ ಪೂರ್ವಕ । ಮೊಶಸುಖಶರನಿಧಿಯೊಳೀರ್ವರು । ಲೇಸುಮಿಗೆಯೋಲಾಡುತಿರ್ದ ರ್ಪುಣ್ಯಮಯರಾಗಿ ॥ ೨೭ ॥

ಪೇಳುತಿರ್ದರು ವಚನಶಾಸ್ತ್ರವ । ಕೇಳುತಿರ್ದರು ಬಲ್ಲಜನರಿಂ । ತಾಳು ತಿರ್ದರು ಮತಿಯೊಳಾ ಶಿವಶಾಸ್ತ್ರವಿಷಯವನು ॥ ಮೇಲೆ ಚಿಂತನೆಗೈವು ತಿರ್ದರು । ಹಾಳುಹರಟೆಯನಾಡದೀ ಪರಿ । ಕಾಲಮಂ ಕಳೆವುತ್ತಲಿರ್ದರು ಸತ್ಪಸಂಗದೊಳು ॥ ೨೮ ॥

ಅನುಭವಂ ಪಿರಿದಾಗೆ ಶರಣನ । ಮನದ ಕಲ್ಪನೆ ಹಿಂಗಿಹೋದುದು । ಜನದ ವಾರ್ತೆಗೆ ಶ್ರೋತ್ರಗಳು ಕಿವುಡೆನಿಸಿದವು ಮತ್ತೆ ॥ ವಿನುತಗುರುಶಿವ ಲಿಂಗಚರಪಾ । ವನಚರಣಸೇವಾನುರಾಗಂ । ತನುಮನೋಭಾವಂಗಳೊಳ್ತೀವಿದುದು ಪೊಳ್ಪಿಡದೆ ॥ ೨೯ ॥

ಕೊಡೆಯುಕಲ್ಲಿಂಬೂರ ಬೆಟ್ಟದೆ । ಸಡಗರದ ಶಿವಯೋಗಸುಖಮಂ । ಪಡುತಿರುವ ಶಿವಯೋಗಿಯೋರ್ವಂ ಸ್ವೇಚ್ಛೆಯಿಂದೊರ್ಮೆ ॥ ಬಿಡದೆ ಸಂಚರಿಸುತ್ತಮಿಾ ಘನ । ಮೃಡಶರಣನಾಲಯಕೆ ಬಂದಂ । ಕಡುಬಯಕೆಯಿಂ ನೋಡಬೇಕೆಂದೊಲಿದತಿಥಿಯಾಗಿ ॥ ೩೦ ॥

ಆ ಶಿವಜ್ಞಾನಿಯನು ಕಂಡೊಡ । ನೀ ಶರಣನಿಗೆ ಶಕ್ತಿಪಾತಂ । ಲೇಸುಮಿಗೆ ಕೈಗಣ್ಮಿ ತಚ್ಚರಣಕ್ಕೆ ಮೈಯಿಕ್ಕಿ ॥ ದಾಸಭಾವದೊಳುಪಚರಿಸಿ ಸಲೆ । ಭಾಸುರಶಿವಾನುಭವಗೋಷ್ಠಿಯ । ನಾಸರಿಯದಾಡುತ್ತ ಭಾವಿಸಿ ಪಲವು ಬಗೆಯಿಂದ ॥ ೩೧ ॥

ಆತನ ಸದಾಚಾರಮಂ ಜ್ಞಾ । ನಾತಿಶಯಮಂ ಶಾಂತಿಗುಣಮಂ । ನೀತಿನಿಪುಣತೆಯಂ ದಯಾಸೌಂದರ್ಯತಪಗಳನು ॥ ವೀತರತಿಯಂ ಲಿಂಗಪೂಜಾ । ಪ್ರೀತಿಯಂ ಘನಶಾಸ್ತ್ರಪರಿಣತೆ । ಪೂತಕಲೆಯಂ ಶುಚಿತೆ ಸುಮುಖತ್ವಂಗಳಂ ನೋಡಿ ॥ ೩೨ ॥

ಗುರುಕುಲೋದ್ಭವನಕುಟಿಲಂ ಶ್ರೀ । ಕರಭಸಿತರುದ್ರಾಕ್ಷಮಾಲಾ । ಧರನತುಲಕಾಷಾಯವಸ್ತ್ರವಿರಾಜಮಾನಾಂಗಿ ॥ ದುರಿತಭೀತಿನಿವಾರಕಂ ದು । ಸ್ತರಭವಾಮಯಭಂಜಕಂ ಸುರು । ಚಿರಯಶೋಮಯನಾಗಿರುವದಂ ತಿಳಿದು ಮನಗಂಡು ॥ ೩೩ ॥

ಶರಣನಾ ಶಿವಯೋಗಿವರ್ಯನ । ಚರಣಪಂಕೇರುಹಗಳಿಗೆ ಮಧು । ಕರದವೊಲ್ಸಂಭ್ರಮಿಸಿ ಬಂದೊಲಿದೆರಗಿ ಕೈಮುಗಿದು ॥ ನಿರುಪಮಾನಚರಿತ್ರ ನಿನ್ನೀ । ಕರದೊಳುದಿಸಲುಬಯಸುವೆನು ನೀಂ । ಕರುಣಿಸೆನುತೇಕಾಂತದೊಳು ಬಿನ್ನೈಸಿ ಬೇಡಲ್ಕೆ ॥ ೩೪ ॥

ಸತಿಯ ಸೌಂದರ್ಯವನು ತದ್ರತಿ । ಚತುರತೆಯನುಂ ನೆನೆದು ದೂರದಿ । ನತಿರಯದೆ ಷೋಡಶದಿನದೊಳಾದರದಿನೈತಂದ ॥ ಪತಿಯನೀಕ್ಷಿಸಿ ವಿರಹದಿಂ ಸಮ । ರತಿಸುಖಕೆ ಕರೆವಿನಿಯಳಂದದೆ । ನುತಶರಣನುಪದೇಶಿ ಸಂದರ್ಶಿಸಿದ ಮಾತಾಯ್ತು ॥ ೩೫ ॥

ಇವನ ವಾರ್ತೆಯ ಕೇಳಿ ಬಂದೀ ! ಪ್ರವಿಮಲನ ಪರಿಪಕ್ವ ಹೃದಯವ ! ತವೆ ನಿರೀಕ್ಷಿಸಿಯಿವಗೆ ಬೋಧಿಸಲೆಂಬ ಕಡುಬಯಕೆ ॥ ಇವನಿಗಿಂ ಮೊದಲವ ನೊಳಿಹುದರಿ । ನವಿಕಲವುದಂದಾಳ್ದ ವಿಧಿಯಿಂ । ತವಕಮುಂಮಿಗೆ ಬೋಧಿಸಿದನಿವಗಸಮಶಿವಯೋಗಿ ॥ ೩೬ ॥

ಬಯಸಿ ಗುರುವಿನ ಸನ್ನಿಧಿಯನಾ । ಶ್ರಯಿಸಿ ದ್ವಾದಶವರ್ಷವನಕಂ । ನಯದೆ ಗುರುಸೇವಾಚತುಷ್ಟಯಪೂರ್ವಕಂ ಬೇರೆ ॥ ಬಯಕೆಯಿಲ್ಲದೆ ಸೇವಿಸಿದೊಡುಂ । ಪ್ರಿಯತಮಶ್ರೀಗುರುವರೇಣ್ಯನ । ದಯೆ ಮುಮುಕ್ಷುವಿಗಾಗುವದು ಬಹುಕಷ್ಟವಿಂತಿರಲು ॥ ೩೭ ॥

ಬೇಡಿದಾಕ್ಷಣದಲ್ಲಿ ಕೃಪೆಯಿಂ । ನೋಡಿ ಬ್ರಹ್ಮಜ್ಞಾನದಾನವ । ಮಾಡಿದಂ ಶಿವಯೋಗಿವರ್ಯಂ ಶರಣಪುಂಗವಗೆ ॥ ರೂಢಿಯೊಳು ಮುನ್ನೀ ಮಹಾತ್ಮಂ । ನಾಡೆ ಯೋಗಭ್ರಷ್ಟನಿಹುದರಿ । ನಾಡಲೇಂ ಪರಿಪಕ್ವಮನವೀತನೊಳು ತೋರ್ದತ್ತು ॥ ೩೮ ॥

ಗುರುಸುರಸನಾರೂಪಲಿಂಗದಿ । ನುರುತರಮಹಾಮಂತ್ರವೀರ್ಯಂ । ಪರಮಶಿಷ್ಯಶ್ರವಣಯೋನಿಯೊಳಿಳಿದು ಮಾನಸವು ॥ ಹರುಷದಿಂದಂ ಗರ್ಭಮಂ ನೆರೆ । ಧರಿಸಿ ಸಮ್ಯಗ್ಜ್ಞಾನರೂಪೀ । ನಿರುಪಮಾನಕುಮಾರನಂ ಪೆತ್ತುದು ವಿಚಿತ್ರಮೆನೆ ॥ ೩೯ ॥

ದೇವತೆಗಳುರೆ ಮೆಚ್ಚಿದೊಡೆ ಪದೆ । ದೀವರಬಲಾದ್ಯಖಿಲ ಲೌಕಿಕ । ದಾ ವಿಭವಮಂ ಶ್ರೀಗುರೂತ್ತಮನೊಲಿದೊಡೆಂದೆಂದು ॥ ಸಾವುಹುಟ್ಟುಗಳೊದಗದಂತಹ ! ಕೇವಲಶಿವಜ್ಞಾನಮಂ ಕೊ । ಟ್ಟೀವನವಗೆಣೆಯುಂಟೆ ಗುರುವೇ ಮಾನ್ಯನಖಿಲರೊಳು ॥ ೪೦ ॥

ಪುರವನುರುಪಿದನೀಸರಂ ದೈ । ತ್ಯರನು ಕೊಂದಲ್ಲೇವಿ ಕಂಸಾ । ಸುರನನಿಟ್ಟಂ ಕೃಷ್ಣನತುಲಾನಂದಮುಯನಾದ ॥ ಗುರುವರೇಣ್ಯಂ ದ್ವಂದ್ವಮಂ ಪರಿ । ಹರಿಸುವಂ ನಿಜಶಿಷ್ಯಕೋಟಿಯ । ದುರಿತವನಮಂ ಚುರ್ಚುನಂ ಕಾಳ್ಗಿಚ್ಚಿನಂತಾಗಿ ॥ ೪೧ ॥

ಪರತರನಿರಾಕಾರನೆನಿಸಿದ । ಹರನೆ ಭಕ್ತೋದ್ಧಾರಕಾಗಿಯೆ । ಗುರುವರಾ ಕೃತಿಗೊಂಡುದಿಸಿ ಸಂಸಾರಿಗಳ ತೆರದೆ ॥ ಧರಣಿಯೊಳು ಚೇಷ್ಟಿಸುವನವನಂ । ಕರಚರಣಕೃತಿಸಾಮ್ಯದಿಂದಂ । ಬರಿದೆ ನರನೆಂದರಿವ ಪಾಪಿಗೆ ನರಕ ವಾದಪುದು ॥ ೪೨ ॥

ವನರುಹವನರಳಿಸುವನಲ್ಲದೆ । ದಿನಕರಂ ತನ್ನಯ ಸ್ವರೂಪವ । ನೆನಿತುಮಾ ವನಜಕ್ಕೆ ಕೊಡನಾಚಾರ್ಯನಿಂತಲ್ಲ ॥ ಅನಘಶಿಷ್ಯನ ಮನಕೆ ಶಾಂತಿಯ । ನನುವಿನಿಂದಿತ್ತಾತನಂ ಪಾ । ವನತೆಯಿಂ ತನ್ನಂತೆ ಮಾಳ್ಪನವಂಗೆ ರವಿಯೆಣೆಯೆ ॥ ೪೩ ॥

ಗುರುವರಂ ಕೈವಲ್ಯಮಾರ್ಗಕೆ । ಸುರುಚಿರಮಹಾದಿವ್ಯದೀಪಂ । ಕರಮವಿದ್ಯಾಂಬುಧಿಗೆ ಬಾಡಬನಾಗಿಹುದರಿಂದ ॥ ನೆರೆದು ನಗುರೋರಧಿಕ ಮೆಂದನ । ವರತಮಾ ಪಳೆವಾತುಗಳು ಡಂ । ಗುರಮನೊಳ್ಪಿಂ ಪೊಯ್ವುವೀತನೆ ಪೂಜ್ಯನಖಿಲರೊಳು ॥ ೪೪ ॥

ಲವಣಮಿಲ್ಲದ ಪಾಕಮುಂ ನಿಜ । ಯುವತಿಯಿಲ್ಲದ ರಮ್ಯಗೃಹಮುಂ । ಕುವರನಿಲ್ಲದ ಬಿನದಮುಂ ಕುಂಕುಮವದಿಲ್ಲದಿಹ ॥ ವಿವಿಧಸದಲಂಕಾರಮುಂ ದು । ರ್ಭವವ ಕೆಡಿಪಾಚಾರ್ಯನಿಲ್ಲದ । ಶಿವಮತೀಯನ ಜೀವಿತಮುಮಿವು ವ್ಯರ್ಥಮುರ್ವಿಯೊಳು ॥ ೪೫ ॥

ಬೆಂಕಿ ಮುಟ್ಟದ ಕಟ್ಟಗೆಯು ತಾಂ । ಬೆಂಕಿಯಪ್ಪಂತೊಳ್ಪಿನಿಂದಂ । ಶಂಕರಪ್ರಭಗುರುವರೇಣ್ಯಂ ಮುಟ್ಟದಾಕ್ಷಣವೀ ॥ ಕಿಂಕರಂ ಗುರುರೂಪ ವಾಂತಾ । ತಂಕಮಿಲ್ಲದೆ ಪೊರ್ದಿದವರ ಭ । ಯಂಕರ ಭವಂಗಳೆದು ಪೊರೆವ ಬಲಂದಳೆದು ಬಳಿಕ ॥ ೪೬ ॥

ಗುರುವೆ ಶರಣಾಗತಜನಾಮರ । ತರುವೆ ನಿತ್ಯಾಖಂಡಸುಖದಾ । ಗರವೆ ಸುಗುಣಕಲಾಪಸಂಚಯದಿರವೆ ನಯಸರವೇ ॥ ಪರವೆ ಭಕ್ತಿಜ್ಞಾನವಿರತಿಯ । ಕುರುವೆ ನಿನ್ನಿಂ ಧನ್ಯನಾದೆನು । ಪೊರೆದೆ ನೀನೆಂದೆರಗಿದಂ ವೀರೇಶಶಿವ ಶರಣಂ ॥ ೪೭ ॥

ದೇಶದೇಶವ ತಿರುಗಿಬಹ್ವಾ । ಯಾಸದಿಂದಂ ಪುಡುಕಿದೊಡುಮುಪ । ದೇಶಮಂ ಮಾಡುವ ಗುರೂತ್ತಂಸಂ ದೊರೆಯದಿಹನು ॥ ಈ ಶರಣಪುಂಗವನ ಪುಣ್ಯಮು । ದೇಸಿಹುದೊ ಗುರುತಾನೆ ಪುಡುಕುತ । ವಾಸಕೈತಂದಂ ಮಹಾತ್ಮ ರಿಗಾವುದಸದಳವು ॥ ೪೮ ॥

ಏಸುಬಾರುಪದೇಶಿಸಿದೊಡುಂ । ಭಾಸುರಶಿವಜ್ಞಾನಮುದಿಸದೆ । ಗಾಸೆ ಯಾದರು ಕೆಲಬರೀ ಭವಜಾಲದೊಳುಬೀಳ್ದು ॥ ಈ ಶರಣವರನೊಂದೆಬಾರುಪ । ದೇಶಮಂ ಕೈಕೊಂಡು ಗಿರಿಜಾ । ತೇಶಶರಣರೊಳಧಿಕನೆನಿಸಿದನೇಂಸುಕೃತ ಘನನೋ ॥ ೪೯ ॥

ಮಂದಿಯೊಳು ಘನತೆಯನು ಪೊಂದುವ । ದೆಂದು ಕೆಲಬಸ್ವಾರ್ಥ ಹೇತುವಿ । ನಿಂದ ಕೆಲಬರ್ಬರಿಯ ಭ್ರಮೆಯಿಂ ಕೆಲಬರುರ್ವಿಯೊಳು ॥ ಚಂದ ಮೆನೆ ಗುರುಶಿಷ್ಯರೊಂದೆಡೆ । ಪೊಂದಿ ಚಿದ್ಬೋಧವನು ಕೊಡುಕೊ । ಳ್ಳೊಂದು ವ್ಯಾಪಾರವನು ಮಾಳ್ಪರು ದುಂದಿನಿಂ ನಲಿದು ॥ ೫೦ ॥

ಈ ತೆರದ ಗುರುಶಿಷ್ಯಮಧ್ಯದೊ । ಳೋತು ನಡೆವುಪದೇಶಕಾರ್ಯಂ । ಸಾತಿಶಯಮೆನೆ ಹರಿದ ಕಿರಿಹರುಗೋಲಿನೊಳ್ಕಳಿತು ॥ ಆ ತೊರೆಯ ದಾಟುವ ಪ್ರಯತ್ನಕೆ । ಭೂತಳದೆ ಸರಿಯುಹುದು ಸುಮ್ಮನೆ । ಯೇತಕೀ ನಗೆಗೀಡೆನಿಪ ಬಾಳ್ವೆಯನು ಮಾಡುವರೋ ॥ ೫೧ ॥

ಉದರಪೋಷಣಕಾಗಿ ದಂಭದೆ । ಚಿದುಪದೇಶವ ಮಾರುತದರಿಂ । ಬದುಕುವ ದುರಾಚಾರಪರನಂ ನಾಲಿಗೆಯ ಕೀಳ್ತು ॥ ಕುದಿವ ಮಳಲಂ ತಿನಿಸಿ ಗವೆಯಿಂ । ಸದೆದುದರಮಂ ಬಗೆದು ಪದದಿಂ । ದೊದೆದು ನೂಂಕರೆ ವೈತರಣಿಯೊಳು ಕಾಲನಾಳುಗಳು । ೫೨ ॥

ತವುಗದರೊಳಧಿಕಾರವಿಲ್ಲದೆ । ಭ್ರಮಿಸಿ ಮಂದಿಯಕಂಡು ಕುಣಿವುತೆ। ಕುಮತಿಸುಮತಿಗಳೆಂಬುದಂ ಪರಿಕಿಸದೆ ನರರಿಂದ ॥ ಕ್ರಮುವನರಿಯದೆ ಬೋಧೆ ವಡೆದಾ । ಕ್ರಮಿಸಿ ಬಾಯೊಳು ಗುಣುಗುಣಿನುತಂ । ಮುಮುಕರಿಸಿ ವಿಷಯ ದೊಳು ರಮಿಸುವ ನರನು ಹಾಸ್ತಿಕನೆ ॥ ೫೩ ॥

ಸತಿಯ ಪಾತಿವ್ರತ್ಯಗುಣಮಂ । ಪತಿಯು ಮನಗಂಡವಳ್ಗೆ ತಾನನು । ಮತಿಸಿ ತನ್ನಯ ಗುಟ್ಟನೀವಂದದೊಳು ಶಿಷ್ಯನೊಳು ॥ ನುತಮುಮುಕ್ಷುತ್ವ ವನು ಕಂಡು । ನ್ನತಶಿವಜ್ಞಾನವನು ಬೋಧಿಪು । ದತಿಹಿತಂ ಕಂಡವರಿಗೊರೆ ವುದು ಹಾನಿಕರಮಹುದು ॥ ೫೪ ॥

ಲೋಭಿ ತನಗೊದಗಿರ್ದ ಪಣಮಂ । ಲೋಭದಿಂ ಕಾಪಾಡುವಂದದೆ । ಶೋಭಿಸುವ ಶ್ರೀಗುರುವರನ ವಚನೋಪದೇಶವನು ॥ ಸಾಭಿಲಾಷೆಯೊಳಾಂತು ಪ್ರಾಣ । ಕ್ಕಾಭಮೆನೆ ಕಾಪಾಡಿ ಮೋಕ್ಷದ । ಲಾಭಮಂ ಪೊಂದುವದೆ ಶಿಷ್ಯಗೆ ಭೂಷಣಂ ನೆಲದೆ ॥ ೫೫ ॥

ಗುರುವಿನುಪದೇಶವನು ಪಡೆದೀ । ಶರಣವರ್ಯ್ಯಂ ನಿರತಿಶಯಸುಖ । ಶರಧಿಯೊಳಗೋಲಾಡುತಿರೆ ಗುರುದೇವಿ ಪತಿಯಡಿಗೆ ॥ ಎರಗಿ ಪ್ರಾರ್ಥಿಸಲವಳ ಬಯಕೆಯ । ನರಿದು ತಾನಿನಿಯಳನು ಬೋಧಿಸಿ । ಪೊರೆದನಿಂತಾಚರಿಸಲಾದರು ದಂಪತಿಗಳೊಪ್ಪಿ ॥ ೫೬ ॥

ಪ್ರಮಥಗಣಪದರೇಣು ಭಸಿತಂ । ಪ್ರಮಥನಾಮಂ ದಿವ್ಯಮಂತ್ರಂ । ಪ್ರಮಥಭಜನಂ ಲಿಂಗಭಜನಂ ಪ್ರಮಥಪುಂಗವರ ॥ ವಿಮಲಚರಣಂ ಸರ್ವ ಸಂಪದ । ಕರಮುದವರ ನಿರೂಪಣಂ ಭಾ । ಸುರಸುಜೀವನಮಾದ ವೀರೇಶ್ವ ರಗೆ ನಮಿಸುವೆನು ॥ ೫೭ ॥

ಅಂತು ಸಂಧಿ ೬ಕ್ಕೆ ಪದಗಳು ೩೩೭.

ಮಂಗಲಂ.



ಶ್ರೀಮತೇ ವಿಶ್ವನಾಥಾಯ ನಮಃ



## ಏಳನೆಯ ಸಂಧಿ ಪ್ರಾರಂಭ.

ಸೂಚನೆ ॥ ನುತಗುರೂತ್ತಮನಾಜ್ಞೆಯಿಂ ನಿಜ । ಸತಿಯ ರತಿಸುಖಮಂ ತ್ಯಜಿಸಿ ಜಿತ । ರತಿಪತಿಯ ರೂಪವನು ಕಂಡಂ ಶರಣಪುಂಗವನು ॥ ಪಲ್ಲ ॥

ಪದ ॥ ಮುರವಿರೋಧಿಗೆ ಕೊಟ್ಟ ಸಿರಿಯಂ । ಸರಸಿಜಾಸನಗಿತ್ತ ಭಾಸುರ । ತರನಿಗಮನೈಪುಣ್ಯಮಂ ಧನದಂಗೆ ನವನಿಧಿಯ ॥ ಸುರವರಗೆ ಕರುಣಿಸಿದ ಭೋಗವ । ನೆರಗಿ ಬೇಡೆನಖಂಡಚಿತ್ಸುಖ । ಭರಿತಶರಣರ ಸೇವೆಯಂ ಕೊಟ್ಟು ದ್ಧರಿಸು ಶಂಭೋ ॥ ೧ ॥

ಒಂದು ದಿನಮುಪದೇಶಗುರುವರ । ನಿಂದುಶೇಖರಶರಣನುಂ ಪಲ । ವಂದದಿಂದ ಶಿವಾನುಭವಗೋಷ್ಠಿಗಳನಾಡುತಿರೆ ॥ ಮುಂದೆ ಕೆಲದೊಳು ಕಸ ವನುಡುಗುವ । ಸುಂದರದ ಗುರುದೇವಿಯಂ ಕಂ । ಡಂದು ಯೋಚಿಸಿ ಗುರು ವರೇಣ್ಯಂ ಶರಣನಂ ಕೂರ್ತು ॥ ೨ ॥

ಎಲೆ ಶರಣ ಜಂಗಮನಿಗರ್ಪಿಸ । ದಲೆ ಪದಾರ್ಥವನೇನುವಂ ಸಂ । ಗಳಿಸಿ ಸೇವಿಸದಿರುವ ನೀನೀ ಧರ್ಮಪತ್ನಿಯನು ॥ ಸಲೆ ಚರಾರ್ಯರಿಗರ್ಪಿಸ ದಲೆಂ । ತೊಲೆದು ಸ್ವೀಕರಿಸುವೆಯೊ ಎಂದು । ಕ್ಕಲಿಸದೆ ಗುರೂತ್ತಮನು ಕೇಳಲವಂಗೆ ಕೈಮುಗಿದು ॥ ೩ ॥

ಎಂತು ಭವದೀಯಾಜ್ಞೆಯಾಗುವ । ದಂತು ಮಾಡುವೆನೆಂದು ಶರ ಣಂ । ಸಂತಸಂದಳೆದುಸುರಲಾ ಗುರುವರನು ತಲೆದೂಗಿ ॥ ಇಂತು ಶಾಂತಿಯ ನಾಂತ ಪರಮ । ಸ್ವಾಂತನಂ ಕಂಡಿಲ್ಲಮಿನ್ನೆಗ । ಮಂತಕಾಂತಕಶರಣನಹುದ ಹುದೀತನೆಂದೆನುತ ॥ ೪ ॥

ಮನದೊಳಚ್ಚರಿಗೊಂಡು ಗುಣಮಣಿ । ವನಧಿಯೆನಿಸುವ ಶರಣನೇ ಕೇ । ಳ್ವನಿತೆಯಂ ಗುರುಲಿಂಗಜಂಗಮಪೂತಸೇವೆಯೊಳು ॥ ಅನಿಶಮಿರಿಸಲ್ವೇಕ ದಲ್ಲದೆ । ಮನಸಿಜವಿಲಾಸಾರ್ಥಮೆಂದುಂ । ನೆನೆದು ಕೊಡಲುಂ ಕೊಳ್ಳಲುಂ ಪೊಲ್ಲ ಮದಸಂಭವವು ॥ ೫ ॥

ಧಾರುಣೀಮಂಡಲದೊಳಾ ಪರ । ನಾರಿಯಂ ತಾಯಂತೆ ಕಾಣುವ । ಚಾರುಗುರುಚರರೆಳಸಿ ಸ್ವೀಕರಿಸುವರೆ ಮರುಳಾಗಿ ॥ ಮಾರವೀರನಿಗೊಕ್ಕ ಲಾಗುವ । ಘೋರಮೋಹಾಂಧರ್ಕಳತ್ಯಾ । ಚಾರಪರನರಪಶುಗಳಲ್ಲದೆ ತಿಳಿ ಯೆ ಗುರುಚರರೆ ॥ ೬ ॥

ಬಲೆಯೊಳಗೆ ಬೀಳ್ದೇಳಲಾತುರ । ಗೊಳುವ ಚಕ್ರದ್ವಯದ ಪಾಂಗಿಂ । ತೊಳಪ ಚೀನಾಂಬರದೊಳುರ್ವಿದ ಕಲಶಕುಚಮುಳ್ಳ ॥ ಎಳೆವರೆಯದಬಲೆ ಯರನೀಕ್ಷಿಸಿ । ಕಳೆಗೆಡಿಪ ವಿರಹಂದಳೆದು ಪಂ । ಬಲಿಪ ಮೋಹಿಗಳರ್ಹರೇ ಗುರುಚರರ ಪೀಠಕ್ಕೆ ॥ ೭ ॥

ಮದನಧನುವಂ ಜರಿವ ಭ್ರೂಯು । ಗ್ಮದ ಮುಕುರಮಂ ಬೀಳ್ಗಳೆವ ತೆ । ಳ್ಗದಪಿನ ಪಯೋಜಜಾತದಳಮಂ ತೆಗಳುವೀಕ್ಷಣದ ॥ ಸುದತಿಯರ ಚಂಚತ್ಕಟಾಕ್ಷ । ಕ್ಕೆದೆಗರಗಿ ತಲ್ಲಣಿಸುವವರೀ । ಸದಮಲಶ್ರೀಗುರುಚರಾ ರ್ಯರ ಪಟ್ಟಕೊಪ್ಪುವರೇ ॥ ೮ ॥

ಬಳುಕುತಿಹ ಬಡನಡುವಿನಿಂದಂ । ನಳನಳಿಪತೋಳುಗಳ ಚೆಲ್ವಿಂ । ಮೊಳೆವಜವ್ವನದಿಂಪಿನಿಂದಂ ತೋರಮುಡಿಯಿಂದ ॥ ಪೊಳೆವ ಕಾಂಚನಕಾಂತಿ ಯಿಂದಂ । ಚಲುವಮೊಗದಿಂದೊಪ್ಪುವಬಲೆಯ । ನೆಳಸುವಾತಂ ಗುರುಚರತ್ವಕೆ ಯೋಗ್ಯನಹನೆಂತು ॥ ೯ ॥

ಭಸಿತಮಂ ರುದ್ರಾಕ್ಷೆಯಂ ಶೋ । ಭಿಸುವ ಕೌಪೀನವನು ಕಾವಿಯ । ವಸನಮಂ ತಳೆದರ್ಚನಾಡಂಬರದಿನೆಲ್ಲರ್ಗೆ ॥ ಅಸಮಶಾಸ್ತ್ರವ ಬೋಧಿಸುತ್ತಂ । ಶಶಿಮುಖಿಯರಂ ಮನದೊಳೆಳಸುತ । ವಸುಧೆಯೊಳ್ಸಂಚರಿಸುವಾತಂ ಗುರುವೆ ಜಂಗಮನೆ ॥ ೧೦ ॥

ಗುರುಚರತ್ವಕೆ ತಕ್ಕಸುಗುಣೋ । ತ್ಕರಮದಿಲ್ಲದೆ ನಾವೆ ಗುರುಗಳು । ಚರವರೇಣ್ಯರು ನಾವು ಸರ್ವಶ್ರೇಷ್ಠರಾವೆಂದು ॥ ಮರುಳುಮಾತುಗಳಾಡಿ ಕುಟಲಾ । ಚರಣೆಯಿಂ ಭಕ್ತರ ಧನವನಪ । ಹರಿಸಿ ವಿಷಯದೆ ಚರಿವ ಭ್ರಷ್ಟರು ಶಿಷ್ಟರೆನಿಸುವರೇ ॥ ೧೧ ॥

ಗುರುಚರಾಶ್ರಮಮಂ ಧರಿಸಿ ಸುರು । ಚಿರಮಹತ್ಕಾರ್ಯವನೆಸಪೆವೆಂ । ದೊರೆದು ಭಕ್ತರ ಧನವ ಶಳೆದಾ ಪೇಳ್ದ ಕಾರ್ಯವನು ॥ ತೊರೆದು ಪೂರ್ವಾಶ್ರಯದ ಬಳಗವ । ಪೊರೆವುತಂ ತನುಭೋಗತತಿಯೊಳು । ಚರೆದು ಬಾಳ್ವವರಲ್ಲ ಸದ್ಗುರುವರರು ಜಂಗಮರು ॥ ೧೨ ॥

ಹೆಣ್ಣಿನಾಶೆಯ ಬಿಡದೆ ಬಾಹ್ಯದೆ । ಹೆಣ್ಣಿನೊಡವೆರೆಯದಲೆ ಬಲುಪೊ । ನ್ಮಣ್ಣುಗಳ ಮೋಹಕ್ಕೆ ವಶನಾದವನಧಿಕನಲ್ಲ ॥ ಮಣ್ಣುಪೊನ್ಪೆಣ್ಣುಗಳೊಳುದಯಿಸಿ । ಬಣ್ಣಗೆಡಿಸುವ ಮೋಹಮೊಂದೇ । ಮಣ್ಣುಪೊನ್ಪೆಣ್ಣುಗಳ ಮೋಹವನುಳಿದವನೆ ಮೇಲು ॥ ೧೩ ॥

ವಿನುತಧರ್ಮೋದ್ಧಾರಕಾಗಿಯೆ । ಧನಮುವನಿಸಂಘಗಳು ಬೇಕಾ । ವನಿತೆಯೇತಕೆಬೇಕು ತದ್ಧನಭೂಮಿಜನಗಳನು ॥ ಮನದೆ ಮೋಹಿಸದಂಗಸುಖಸಾ । ಧನಮೆನುತ್ತುಪಯೋಗಿಸದೆ ನೆರೆ । ಜನಹಿತಾರ್ಥಂ ಗಳಿಸಿ ಬಳಿಪುದೆ ಪೂಜ್ಯ ಲಕ್ಷಣವು ॥ ೧೪ ॥

ರತಿಸಮಾನಸುರೂಪವತಿ ಸವು । ರತಿಗೆಳಸಿ ಕೈವಿಡಿದೆಳೆದಡುಂ । ಪ್ರತಿರಹಿತಶುಕನಂತೆ ಮನದೊಳು ವಿಕೃತಿದಳೆಯದಲೆ ॥ ವಿತತವೈರಾಗ್ಯೋಪರತಿಯಿಂ । ಕ್ಷಿತಿಯನುದ್ಧರಿಪಾತನೇ ಸ । ನ್ನುತಜಗದ್ಗುರುವರ್ಯನುಂ ಜಂಗಮನುಮೆನಿಸುವನು ॥ ೧೫ ॥

ನೆರೆವ ಮಾಯಾಂಗನೆಗೆ ಮೆಚ್ಚರು । ಗುರುಚರರ್ಸದ್ಭಕ್ತಿರಮಣೀ । ಸರಸಶೃಂಗಾರಕ್ಕೆ ಸೋಲುವರವರಸೇವೆಯನು ॥ ನಿರುತಮುಂ ಮನವೊಸೆದೆಸಗಿದೊಡೆ । ಕೊರತೆಯೇನೊಂದೊದಗದಲೆ ಪರ । ತರಶಿವಶ್ರೇಯಂ ದೊರೆವುದೆಲೆ ಪುತ್ರಶಿವಶರಣ ॥ ೧೬ ॥

ಮುಡದಿಯಂ ಚರಸೇವೆಯೊಳು ಸಲೆ । ತೊಡಗಿಸುವದರ್ಪಣಮೆನಿಪುದಾ । ದೊಡಮೆಲವೊ ನೀನಿಯಳಂಗದ ಸಂಗಮಂ ಬಿಟ್ಟು ॥ ನೃಡಗಣಂಗಳ ಸೇವೆಯೊಳ್ಸತಿ । ಯೊಡನೆ ದುಡಿಯೆಂದುಸಿರೆ ಗುರುವಿಗೆ । ಪೊಡಮಡುತ್ತ ಹಸಾದವೆಂದಾನಂದದಿಂದೊಪ್ಪಿ ॥ ೧೭ ॥

ಅಂದಿನಿಂ ಸತಿಸಂಗಮಂ ಬಿ । ಟ್ಟಂದದಿಂ ಪತ್ನಿಯನು ಸಖನಂ । ತೋಂದಿದನುಚರನಂತರಿದು ಶಿವಕಾರ್ಯಮಂ ಕೂಡಿ ॥ ಎಂದಿನಂತೆಸಗುತ್ತಲಿವನಾ । ಸುಂದರಿಯ ಮೋಹವನು ಮನದೊಳ । ಗೊಂದಿನಿಸು ತಳೆಯದಲೆ ಮರೆದಂ ಗೋಚರಿಸುವಂತೆ ॥ ೧೮ ॥

ಪ್ರೀತಿಯಿಂ ಪುರುಷರ್ಕಳೊಡನುರೆ । ಮಾತನಾಡುವವೊಲ್ಪ್ರಸಂಗದೊ । ಳೀತನೇನ್ರೆಪ ಮೇಣದೇಕ್ರೆಪ ಎನುತ ಸತಿಯೊಡನೆ ॥ ಸಾತಿಶಯಮೆನೆ ನುಡಿವುತಿರ್ದಂ । ಭೂತಳದೊಳರಿದೆನಿಸಿ ಲೌಕಿಕ । ರೀತಿಯಂತೆ ವಿನೋದಹಾಸ್ಯಂಗಳನೆಸಗದಿರ್ದಂ ॥ ೧೯ ॥

ಮನದ ಮಗನಾ ಮಾರನೆಂಬರು । ಜನರು ಸುಮ್ಮನೆ ಕುಸುಮಬಾಣಂ । ಮನದ ಮಗನಾಗಿರ್ದೊಡೀ ಶರಣನ ಮನಸ್ಸಿನೊಳು ॥ ಜನಿಸಲಿಲ್ಲೇತಕೆ ವಿಚಾರಿಸೆ । ಮನವು ಮೊದಲೆ ನಪುಂಸಕಮುದೆಂ । ತಣುಗನಂ ಪೆತ್ತಪುದೆನುತ್ತಿರ್ದರ್ಮನೀಷಿಗಳು ॥ ೨೦ ॥

ಹೈಮವತಿಗರೆಮೈಯನೊಪ್ಪಿಸಿ । ಪ್ರೇಮದಿಂದಂ ಬೆರೆದು ಗಂಗಾ । ಕಾಮಿನಿಯನೆಡೆವಿಡದೆ ಮಸ್ತಕದಲ್ಲಿ ಪೊತ್ತಿರುವ ॥ ಭೀಮನಿನಿಯಳ ಮುಟ್ಟದಿದ್ದು । ದ್ದಾಮಸೌಮ್ಯಶರಣಗೆ ಸರಿಯೇ । ಕಾಮಹರನೆಂಬಾಖ್ಯೆಯವನಿಗೆ ಬರಿದೆ ಬಂದಿಹುದು ॥ ೨೧ ॥

ಕಳ್ಳತನದಿಂ ಪಾಲುಬೆಣ್ಣೆಯ । ಮೆಲ್ಲುತಂ ನಾನಾಪ್ರಕಾರದೆ । ಗೊಲ್ಲತಿಯರೊಳ್ಕೂಡಿ ಕಾಮಕ್ರೀಡೆಯೊಳು ಬಾಳ್ದ ॥ ಪುಲ್ಲಗಣ್ಣಂ ಸತಿಯಸೌಖ್ಯವ । ನೊಲ್ಲದಿರ್ಪೀ ಶರಣನಿಗೆ ಸರಿ । ಯಲ್ಲವಿಂತೆಂದೆಲ್ಲರಾಡುತ್ತಿಹರು ದೇಶದೊಳು ॥ ೨೨ ॥

---

೧-೨ ಈ ಶಬ್ದಗಳು ಗ್ರಾಮ್ಯವಿದ್ದರೂ ಶರಣರ ಪ್ರಸಾದವಾಣಿಯಾದದ್ದರಿಂದ ಅವುಗಳನ್ನೇ ಉಪಯೋಗಿಸಿದೆ.

ಸರಸಿಜಭವಂ ಭುವನಗಳೊಳಿಹ । ಪುರುಷತತಿಯಂ ಕೆಡಹಲೆಂದಾ । ದರದೆ ಶಾರದೆಯೆಂಬ ಮೋಹದ ಜಾಲಮಂ ಸೃಜಿಸಿ ॥ ನಿರುಕಿಸಿ ಮಹಾವಿರಹ ವಾಂತಾ । ತುರದೆ ಮಗಳೆಂಬಾ ವಿಚಾರವ । ತೊರೆದು ತಜ್ಜಾಲದೊಳು ತಾನೇ ಕೆಡೆದನೆದೆಗರಗಿ ॥ ೨೩ ॥

ಸರಸಮಧುರಾಲಾಪೆ ಘನಸುಂ । ದರಿ ಪತಿವ್ರತೆ ಸೌಮ್ಯಮಾನಸೆ । ದುರಿತಭೀತೆ ವರಾನುಕೂಲೆಯೆನಿಪ ಸತಿಯು ತಾನು ॥ ನಿರುತಮೊಂದೇ ನಿಲಯದೊಳ್ಕಡು । ಹರುಷದಿಂ ಕೂಡಿರ್ದೊಡುಂ ಸುಮ । ಶರನ ಸೊಗಮಂ ಬಯಸದಿವನಜಗಿಂದಧಿಕನಲ್ತೆ ॥ ೨೪ ॥

ನಾರಿಯರ ದರ್ಶನಭಯಂಬಿಡಿ । ದೂರನುಳಿದಚಲಾಟವಿಗಳೊಳು । ಸೇರಿ ಜಲಪರ್ಣಾಶುಗಾಶನರಾಗಿ ತಪವೆಸಪ ॥ ಧೀರಮುನಿಗಳ್ಪೆಣ್ಗಳಂ ನೆನೆ । ದಾ ರತೀಶನ ಭಕ್ತರಾದರು । ವೀರಶರಣಂ ಸತಿಯನಂಟದ ಬಗೆ ಪೊಸತಿದಲ್ತೆ ॥ ೨೫ ॥

ಸಲೆ ಬುಭುಕ್ಷ್ವಗಳನಿಶಮೆಳಸುವ । ಪಲವುವಿಷಯದ ಸುಖಮನಿತ್ಯಂ । ತಿಳಿಯೆ ಪರತಂತ್ರಂ ಮಹಾದುಃಖೈಕಬೀಜಮದು ॥ ನೆಲದೊಳೊಲ್ದು ಮುಮುಕ್ಷುಗಳು ಬಯ । ಪಲಘುಲಿಂಗಸುಖಂ ನಿರಂತಂ । ವಿಲಸಿತಾನುಪಮಾನಮುರು ನಿರುಪಾಧಿ ನಿತ್ಯಮಿದು ॥ ೨೬ ॥

ಪಿರಿದೆನಿಪ ತಲ್ಲಿಂಗಸುಖದೊಳು । ಪರಿಣಮಿಪ ವೀರೇಶಶರಣಂ । ಕಿರಿದೆನಿಪ ಸಂಸಾರಸುಖಮಂ ಬಯಸಿದಪನೆಂತು ॥ ಕರಮಿವನ ಮಾತಂತಿರಲಿ ನಿಜ । ವರನ ಸಮರತಿಸುಖಕಿನಿಸುಮೆದೆ । ಗರಗಿ ಬಯಸದ ಪತ್ನಿಯೇಂ ಸಾಮಾನ್ಯಳೇ ಜಗದೆ ॥ ೨೭ ॥

ತನ್ನ ಸೋಂಕದ ಪತಿಯ ಬಗೆಯಂ । ಸನ್ನೆಯಿಂದಂ ತಿಳಿದು ತಾನುಂ । ಖಿನ್ನಮಾನಸಳಾಗದೆಚ್ಚರಗೆಡದೆ ಮುಟ್ಟದಲೆ ॥ ಸನ್ನುತನ ಮನವರಿದು ನಡೆಯುವ । ದೆನ್ನ ಘನಕರ್ತವ್ಯಮೆನುತಂ । ಪೊನ್ನಬಣ್ಣದ ಸಾಧ್ವಿ ಮೆರೆದಳ್ಧವನ ಸೇವೆಯೊಳು ॥ ೨೮ ॥

ಪುರುಷಗಿಂದಾಹಾರವಿಮ್ಮಡಿ । ನೆರೆದ ಕಾಮವದೆಂಟುಮಡಿ ಷೆ । ಚ್ಚಿರುವದಬಲಾಜನದೊಳೆಂದೊರೆವಾ ಬುಧರ ನುಡಿಗೆ ॥ ಒರಸಿದಳ್ಕ್ರಸಿಯಂ ಸತಿಯರಿನಿ । ಯರ ಘನಸದಾಚಾರದೇಳ್ಗಿಗೆ । ಪರಮಸಾಧನರೆಂಬುದಂ ಮೆರಿಸಿದಳು ಗುರುದೇವಿ ॥ ೨೯ ॥

ತರುಣಿಯೊಳ್ಪುಡುಕಿದೊಡೆ ಲಜ್ಜೆಯು । ಪುರುಷಗಿಂದ ಚತುರ್ಗುಣಾಧಿಕ । ಮಿರುವದೆಂದೊರೆದಿರುವ ಬುಧನೀ ಮಾತು ತಪ್ಪಿಹುದು ॥ ನೆರೆ ವಿಚಾರಿಸೆ ಲಜ್ಜೆಯರ್ಥವ । ಸರಿಯೆನಿಸಿ ಮಾಡಿಲ್ಲಮವನೆಂ । ದರುಪುವವೋಲೀ ಶರಣಸತಿ ಮೆರೆದಿಹಳದೆಂತೆನಲು ॥ ೩೦ ॥

ವೇದಲೌಕಿಕಮಾರ್ಗನಿಂದಿತ । ಮಾದ ಭೂರಿ ನಿಷೇಧವೃತ್ತಿಯ । ನಾದರಿಸದಲೆ ಬಿಡುವದೇ ವರಲಜ್ಜೆಯಿಂತೆಂದು ॥ ಓದುವಂ ನಿಜಗುಣವಿದಗ್ಧಂ । ಮೇದಿನಿಯೊಳೀ ಲಜ್ಜೆಯುಂ ಪದಿ । ನೈದುಮಡಿಮಿಗಿಲೆನಿಸೆ ತಳೆದಳ್ಪುರುಷಗಿಂ ಶರಣೆ ॥ ೩೧ ॥

ವಾರಿಜಾನನೆಯೊಳ್ಪುರುಷಗಿಂ । ದಾರುಮಡಿ ಮಿಗೆ ಸಾಹಸಂ ನಡೆ । ತೋರುತಿಹುದೆಂಬೀ ವಚನಮಂ ಬೀಳುಗಳೆವಂತೆ ॥ ಮಾರನುಪಟಳಮಿನಿಸು ತನ್ನೊಳು । ಸೇರದಿರ್ದೀ ನಾರಿ ಪತಿಪಾ । ದಾರವಿಂದಸುಸೇವೆ ಸಹಜಮದಾಗಿ ತೋರಿದಳು ॥ ೩೨ ॥

ಪದುಳದಿಂ ಮತ್ತೊಂದು ಪ್ರಸ್ತಾ । ವದೊಳು ಶರಣಂ ಮಧ್ಯರಾತ್ರಿಯೊ । ಳೊದಗಿದ ವಿಚಿತ್ರೋಕ್ತಿಗಳನಾಡಲ್ತೊಡಗಲಾಗ ॥ ಹೃದಯದೊಳು ವಿಸ್ಮಯವನಾಂತಾ । ಬಿದುಮೊಗದ ಗುರುದೇವಿ ಬಲುಶೀ । ಘ್ರದೊಳು ಬಂಧುವ್ರಜವ ಕರೆಯಲ್ಕೂಡಿದರು ಬಂದು ॥ ೩೩ ॥

ಅರಿಯೆ ಬೆಂಕಿಯು ನೀರು ಮಾಯೆಯು । ಪರತರಮಹಾದೇವನಿವರೆ । ಲ್ಲರು ನಿಮಗೆ ಕಾಣಿಸುವರೇನೆಂದೀ ಶರಣನಲ್ಲಿ ॥ ನೆರೆದರಂ ಬೆಸಗೊಳಲೆಮಗೆ ಗೋ । ಚರಿಸದೇನುಮೆನುತ್ತ ಮೂರು । ತ್ತರವನವರೀಯಲ್ಕೊಡನೆ ತಾನೇಳ್ಪು ಪೊರಮಟ್ಟು ॥ ೩೪ ॥

ಸಲೆವಿರಕ್ತಸುಮಠದ ಚೌಕಿಗೆ । ತಳರ್ದು ಬೆಳೆದಿಹ ಮುಳ್ಳುಗಳ್ಳಿಯೊ । ಳಳುಕದೀತಂ ಜಿಗಿದು ಪಾರಿದನೆಚ್ಚರಿಲ್ಲದಲೆ ॥ ತಳುವದೀತನ ಹಿಂದೆ ಬರುತಿಹ । ಕೆಲವು ಬಂಧುಗಳಂಧಕಾರದೆ । ಪೆಳರ್ದು ವಿಸ್ಮಿತರಾಗಿ ಬೆಳಗಂ ತಂದು ಶೋಧಿಸಲು ॥ ೩೫ ॥

ಇಡಿದ ಮುಳ್ಳೊಳು ವಕ್ತ್ರಮಾತ್ರಂ । ನಡುವಿನಿಸು ಕಾಣುತ್ತಿರಲವರ್ । ಬಿಡದೆ ಬಹುತರಯತ್ನದಿಂದಂ ಕಡೆಗೆ ತೆಗೆದಾಗ ॥ ತಡೆಯದೀಕ್ಷಿಸೆ ಮೈಯೊಳಗೆ ಮು । ಳ್ಳುಡಿಯದಿರ್ದುದನರಿದು ಸೋಜಿಗ । ವಡೆದು ನೀನಿಂತೇಕೆ ಮಾಡಿದೆಯೆಂದು ಬೆಸಗೊಳಲು ॥ ೩೬ ॥

ತ್ವರಿತದಿಂ ಪೋಗಿರ್ದನಪ್ಪಂ । ಕರೆಯಲೆಂದೈತಂದೆನಿಲ್ಲಿಗೆ । ಬರುವೆನೀಗಳ್ನೀವು ಪೋಗಿರೆನುತ್ತೊರೆದು ತಾನು ॥ ಹರುಷದಿಂದ ಪವಾಡಬಸವೇ । ಶ್ವರನ ಗುಡಿಯೊಳು ಪೋಗಿ ತಾಂ ಕು । ಳ್ಳಿರಲನಿತರೊಳ್ದಿನಕರೋದಯಮಾದುದಲ್ಲಿಂದ ॥ ೩೭ ॥

ಕೆಲವು ಪೊಳ್ತಿನೊಳಾಲಯಕೆ ಬಂ । ದಲಘುಶರಣಲಲಾಮನೆಂದಿನ । ವೊಲು ಮಹಾದಾಸೋಹಕಾರ್ಯದೆ ತೊಡಗಿದನು ಬಿಡದೆ ॥ ಮಲಹರನ ಶರಣರಿಗೆ ಕಾಣುವ । ವಿಲಸಿತಾಭವದಿವ್ಯರೂಪಂ । ನೆಲದೊಳಾರಿಗೆ ಕಾಣ್ಬುದೆಂದೂರವರು ನುತಿಸಿದರು ॥ ೩೮ ॥

ಜಗವ ನೋಡುವರಲ್ಲದಾಗಳ್ । ಜಗಕೆ ಕಾರಣನಾದ ಶಿವನಂ । ಬಗೆವಡೆದು ನೋಡರ್ಜಗಜ್ಜೀವಿಗಳು ಮೌಢ್ಯದೊಳು ॥ ಜಗವ ನೋಡದೆ ಚಿನ್ನಯನದಿಂ । ಜಗದಧಿಷ್ಠಾನೇಶನಂ ಬಲು । ಸೊಗಸಿನಿಂ ನೋಡುತ್ತ ಸುಖಿಪರು ಶರಣಪುಂಗವರು ॥ ೩೯ ॥

ಶಿವನ ತನುವಂ ಧರಿಸಿ ಮಾಣದೆ । ಶಿವನೊಳುದಯಿಸಿ ಶಿವನೊಳಿರ್ದುಂ । ಶಿವನನೊಳಕೊಂಡಾತನಿಂ ರಕ್ಷಿತರು ತಾವಾಗಿ ॥ ಶಿವನನರಿಯದೆ ಶಿವನನೋಡದೆ । ಭುವನದೊಳು ಬರಿಜೀವಿಸುವ ಮಾ । ನವರ ಪುದಿದಜ್ಞಾನವೆನಿತಿಹುದೋ ವಿಚಾರಿಸಲು ॥ ೪೦ ॥

ಹರನನಾಗಲಿ ಚರನನಾಗಲಿ । ನಿರುಕಿಸದೆ ನಡುನಿಶೆಯೊಳೀತಂ । ಬರಿದೆ ತೆರಳ್ದಾ ಮುಳ್ಳುಗಳ್ಳಿಯೊಳೆಂತು ಪೊಕ್ಕಪನು ॥ ಹರಚರರ ದರ್ಶನಸುಖದೊಳತಿ । ಪರವಶತೆಯಂ ತಳೆದ ಶರಣನ । ಪರತರಮಹತ್ವಗಳನರಿಯಲು ಶಕ್ಯಮೇ ಜನಕೆ ॥ ೪೧ ॥

ಶಿಶುವಿನ ತೊದಲ್ವಾತುಗಳಿಗಂ । ಪೊಸಜನನಿಯುಂ ಮಿತ್ರಗಬ್ಜಂ । ಕುಸುಮಕಾರಡಿ ನಿಜಧವಾತಿಥ್ಯಕೆ ಪತಿವ್ರತೆಯು ॥ ಶಶಧರೋದಯಕಂಬುಧಿ ಸುಧಾ । ರಸಕೆ ಸುರಪತಿ ಹಿಗ್ಗುವಂದದೆ । ಪಶುಪತಿಪ್ರಮಥರ್ಗೆ ಹಿಗ್ಗುತ್ತಿರ್ದನಿವನೊಪ್ಪಿ ॥ ೪೨ ॥

ಭವರುಜಾಭೇಷಜಮಿದಂಜನ । ನಿವಹಜಲಧರಚಂಡಪವನಂ । ಶಿವಪದಾಮಲಸೌಧಸೋಪಾನಂ ಮಲಾಪಹವು ॥ ಪ್ರವಿಮಲಜ್ಞಾನಾಮೃತಾಂಬುಧಿ । ಕುವಲಯಾಪ್ತಕರಂ ಮಹತ್ವಸು । ಭವನಮೆಲೆ ವೀರೇಶ ನಿನ್ನಂಘ್ರಿಯ ನೆನಹು ಸಲಹು ॥ ೪೩ ॥

ಅಂತು ಸಂಧಿ ೭ಕ್ಕೆ ಪದಗಳು ೩೮೦.

ಭದ್ರಂ ಭೂಯಾತ್.



ಶ್ರೀಶಂಭವೇನಮಃ



## ಎಂಟನೆಯ ಸಂಧಿ ಪ್ರಾರಂಭ.

ಸೂಚನೆ ॥ ದೇವತೆಯಜಾತ್ರೆಯೊಳು ಮಹಿಷವ । ಧಾವಲಂಬನಪರರಿಗೊಪ್ಪದೆ । ಭಾವಭವಹರಶರಣನೂರಂ ಬಿಟ್ಟನುಮ್ಮಳಿಸಿ ॥ ಪಲ್ಲ ॥

ಪದ ॥ ಒಡಿಯಲೆಂದೊನಕೆಯನು ನೆಗಹಿದ । ಜಡಜಲೋಚನೆಗೊಲಿದೆ ನಿನ್ನಂ । ಬಿಡದೆ ಕಲ್ಗಳಿನಿಟ್ಟ ಸಾಂಖ್ಯಗೆ ಮೆಚ್ಚಿದೈ ಶಿವನೇ ॥ ಕಡುವಿನಯದಿಂ ಪೂಜಿ ಪೆನ್ನಂ । ಪಿಡಿದು ಪಾಲಿಸದಿರುವೆ ಜಗದೊಳು । ಕಡುಹಿನವರಂ ಮನ್ನಿಸುವರಾ ರಾದೊಡುಂ ಪೊರೆಯೋ ॥ ೧ ॥

ಪೂತಗಿಡವಳ್ಳಿಗಳನೀ ಪರಿ । ಪೂತಚಿತ್ತಂ ಪಣ್ಮರಲ್ಗಳ । ನೋತು ಮರೆದುಂ ಕೊಯ್ಯಲಿಲ್ಲೆಂದೆಂದು ಲಿಂಗಕ್ಕೆ ॥ ಭೂತಲಕ್ಕುದುರಿರ್ದ ಬಿಲ್ವ । ವ್ರಾತಸುಮಗಳನಾಯ್ದುತಂದು ಪು । ನೀತಮೆನೆ ಧರಿಸುತ್ತಲಿರ್ದನಿದೇ ವಿಹಿತ ಮೆನುತ ॥ ೨ ॥

ಹಸುರಡಗದಿಹ ಮೂರುದಳಗಳ । ಪೊಸತೆನಿಪ ಬಿಲ್ವವನು ಪೂಜಿ ಯೊ । ಳೊಸೆದು ಬಳಿಸುವದುಚಿತಮೆಂಬೀ ಶಾಸ್ತ್ರವಚನವನು ॥ ಪುಸಿಗೊಳಿಸು ವಂತೊಣಗಿದಾ ಪ । ಣ್ತೆಸಳಗಲಿದೊಂದೆರಡುದಳಗಳ । ರಸೆಗುದುರ್ದ ಪತ್ರಗಳ ನಿವನುಪಯೋಗಿಸುತ್ತಿಹನು ॥ ೩ ॥

ಫಲಸುಮಗಳಂ ಕೊಯ್ದೊಡಾ ಗಿಡ । ಗಳಿಗೆ ನೋವುಂಟಾಗದೇ ಮೇ । ಣ್ನೆಲದೊಳಿದಹಿಂಸಾಪರರಿಗೊಪ್ಪಿಗೆಯೆ ಪ್ರೀತಿಯೊಳು ॥ ತಳೆದ ಪೂಪಣ್ಗಳನು ಬಲುಹಿಂ । ಕಳೆದೊಡಾ ಭೂಜಂಗಳಿಚ್ಛೆಯು । ಕಳೆಗೆಡದೆ ಎನುತಿರ್ದನೀ ಕಾರುಣ್ಯವಾರಾಶಿ ॥ ೪ ॥

ನೀವು ಪಿಡಿದಿಹ ಪ್ರೀತಿವಸ್ತುವ । ನಾವನಾದೊಡುಮಪಹರಿಸಿದೊಡೆ । ನೋವು ನಿಮಗಪ್ಪಂತೆ ಫಲಪುಷ್ಪಂಗಳಂ ಕುಯ್ಯೆ ॥ ಆ ವಸುಮತೀರುಹಲ ತಾವಳಿ । ಗಾವಗಂ ಸಮನಿಸುವದೆಂಬೀ । ಭಾವಗರ್ಭಿತಬೋಧವೆಗುತ್ತಿರ್ದ್ದನುರೆ ಜನಕೆ ॥ ೫ ॥

ಫಲಕುಸುಮಗಳಿಗಾಗಿ ತಮಗತಿ । ಬಲುಹಿನಿಂದಂ ನರರು ಮಾಳ್ಪಂ । ಡಲೆಯ ಸಹಿಸದೆ ಕೆಲವು ಗಿಡವಳ್ಳಿಗಳು ಮುಳ್ಗಳನು ॥ ತಳೆದವಾದೊಡುಮಿೂನರರ್ತ । ತ್ಫಲಗಳಂ ಕೊಯ್ವುದನು ಬಿಡರೆಂ । ದಲಘುಶರಣಂ ನುಡಿದು ಮರುಗುತ್ತಿರ್ದನೊಮ್ಮೊಮ್ಮೆ ॥ ೬ ॥

ಕರುಣವಿರಲ್ಕೆ ಜೀವರೊಳು ಮೇ । ಣ್ಕರುಣವಿಲ್ಲದ ಧರ್ಮವಾವುದು । ಕರುಣವೇ ಮೋಕ್ಷಕ್ಕೆ ಸಾಧನಮೆಂದು ನಿಜಗುಣನು ॥ ಕರುಣಿಯೆನಿಸಿದ ಬಸವದಂಡೇ । ಶ್ವರನು ಪೇಳ್ದೀ ನುಡಿಗಳರ್ಥವೆ । ಕುರುಹುಗೊಂಡಂತಿರ್ದನೀ ನಿರ್ಧೂತಮತ್ಸರನು ॥ ೭ ॥

ಇರುವೆ ಮೊದಲಾದೆಲ್ಲ ಜೀವರು । ನೆರೆ ತನಗೆ ಸರಿಯೆಂದು ಕಾಣುವ । ನರನೆ ಪುರುಷೋತ್ತಮನೆನಿಸುವಂ ಪರಹಿತಕ್ಕಾಗಿ ॥ ವರಸುಕೃತಕೀರ್ತಿಗಳ ನೆಳಸದೆ । ಹರಣಮಂ ಹಂಗಿಲ್ಲದರ್ಪಿಪ । ಗೊರೆಯದಾರ್ಭುವನಗಳೊಳೆಂದೆನುತಿರ್ದನೀ ಮಹಿಮಂ ॥ ೮ ॥

ಶರಣನ ಮಹತ್ವಗಳು ಬೆಳೆವು । ತ್ತಿರುವ ಸಮಯದೊಳೊಮ್ಮೆ ಭೀಷಣ । ಕರದ ಮಾರೀರೋಗಮದು ನಾಲತ್ತವಾಡದೊಳು ॥ ಪಿರಿದಡಸಿ ಬಹುಜನರು ಪ್ರಾಣವ । ತೊರೆದರತಿಶೀಘ್ರದೊಳು ನಿಲ್ಲದೆ । ಮರಣಸಂಖ್ಯೆಯು ಪೆರ್ಚಲಾದುದು ನೋಡಿ ಹಾಹಾರಿ ॥ ೯ ॥

ಊರುಳಿಯದಿನ್ನಲ್ಪಕಾಲದೆ । ಮಾರಿಯೆಮ್ಮಂ ನುಂಗುತಿರ್ಪಳು । ಭೂರಿಕೋಪಿತೆಯಾದ ದೇವಿಹು ಶಾಂತಿಗೈಯದೊಡೆ ॥ ಪಾರುಗಾಣೆವು ಮೃತ್ಯುವಿಂದಂ । ಬೇರುಪಾಯುವುದಿಲ್ಲಮಿದಕೆಂ । ದಾರಯಿದು ನಿಶ್ಚಯಿಸಿ ಕೆಲಮುಂದಾಳುಗಳುಬಿಡದೆ ॥ ೧೦ ॥

ಕೂಡಿ ರಾವಜಿಯಪ್ಪನೆಂಬಾ । ನಾಡಗೌಡನ ಬಳಿಗೆ ಬಂದುರೆ । ಮಾಡ ಬೇಕೀ ಗ್ರಾಮದೇವಿಯ ಜಾತ್ರೆಯನು ನೀವು ॥ ಮಾಡದಿರ್ದೊಡೆ ಸಂಘಟಿಸಿದೀ । ಕೇಡು ಬಿಡದೆಂದುಸುರಲಾತಂ । ಪೂಡಿದಂ ತಜ್ಜನರನೊಡಗೊಂಡಾ ಮಹೋತ್ಸವವಾ ॥ ೧೧ ॥

ಪುರವ ಸಾರಣೆಕಾರಣಿಗಳಿಂ । ಭರದೆ ಸಿಂಗರಿಸಿದರು ಹರಕೆಯ । ಕುರಿಗಳಂ ಕೋಣಂಗಳಂ ಕೂಡಿಸಲು ತೊಡಗಿದರು ॥ ಹಿರಿಯಮಾದಿಗರಂ ಕರಸಿಕೊಂ । ಡರಿದು ಕಾರ್ಯಕ್ರಮವನವರಿಂ । ಹರುಷದಿಂದಂಕಿಯನು ಹಾಕಿದರಾಗ ನಿರ್ಧರಿಸಿ ॥ ೧೨ ॥

ಇದನರಿದು ಶರಣಾಗ್ರಗಣ್ಯಂ । ಹೃದಯದೊಳು ಖೇದಂಬಡೆದು ತಳು । ವದೆ ಮರುಗುತಾ ನಾಡಗೌಡನ ಮನೆಗೆ ನಡೆತಂದು ॥ ಪುದಿದು ದೇವಿಯ ಜಾತ್ರೆಯ ಪ್ರಯ । ತ್ನದೊಳು ಜನರಿಂ ಕೂಡಿಕೊಂಡತಿ । ಪದುಳದಿಂ ಕುಳ್ಳಿರ್ದ ರಾವಜಿಯಪ್ಪನಂ ಕಂಡು ॥ ೧೩ ॥

ದೊರೆಯೆ ದೇವಿಯ ಜಾತ್ರೆಯಂ ಸಡ । ಗರದೆ ಮಾಡುವೆಯೆಂದು ಕೇಳ್ದೆನು । ಕುರಿಗಳಂ ಕೋಣವನು ಕಡಿಸುವೆಯಂತೆ ದೇವತೆಗೆ ॥ ಅರಿಯೆ ಪಶುವಧೆಗೈಯಲಾಗದು । ದುರಿತಕರ್ಮವೆನಿಪ್ಪುದದು ದೈ । ತ್ಯರು ನೆಗಳ್ದ ವರದನು ಮನುಜರು ಮಾಡುವದು ಹೊಲ್ಲ ॥ ೧೪ ॥

ಎಲ್ಲ ಶಾಸ್ತ್ರಪುರಾಣನಿಚಯಂ । ಕೊಲ್ಲಬಾರದು ಪ್ರಾಣಿಗಳನೆಂ । ದೆಲ್ಲರಿಗೆ ಬೋಧಿಪುದಹಿಂಸೆಯೆ ಧರ್ಮವೆಂದೆನುತ ॥ ಎಲ್ಲಮತಗಳಿಗಿಂದಧಿಕವಹ । ಸಲ್ಲಲಿತಶಿವಮತದೆ ಪುಟ್ಟಿದ । ಬಲ್ಲಿದನು ನೀನೀಯಹಿಂಸೆಯ ಪಾಲಿಸಲೆಬೇಕು ॥ ೧೫ ॥

ತನುವಚೋಮಾನಸಗಳಿಂದನು । ದಿನದೊಳಿನಿಸುಂ ನೋವನಾಗಿಪು । ದನುಚಿತಂ ತನ್ನಂತಖಿಲಜೀವರನು ಭಾವಿಪುದೆ ॥ ಮನುಜನಿಗೆ ಕರ್ತವ್ಯಮಾಗಿರ । ಲಿನಿತು ಹಿಂಸಾಮನವು ನಿನ್ನೊಳು । ಜನಿಸಿದುದಕೇನೆಂದು ಹೇಳಲಿ ಸುಪ್ರತಿಷ್ಠಾತ್ಮಾ ॥ ೧೬ ॥

ರೋಸದಿಂದುಲ್ಲಾಸದಿಂ ಪಲ । ಲಾಶೆಯಿಂ ಬೇರಾವಬಗೆಯಿಂ । ಘಾಶಿ ಮಿಗೆ ಕೊಲ್ವಾತನಿಹಪರಸುಖಕೆ ಹೊರತಾಗಿ ॥ ಕ್ಲೇಶನಿಧಿಯೆನ್ನಿಸಿದ ನಿರ ಯನಿ । ವಾಸದೊಳು ಕಷ್ಟಂಬಡುವನೆಂ । ದಾ ಸಮಸ್ತವಿದಗ್ಧರೊರೆವರು ಕೇಳು ಶ್ರೀಮಂತ ॥ ೧೭ ॥

ಪಾಲು ತುಪ್ಪಗಳಿಂದ ಶಾಂತಿಯ । ನಾಳುವೀ ಭೂದೇವಿ ತನ್ನಯ। ಮೇಲೆ ಬೀಳ್ದಾ ರಕ್ತಬಿಂದುಗಳಿಂದ ಕಾಯ್ಪೇರಿ ॥ ಹಾಳು ದುರ್ಭಿಕ್ಷಾದಿಗಳಿ ಗನು । ಕೂಲೆಯಾಗುವಳೆಂದು ಸದ್ಬುಧ । ಜಾಲಮುಪದೇಶಿಸುವದನು ಕೇಳಿಲ್ಲ ವೇ ಭೂಪ ॥ ೧೮ ॥

ಪಶುವಿನಂ ಸಂಹರಿಪ ಮನುಜಂ । ಪಶುವಿನುದರದೊಳುದಿಸಿ ಮೇಣಾ। ಪಶುನರತ್ವಂಬಡೆದು ಕೊಲ್ಲುವದಾ ನರನನೆಂದು ॥ ಉಸುರುವಖಿಲಸ್ಮೃತಿಗಳ ರ್ಥವ । ನೊಸೆದು ಪರಿಭಾವಿಸದೆ ಭಾವಿಕ । ವಿಸರದಿಂದೊಡಗೂಡಿ ಪಶುವಧೆ ಗೆಳಸುವರೆ ನೋಡು ॥ ೧೯ ॥

ಆವನಿಂದಾವುದಿಸಿರುವೆವಾ । ದೇವದೇವೋತ್ತಮನುಳಿದಖಿಲ । ಜೀವ ರಂ ಸೃಜಿಸಿಹುದರಿಂದಾ ಪ್ರಾಣಿತತಿಯೆಮಗೆ ॥ ಭಾವಿಸಲ್ವರಬಂಧುವರ್ಗಂ । ಜೀವಿಗಳನಿಕ್ಕಿದೊಡೆ ಬಂಧುವ । ಧಾವಿಶೇಷದ್ರೋಹಮುಂಟದೆ ಸಹನವೇ ಶಿವಗೆ ॥ ೨೦ ॥

ಇಳೆಯಭೋಗವನುಣ್ಣಲೆಂದಾ । ವೆಳಸಿ ಜೀವಿಸುವಂತೆ ಜೀವರು । ಪಲವು ಭೋಗವನುಣ್ಣಬೇಕೆಂದಳಸಿ ಜೀವಿಪರು ॥ ನೆಲದೊಳೆಮ್ಮಯ ಕೊರಲ ರಿದೊಡೆಮ । ಗಳಲೊದಗುವಂತವರಿಗಾಗುವ । ದೊಲೆದು ತನ್ನಂತನ್ಯಜೀವರ ನರಿಯಬೇಕೆರೆಯ ॥ ೨೧ ॥

ತಿಳಿಯಹಿಂಸಾಪರನಿಗೆಲ್ಲರು । ಗೆಳೆಯರಾಗುವರವರ ಸನ್ನಿಧಿ । ಯೊಳು ಪರಸ್ಪರವೈರಭಾವವನುಳಿದು ಪ್ರಾಣಿಗಳು ॥ ಸಲುಗೆಯಿಂ ಬಾಳುವವಹಿಂಸೆ ಯೆ । ಸಲೆಯಯಮಾಂಗದೊಳಾದಿಯೆನಿಪುದು । ನೆಲದೊಳಿದು ಪರಮಾರ್ಯ ಧರ್ಮಾಲಯದ ತಳಹದಿಯು ॥ ೨೨ ॥

ವ್ಯಾಸಪೌರಾಣಗಳನೆಲ್ಲವ । ಸೋಸಿ ನೋಡಿದೊಡನ್ಯಪೀಡೆಯೆ । ಕ್ಲೇಶಕಾರಕಪಾಪವೆಂದನ್ಯೋಪಕೃತಿಗಿಂದ ॥ ಶ್ರೀಸುಕೃತಮಿಲ್ಲೆಂದು ಕಾಣು ವ । ದೀಶಭಕ್ತನೆ ಪ್ರಾಣಿಹಿಂಸೆಗೆ । ಹೇಸು ಕೋಣನ ಕೊಲಿಸಬೇಡೆಂದನು ವಿನಿಂ ಪೇಳೆ ॥ ೧೩ ॥

ಶರಣನೊರೆದೀ ಬೋಧೆಗಿನಿಸೆದೆ । ಗರಗದಂದಾ ನಾಡಗೌಡಂ । ಜರಿಯ ದಿವನಂ ಕೂರ್ತು ಕೇಳ್ದೈ ದೇವಿ ಮುನಿದಿಹಳು ॥ ಭರದೊಳಾಕೆಯ ಶಾಂತಿ ಗೈಯದೊ । ಡುರಿದು ಪೋಪುದು ಗ್ರಾಮವೆಲ್ಲಂ । ಮರಣಪರಿಹಾರಾರ್ಥವೀ ಜಾತ್ರೆಯನು ಮಾಡುವೆವು ॥ ೧೪ ॥

ಬಿಡದೆ ಕುರಿಕೋಣಂಗಳಂಬಲಿ । ಗೊಡಲುಬೇಕದರಿಂದ ದೇವತೆ । ಪಡುವಳತಿಸಂತುಷ್ಟಿಯನು ಬಹುಕಾಲದಿಂ ಬಂದ ॥ ನಡತೆಯಿದು ತಪ್ಪಲ್ಲ ವೆನುತಂ । ನುಡಿವುತಿರ್ಪರು ಮುದುಕರೆಲ್ಲರು । ಬಿಡುವದೆಂತಾವಿಂದು ವೃದ್ಧಾ ಚಾರವನು ಪೇಳು ॥ ೧೫ ॥

ಅನ್ನದಿಂ ಸಂತುಷ್ಟಿವಡೆಯುಳು । ಮನ್ನಣೆಯ ಬರಿಮಾತಿನಿಂದಂ । ಸನ್ನು ತಜಗಜ್ಜನನಿ ದೇವತೆ ತಣಿಯುಳದರಿಂದ ॥ ಮುನ್ನಿನವರೀಕೋಣಕುರಿಗಳ । ನುನ್ನಿಸುತ ಬಲಿಗೊಟ್ಟು ಸುಖಸಂ । ಪನ್ನತೆಯನಾಂತಿರ್ಪರೀ ದೇವತೆಯ ಕೃಪೆಯಿಂದ ॥ ೧೬ ॥

ಅಡಗಿನಿಚ್ಛೆಗೆ ಪಶುಗಳಂ ಕೊಂ । ದೊಡದು ಹಿಂಸೆಯೆನಿಪ್ಪುದಲ್ಲದೆ । ಪೊಡವಿಯೊಳು ದೇವತೆಯ ತೃಪ್ತಿನಿಮಿತ್ತದಿಂ ಪಶುವ ॥ ಪಿಡಿದು ಕಡಿದೊಡ ಹಿಂಸೆಯೆನಿಪುದು । ಸಡಗರದೊಳಾ ಪಶುಗಳಂ ಬಲಿ । ಗೊಡದೊಡವಳಂ ವಂಚಿಸಿದ ಪಾತಕವು ಸಮನಿಸದೆ ॥ ೧೭ ॥

ದೇವರಿಗೆ ಬಲಿವಸ್ತುವಾಗಿ ಧ । ರಾವಲಯದೊಳು ಜನಿಸಿಹುದು ಕುರಿ । ದೇವಿಯೆದುರೊಳು ಕಡಿಸಿಕೊಳ್ಳಲು ಕೋಣವದು ಪುಟ್ಟಿ ॥ ಆವಗಂ ನಿರ್ಮಾ ಣವಾಗಿಹು । ದೀ ವಿಚಾರಂ ವ್ಯಾಪ್ತಮಿರ್ಪುದು । ಭಾವದೊಳು ಬೇರಿದಕೆ ಭಾವಿಪುದೇಕೆ ನೀಂ ಬರಿದೆ ॥ ೧೮ ॥

ಜಾಣರಾದ ಮಹೀಸುರರ್ಕಳು । ಮಾಣದಲೆ ಯಜ್ಞದೊಳು ವಿಧಿಯಿಂ । ಪ್ರಾಣಿವಧೆಯಂ ಕೈವುದಿಲ್ಲವೆ ದೇವಿಗಾವಿಂದು ॥ ಕೋಣನಂ ಸಂಹರಿಸಿದೊಡಿಬ । ಪೂರ್ಣಿಣೆಯೇನೆಮಗೆಂದು ದೊರೆಯಿೊ । ಸ್ಥಾಣುಶರಣಂಗುತ್ತರಂಗುಡಲದನು ಕೇಳ್ದಿವನು ॥ ೨೯ ॥

ದೇವಿನಿಮ್ಮಂ ಮುನಿದಳೇತಕೆ । ನೀವು ಮಾಡಿದ ದೋಷವೇನಾ । ದೇವಿ ಮುನಿಸಂ ಬಿಡುವಳೇ ಕೋಣವನು ಕಡಿಸಿದೊಡೆ ॥ ದೇವಿಕೋಣಗಳಲ್ಲಿ ಪೆರ್ಚಿದ । ತೀವವೈರಮದಾವುದೈ ತ । ದ್ಪ್ರಾವಣಬಲಂ ದೇವಿಗಿಲ್ಲವೆ ನೀವು ಕೊಲ್ಲುವಡೆ ॥ ೩೦ ॥

ಕೇಳು ವೃದ್ಧಾಚಾರಮಂ ಪರಿ । ಪಾಲಿಸಲೆಬೇಕಾದೊಡಿದು ದು । ಶ್ಶೀಲಮೆನಿಸುತ್ತಿಹುದು ವೃದ್ಧಾಚಾರವಲ್ಲವಲಾ ॥ ಮೇಲೆನಿಪ ವಿಧಿಯೊಳು ನಿಷೇಧದೊ । ಳಾಳದಿಹ ವರ್ತನವೆ ನರರನು । ಕೂಲವೃದ್ಧಾಚಾರವೆನಿಸುವದದನೆಸಗಲಹುದು ॥ ೩೧ ॥

ಇದು ವಿಧಿಯೊಳಿಲ್ಲಂ ನಿಷೇಧಾ । ಸ್ಪದಮಿಹುದು ಮತಿಯೊಳ್ವಿಚಾರಿಸ । ದಿದಕೆ ವೃದ್ಧಾಚಾರಮೆಂಬರೆ ಮೂಢಮಾನವರು ॥ ಮುದದೆ ತುಸುಬರಿಸಗಳಿನೀಚೆಗೆ । ಮದಮಹಿಷಬಲಿಯಂ ಕುಡುವ ವಿಭ । ವದೆ ಬೆರೆವುತಂ ಬಂದಿಹರು ಧರ್ಮಾಂಧರೆಂದೆನಿಸಿ ॥ ೩೨ ॥

ಇದಕೆ ಮುನ್ನಂ ಕೆಲವು ಕಾಲಂ । ಪದೆದು ಸುತಬಲಿಮನುಜಬಲಿಗಳ । ನದಯುದಿಂ ಕುಡುತಿರ್ದರಂತೆ ಕೃತಾರ್ಥಭಾವದಲಿ ॥ ಅದನು ಬಿಟ್ಟರದೇತಕೈಬಿ । ಟ್ಟುದಕೆ ದೇವತೆ ಮುನಿಯದಿಹಳೇ । ಚೆದರದಾತ್ಮಜಬಲಿಯನೀವವರೊಳರೆ ಪೇಳೀಗ ॥ ೩೩ ॥

ಅಳುವಳಂ ಕಂಡಳಲುತೊಡಗಿದ । ಪೊಳಲಿಗರಕತೆಯಂತೆ ದುಷ್ಕೃತಿ । ಗಳನು ವೃದ್ಧಾಚಾರವೆಂದಾಚರಿಸುವದು ಗುಣವೇ ॥ ತಿಳಿಯಬೇಕದರಿಂಗಿತವನಿ । ನ್ನುಳಿಯಬೇಕದಯೋಗ್ಯಮಿರ್ದೊಡೆ । ತಳೆಯಬೇಕುಚಿತಮನೆ ತೋರೆ ವಿಚಾರಪರನಾಗಿ ॥ ೩೪ ॥

ಜನರಭೀಪ್ಸಾರ್ಥಗಳನೀಯದೆ । ಜನಗಳನೆ ತಾಂ ಕಾಡಿಬೇಡುತ । ಜನಗಳಿಂದಂ ಕೊಲಿಸಿ ಕುರಿಯಂ ತಿಂದು ಹೊಟ್ಟೆಯನು ॥ ಜನದೆ ಹೊರ ಕೊಂಬಾಕೆಯಲ್ಲಾ । ವಿನುತದೇವತೆ ಸುಮ್ಮನೇ ನೀ । ನನುವರಿಯದಾ ದೇವಿ ಗಪವಾದವನು ಕೊಡಬೇಡ ॥ ೩೫ ॥

ಸುತಮನುಜಪಶುಪಕ್ಷಿಗಳನಾ । ಹುತಿಗೊಳುವಳೇ ನಿತ್ಯತೃಪ್ತಿಯ । ವಿತತವೈಭವದಿಂದ ಮೆರೆವಾ ಪರಮಮಂಗಲೆಯು ॥ ನುತಕುಸುಮಫಲಪತ್ರ ಗಂಧಾ । ಕ್ಷತೆಪುನೀತಾನ್ನಗಳನೆವದಿಂ । ನತರ ಭಕ್ತಿಯ ಸ್ವೀಕರಿಸುವಳ್ತದವ ನಕ್ಕಾಗಿ ॥ ೩೬ ॥

ಎಮ್ಮಮಕ್ಕಳನಿಕ್ಕಿದೊಡಮೆಮ । ಗುಮ್ಮಳಂ ಜನಿಪಂದದಿಂ ಜಗ । ದಮ್ಮನೆನಿಸಿದ ದೇವಿ ತನ್ನಿಂದೊಗೆದ ಪಶುಗಳನು ॥ ಹೆಮ್ಮೆಯಿಂದಿಕ್ಕಿದೊಡೆ ಸಂತಾ । ಪಂ ಮೊಳೆತು ತದ್ವಧಕತತಿಯಂ । ಸುಮ್ಮನೇ ಬಿಡುತಿಹಳೆ ದುಃಖಾ ಗ್ನಿಯೊಳು ಬೇಯಿಸದೆ ॥ ೩೭ ॥

ಘನಶುಭೋದಯೆ ವರಕೃಪಾಮೃತ । ಧುನಿಯುನಾಥಸುಕಲ್ಪವಲ್ಲರಿ । ವಿನುತದೀನಜನೌಘರಕ್ಷಕೆಯಾದ ಮಾದೇವಿ ॥ ದನುಜರಂದದೆ ಕೋಣಮೇ ಕೆಗ । ಳನು ಕೊಲಿಸಿ ತಾಂ ತಿಂಬಳೆಂಬೀ । ಬಿನುಗುಮಾತಿಗೆ ನಗದಿಹರೆ ಧರೆ ಯೊಳ್ವಿವೇಕಿಗಳು ॥ ೩೮ ॥

ಹಾಲು ಮೊಸರುಂ ತುಪ್ಪ ಗೊಬ್ಬರ । ಮೇಲೆನಿಪ್ಪುಣೆಗಳು ನರಗನು । ಕೂಲವಾಗಲಿಯೆಂದು ದೇವತೆಯಾಡುಕುರಿಗಳನು ॥ ಲೋಲಮೆನೆ ಪಡೆದಿರ್ಪ ಳಲ್ಲದ । ಶೀಲತನದಿಂ ತನಗೆ ಮಾನವ । ಜಾಲಕಾಹುತಿಯಾಗಲೆಂದಿಚ್ಛಯಿಸಿ ಪಡೆದಿಲ್ಲ ॥ ೩೯ ॥

ಹೊಟ್ಟೆಗಾಗಿ ಸಮಸ್ತಧಾನ್ಯವ । ನೆಟ್ಟನಾ ದೇವತೆಯು ಜಗದೊಳು । ಹುಟ್ಟಿಸಿರ್ದುಂ ಕ್ರೂರಮನುಜಂ ತನ್ನನಾಲಿಗೆಯು ॥ ಕೆಟ್ಟಚಟಕೊಳಗಾಗಿ ಮಾಂಸವ । ನಟ್ಟು ನಾನಾಧಾನ್ಯಪಾಕದೊ । ಳೊಟ್ಟುಗೂಡಿಸಿ ತಿಂಬನಾ ದೇವ ತೆಯು ಪೆಸರಿಂದ ॥ ೪೦ ॥

ಸ್ಮೃತಿಮತಕ್ಕನುಸರಿಸಿ ವಿಧಿಯಿಂ । ಶ್ರುತಿಸುಘೋಷಂ ಮೆರೆಯೆ ಮಖ ದೊಳು । ಹತಿಸಿ ಪಶುವಂ ಬದುಕಿಸುತ್ತಿರ್ದರು ವೊದಲದ್ವಿಜರು ॥ ವಿತತ ತದ್ಬಲಮಿಲ್ಲಮೆಂದನು । ಮತಿಸಿ ಪಿಷ್ಟಪಶುವನೆಸಗಿ ತ । ತ್ಕ್ರತುವ ಮಾಳ್ಪರು ಕೆಲಬರವರೊಳು ಹಿಂಸೆಗಗಿದಿಂದು ॥ ೪೧ ॥

ಆದೊಡುಂ ಪಶುಯಜ್ಞಮದು ಭ । ಕ್ತಾದಿಷಟ್ಸ್ಥಲಮಾರ್ಗದೊಳು ಸ । ವ್ಮೋದದಿಂ ಪರಿಣಮಿಪರಿಗೆ ಕರಣೀಯಮಲ್ಲೆಂದು ॥ ಸಾದರಂಮಿಗೆ ಶಂಭು ತಂತ್ರಗ । ಳೋದುವವು ಮೇಣೆಮ್ಮವರಿದಂ । ಕೈದವರದಾರಾರುಮಿಲ್ಲಂ ಕೇಳಿ ದಂತಿರಲಿ ॥ ೪೨ ॥

ಇಲ್ಲಿ ಮಾಳ್ಪೀ ಜಾತ್ರೆ ಸ್ಮೃತಿಮತ । ಮಲ್ಲಮಿದರೊಳು ಕ್ರೂರರಬ್ಬರ । ಮಲ್ಲದೇ ಶ್ರುತಿಘೋಷಮಲ್ಲಂ ಸದ್ವಿಧಿಗಳಿಲ್ಲ ॥ ಕಲ್ಲೆದೆಯುಪುಲ್ಕಸರ ಸಂಭ್ರಮ । ವಲ್ಲದೇ ಋತ್ವಿಜರ ನೆರವಿನಿ । ಸಿಲ್ಲ ಮಹಿಮರ ಭೋಜನಸಮಾರಂಭಮಿಲ್ಲ ಗಡಾ ॥ ೪೩ ॥

ಹೊಲೆಯನೇ ದೇವಿಗೆ ರಮಣನೆಂ । ದಳಿವ ಭಯದಿಂದವನು ಕೋಣ ನೊ । ಡಲೊಳು ಸೇರಿದನೆಂದದಂ ತಿಳಿದಾಣ್ಮನಂ ಕೊಲಿಸಿ ॥ ಬಳೆಯೊಡೆದವಳ್ ರಂಡಿತನಮಂ । ತಳೆದಳೆಂದುಂ ಮೈದುನಂ ಬಲು । ಹೊಲಸುಬೈಗಳ ಬೈದನೆಂದುಂ ತತ್ಪ್ರಯೋಗವನು ॥ ೪೪ ॥

ನೆರೆದ ಜಾತ್ರೆಯೊಳೆಸಗಿ ದೇವಿಯ । ಪಿರಿಯತನಕೆ ಕಲಂಕನೊದವಿಸಿ । ದುರಿತಕೀಡಾಗುವದಕಿಂದೀ ಜಾತ್ರೆಯನು ನೀನು ॥ ಹರುಷದಿಂ ಪೂಜೋತ್ಸವ ಗಳಿಂ । ಸರಸಭಜನಸುಕೀರ್ತನಗಳಿಂ । ದುರುತರಗಣಾರಾಧನಗಳಿಂ ಮಾಡ ಲೊಳಿತಲ್ತೆ ॥ ೪೫ ॥

ಕ್ಷೋಣಿಯೊಳಗಜ್ಞಾನರೂಪದ । ಕೋಣನಂ ಸಂಹರಿಸಬೇಕೀ । ಕೋಣ ವೆಸಗಿದ ದೋಷವೇನಿದನೇಕೆ ಕೊಲ್ಲಿಸುವೆ ॥ ಪ್ರಾಣದಾನವ ಮಾಡೆನುತ್ತಂ । ಮಾಣದೊರೆವುತ್ತಿರಲು ಕಿವಿಯೊಳು । ಬಾಣಮುಡಿದಂತಾಗಿ ಸಿಡಿಮಿಡಿಗೊಂಡು ಸೈರಿಸದೆ ॥ ೪೬ ॥

ನಾಡಗೌಡನ ಸಲುಗೆಗೀಡಾ । ದಾಡಗಾಯುವ ಕುರುಬನೋರ್ವಂ । ಕೂಡಲೇ ಕಡುಕಿನಿಸಿನಿಂದೆಲೆ ಹುಚ್ಚ ಜಂಗಮನೆ ॥ ನಾಡೊಳಾ ಪಿಂದಿನವರೇತಕೆ। ಮಾಡುತೃತಂದಿರ್ಪರವರೇಂ। ಮೂಢರೋ ನೀನೋರ್ವನೇ ಬಲು ಪ್ರೌಢ ನೋಜಗದೆ ॥ ೪೭ ॥

ಹೇಳಬೇಡೆಮ್ಮಲ್ಲಿ ನಿನ್ನೀ। ಹಾಳುಶಾಸ್ತ್ರವನೂರಜನರಂ । ಕಾಲುಹಿಡಿದೀ ಮಾರಿಯೆಳೆವುದು ಕಾಣದೇ ನಿನಗೆ ॥ ತಾಳದೆಸಪೊಳ್ಗಜ್ಜಮಂ ನೀಂ । ಬೀಳುಗಳೆದಡ್ಡಾಗಬೇಡವು । ಕೇಳಬಂದಿಲ್ಲಿಂದು ನಿನ್ನ ಪುರಾಣವನು ನಾವು ॥ ೪೮ ॥

ದೊರೆಗಳೇ ತಡಮಾಡದಿರಿಯೂ । ರುರಿದೊಡುಂ ಹನುಮಂತದೇವರು । ಹೊರಗೆನಿಪ್ಪಾ ಗಾದಿಯಂತೀಯಯ್ಯಗಾಗುತಿಹ ॥ ಕೊರತೆಯೇನೀತಂ ಪುರಾಣವ । ನೊರೆವುತಿಲ್ಲಿಯೆ ಕುಳಿತುಕೊಳ್ಳಲಿ। ಕುರಿಗಳಂ ಕೂಡಿಸಲು ಪೋಗುವ ನಡೆಯಿರಿಂತೆಂದ ॥ ೪೯ ॥

ಬೇವಿನೊಳು ಮಾಧುರ್ಯರಸಮುಂ । ಕಾವನೊಳು ವೈರಾಗ್ಯಮತಿಯುಂ । ಪಾವಿನೊಳ್ಸರಸರಳಗತಿಯುಂ ಕಬ್ಬಿಣದೊಳೆಣ್ಣೆ ॥ ಕೀವಿನೊಳಗೊಳ್ಗಂಪುನೀಲ। ಗ್ರಾವದೊಳು ಮೃದುಲತ್ವಮುಂ ಬಹು । ಜೀವಘಾತಕರೊಳ್ವಿಚಾರ ದಯಾಗುಣಗಳೊಳವೇ? ॥ ೫೦ ॥

ಕಲ್ಲುಪವಿಗಳು ಕರಗುವಂತಹ । ಸಲ್ಲಲಿತಶರಣಾಗ್ರಗಣ್ಯನ । ಸೊಲ್ಲಿಗಿನಿಸುಂ ಕರಗದಿಹ ಕುರುಬನ ಮನಸ್ಸಿನೊಳು ॥ ಕಲ್ಲುಪವಿಗಳಿಗಿಂದ ಪೆರ್ಚಾ । ದೆಲ್ಲಕಾಠಿಣ್ಯವನಿರಿಸಿ ಜಗ। ದಲ್ಲಿ ವಿಧಿಯೆಂದೆನಿಸಿದಜನೇಂ ಕ್ರೂರನೋ ನೋಡೆ ॥ ೫೧ ॥

ನಾಡಗೌಡಂ ಕಠಿಣನಲ್ಲಂ। ನಾಡೆ ಗುಣಯುತನಿರ್ದನಾದೊಡೆ। ಮಾಡಬೇಕೇಂ ಮಹಿಷಬಲಿಯಂ ಕೊಡಲೆಬೇಕೆಂದು ॥ ಕೂಡಿ ಕೆಲರಾಗ್ರಹದೊಳವನಂ। ಬೇಡಿಕೊಂಡರವರ್ಗೆ ಪಡಿನುಡಿ । ಯಾಡಲಾರದೆ ಶರಣನನು ಸಂತೈಸದಾತ್ಮದೊಳು ॥ ೫೨ ॥

ಶರಣವಚನಂ ಸಹಜಮಿಹುದೆಂ । ದರಿದೊಡುಂ ಬಹುಮತವ ಮೀರದೆ। ಪುರದೊಳಳಿವರನೀಕ್ಷಿಸುವ ಕಷ್ಟವನು ಸೈರಿಸದೆ ॥ ದೊರೆದ ಕಷ್ಟದೊಳೊಂದನುಂ ನಿ । ರ್ಧರಿಸಲಸದಳಮಾಗಿ ಸುಮ್ಮನೆ । ತೆರಳ್ದನವನಾ ಜನರೊಡನೆ ಸಂದೇಹಕೆಡೆಗೊಟ್ಟು ॥ ೫೩ ॥

ಹಿತವಿದಹಿತಮಿದೆಂದು ವಿವರಿಪ । ಮತಿಯುತಂ ನ್ಯಾಯಮೆನೆ ಸತ್ಸ । ಮ್ಮತಿಯೊಳಾಗಳುಪಾಯದಿಂ ತೀರ್ಪಂ ಕೊಡುವ ದೊರೆಯು ॥ ನುತಶರಣನನುಮತಿಯ ಮೇರೆಗೆ । ಶ್ರಿತರನೊಪ್ಪಿಸಿ ತತ್ಪಶುವಧಾ । ಕೃತಿಯನತ್ತಂ ತಳ್ಳಿದಿರ್ದುದು ಕಾಲವೈಚಿತ್ರ್ಯಂ ॥ ೫೪ ॥

ಎಲ್ಲರಾಕ್ಷಣವೇಳ್ದು ಪೋಗಲು । ಸೊಲ್ಲುವದದೇನಾರ್ಗೆ ಮಾನಸ । ದಲ್ಲಿ ಮಲಮಲಮರುಗಿ ಕಡುಬಿಸುಸುಯ್ಯುತಳವಾರಿ ॥ ನಿಲ್ಲದತ್ಯಾಯಾಸದಿಂದಂ । ಮೆಲ್ಲನೇಳ್ತಂದಂ ನಿಜಾಲಯ । ಕಳ್ಳೆದೆಯ ಶರಣಾಗ್ರಗಣ್ಯಂ ಪುರದ ಜನರಿತ್ತ ॥ ೫೫ ॥

ಕರಿಸಿದರು ರಾಣಿಗನನೊಲವಿಂ । ಧರಿಸಿದರು ಬಂಡಾರವಾತಗೆ । ತರಿಸಿದರು ಮರಬುಟ್ಟಿಪತ್ತುಲಶೀರೆಬಳೆಗಳನು ॥ ತೊರಸಿದರೊರಳ್ಕಲ್ಗಳಂ ಬಲು । ಮೊರಸಿದರು ಡೊಳ್ಳುಗಳನಾಪ್ತರ । ನೆರಿಸಿದರು ರಕ್ಕಸರ ಮದುವೆಯ ಬಳಗದಂದದಲಿ ॥ ೫೬ ॥

ಊರ ದೇವಿಯ ಕೋಣನಂ ಪೊಳೆ । ಗೇರಿಯೊಳು ಸೆರೆಗಟ್ಟಿ ಸುಣ್ಣದ । ನೀರಕುಡಿಸುತ ಕರುಣವುಳಿದುಪವಾಸವಿರಿಸಿದರು ॥ ಘೋರದೇವಿಯ ಮೂರ್ತಿಯನಲಂ । ಕಾರಪೂರ್ವಕಮಾಗಿ ಪುರದೊಳು । ಮೀರದೆ ಚಳೇವಾಡಲಿಕೆ ಪೊರಮಡಿಸತೊಡಗಿದರು ॥ ೫೭ ॥

ಒರೆದ ಮಾತಂ ಮೀರ್ದರೆಂಬಾ । ದುರಭಿಮಾನದೆ ಸಿಲುಕದಿರ್ದೀ । ಪರಮಶರಣಂ ಪ್ರಾಣಿಹಿಂಸಾಕಾರ್ಯಕುಮ್ಮಳಿಸಿ ॥ ಮರುಗುತಂದು ಶಿವಾರ್ಚನೆಯನಾ । ಚರಿಸಿ ಮರುದಿನವೆಂದಿನಂದದೆ । ತೆರಳ್ದನಾ ಸಿದ್ಧಾಪುರಕ್ಕಂ ಭಿಕ್ಷೆಗೆಂದಲ್ಲಿ ॥ ೫೮ ॥

---

೧ ಈ ಶಬ್ದವು ಗ್ರಾಮ್ಯವಿದ್ದರೂ ಪ್ರಸಿದ್ಧವಿರುವದರಿಂದ ಸೌಲಭ್ಯಕ್ಕಾಗಿ ಪ್ರಯೋಗಿಸಿದೆ.

ಮಾರಿ ತಮ್ಮಯ ಗ್ರಾಮದೊಳು ಪುಗ । ಬಾರದೆಂದಾಪೂರಭಾವಿಕ । ರೂರಗುಸೆಗುರೆ ಬೇಲಿಯಂ ಬಡಿದಿರ್ದರದನರಿದು ॥ ಮೀರಿದಪಶಕುನಮಿದೆ ನುತ್ತಂ । ಮಾರಹರಶರಣಾಗ್ರಗಣ್ಯಂ । ದೂರದೊಳು ತಾಂ ನಿಂದು ಮನದೊಳು ವಿಸ್ಮಯಂದಾಳ್ದ ॥ ೫೯ ॥

ವೀರಶೈವರು ತಮ್ಮ ಧರ್ಮದ । ದಾರಿದಪ್ಪುತೆ ರೋಗಭಯದಿಂ । ಮಾರಿಮಸಣಿಯ ಶಾಂತಿಗೆಂದಿಕ್ಕುವರು ಪಶುಗಳನು ॥ ಊರಹೆಬ್ಬಾಗಿಲಿಗೆ ಬೇಲಿಯ । ನೂರುವರು ಮೌಢ್ಯದೊಳಿವರೊಳೀ । ಕೋರುಧಾನ್ಯದ ಭಿಕ್ಷೆ ಗೈವುದು ತಪ್ಪೆನುತ ಮರುಳ್ದ ॥ ೬೦ ॥

ತನ್ನಯನಿವಾಸಕ್ಕೆ ಪೋಗದೆ । ಸನ್ನುತಬೃಹನ್ಮಠಕೆ ಬಂದ । ತ್ಯುನ್ನತ ಶ್ರೀಕುಲಗುರೂತ್ತಮಕರ್ತೃವೇದಿಕೆಯ ॥ ಸನ್ನಿಧಾನದೆ ನಿಂದು ಗುಣಸಂ । ಪನ್ನನೆನಿಸಿದೀ ಶರಣನಾ । ಸನ್ನಗೌರವವಿನಯಮುದ್ರಾಕಲಿತಮುಖನಾಗಿ ॥ ೬೧ ॥

ಅಪ್ಪಕೊಟ್ಟಿರ್ದಂ ಪೊಡರ್ಪಿಂ । ದಪ್ಪತಕ್ಕೊಂಡಂ ವಿಚಾರಿಸ । ಲಪ್ಪನ ದು ಬೊಪ್ಪನಿಗೆ ಕೊಡಲಿಕ್ಕಡ್ಡಿಯೇನುಂಟು ॥ ತಪ್ಪಿದಾಗದೆನುತ್ತ ಕರಗಳೊ । ಳಿಪ್ಪ ಜೋಳಿಗೆ ಬೆತ್ತಗಳನಂ । ದೊಪ್ಪಿ ಭರದಿಂ ಮಡುಗಿದಂ ತದ್ವೇದಿಕಾಗ್ರ ದೊಳು ॥ ೬೨ ॥

ಬಳಿಕಲಾ ಗುರುವಿನವಿತರ್ದಿಯ । ಬಳಿಯೊಳಗೆ ಬೈಲಿನೊಳು ನೆಲ ದೊಳು । ಚೆಲುವವೀರೇಶ್ವರನು ವೀರಾಸನದಿನಾತಪಕೆ ॥ ಅಳುಕದತ್ಯಾನಂದ ದಿಂದಂ । ಕುಳಿತು ಗಂಭೀರೋಕ್ತಿಯಿಂದಂ । ಪಲವು ಕಾಲಜ್ಞಾನಸೂಚನೆ ಗೈದನೆಂತದೆನೆ ॥ ೬೩ ॥

ಕೇಳಿರೈ[೧] ನೀವ್ಧರ್ಮರಾಜನ[೨] । ಆಳಿಕೆಯು ಬಂದಿರ್ಪುದಿದರೊಳು । ಮೇಲೆ ಮಕ್ಕಾದುಮ್ಮರು ಛಡೇದಾರರೈತಹರು । ಕೇಳಿರೋವರಸಿಯರು[೩] ಬರು ವರು । ಶೀಲರೆನಿಸಿದ ಕಾರಕೂನರು[೪] । ಲೋಲದಿಂದಂ ಚೋಪದಾರರು[೫] ಬರುತ ಲಿರ್ದಪರು ॥ ೬೪ ॥

---

೧, ೨, ೩, ೪, ೫ ಈ ಶಬ್ದಗಳು ಅನ್ಯದೇಶ್ಯವಿದ್ದರೂ ಶರಣರ ಪ್ರಸಾದವಾಣಿಯಲ್ಲಿ ಬಂದದ್ದರಿಂದ ಪ್ರಯೋಗಿಸಿದೆ.

ಕುಳಿತೆಡೆಯೊಳೋದನವನೀವವ । ರಲಸದಲೆನಿಂದಲ್ಲೆ ನೀರಂ । ಸಲೆ ಕುಡಿಸುವವರೈತಹರು ಬಸುರಿರ್ದ ಪೆಂಗಳಿಗೆ । ತಿಳಿವುತಿಮ್ಮಡಿಯಾಗೆ ಸಂಬಳ । ವೆಳೆಯರಿಗೆ ಪಾಲ್ಬೆಣ್ಣೆಗಳನಿ । ನ್ನೊಲೆದು ವಸನಂಗಳನು ಕೊಡುವವರೈತರುವರಿನ್ನು ॥ ೬೫ ॥

ಒಂದು ನಾಲಿಗೆಯುಳ್ಳೊಡಿವ*ರೊಳು । ಬಂದುಮಾತಾಡಿರಿ ವಿಚಾರಿಸಿ । ಬಂದವರು ಬಂದಲ್ಲಿಯೇ ಹೋದವರು ಹೋದಲ್ಲೆ ॥ ಅಂದಿಗೊಬ್ಬರಮುಖವನೊಬ್ಬರು । ಚಂದದಿಂದಂ ಕಾಣದಾಗುವಿ । ರಿಂದು ನಿಮ್ಮಾಪ್ತೇಪ್ಸರಂ ನೋಡಿರಿ ಕರಿಸಿಕೊಂಡು ॥ ೬೬ ॥

ನಾಲಿಗೆಯು ನಿಜವೋ ನಿಮಿರ್ಚಿ । ದೋರ್ಗಲೆ ನಿಜವೋ ಮಾನವನಿಗೀ । ನಾಲಿಗೆಯು ನಿಜವಿರ್ದಡೋಲೆಯನೇಕೆಮಾಡಿದರು ॥ ಓಲೆ ನಿಜವಿರಲಭವನಿತ್ತೀ । ನಾಲಿಗೆಯದೇನಾಯ್ತು ನೋಡಲು । ನಾಳಿನದುಮಲ್ಲಿಂದಿನದುಮಲ್ಲಾಗಳಿಂತಯ್ಯ ॥ ೬೭ ॥

ಇಂತು ಭವಿತವ್ಯವನುಹಾಡುತ । ನಂತಲೀಲೆಯನೆಸಗುತಿರ್ಪೀ । ಕಂತುಹರಶರಣನನು ನಿರುಕಿಸಲೆಂದು ಪುರಜನರು ॥ ಸಂತಸದೊಳೈತಂದು ತೆರವಿರ । ದಂತೆ ತುಂಬಿದರಾಕ್ಷಣದೊಳಾ । ಶಾಂತಗುರುವಿನ ಮಠದಬೈಲೊಳು ಕೌತುಕಮಿದೆನಿಸಿ ॥ ೬೮ ॥

ಅಂದು ತನ್ಮಠದಲ್ಲಿ ಭಕ್ತರು । ಕುಂದದೆ ಗಣಾರಾಧನೆಯನೊ । ಳ್ಪಿಂದ ಸಂಗಪ್ಪಾಖ್ಯದೇಸಾಯಿಯನುಮತಿಯಂತೆ ॥ ಚೆಂದಮೆನೆ ನಡಿಸಿರ್ದರೊಳಗಿಂ । ಬಂದರೆಸಗುವ ಮಂದಿ ಶರಣನ । ಮಂದಲೀಲೆಯನೀಕ್ಷಿಸಲ್ತತ್ಕಾರ್ಯಮಂ ಬಿಟ್ಟು ॥ ೬೯ ॥

ಶರಣವರ್ಯನ ವೀರವೃತ್ತಿಗೆ । ಬೆರಗುವಡೆದಾ ಜನರು ನಿರುಕಿಸಿ । ವರಗಣಾರಾಧನೆಯಕಾರ್ಯಮಿದಿವನ ಗೊಂದಲದೆ ॥ ಜರಗುವದದೆಂತೆಂದು ತಮ್ಮೊಳು । ನೆರೆದು ಮಾತಾಡಿದರರದನುತಾ । ನರಿದು ತದ್ಭಕ್ತರ್ಕಳಂ ಕೂರ್ತಾಗ್ರಹಂಬೆತ್ತು ॥ ೭೦ ॥

---

* ತನ್ನಲ್ಲಿ.

ಸಾಗುವದು ತಾಂ ಸಾಗಲಪ್ಪಾ । ಸಾಗುವದು ನೆರೆಸಾಗಲಿರೆಪ್ಪಾ[೧] । ಸಾಗಿಸುವದಂ ನಿಲ್ಲಿಸಲುಬಾರದು ತಿಳಿಯಿರಪ್ಪಾ ॥ ಸಾಗಬೇಕ್ರೆಪ[೧] ಎಂದು ಶರಣಂ । ಬೇಗನಪ್ಪಣೆಗೊಡಲು ಭಕ್ತರು । ಸಾಗಿಸಿದರೊಡನಾ ಗಣಾರಾಧನೆಯಕಾರ್ಯವನು ॥ ೭೧ ॥

ಗಡದಸಂಗನಬಸವನಾಮಂ । ಕೆಡುವನೆಂದೀ ವೀರಶರಣಂ । ನುಡಿದನೊಮ್ಮಿಂದೊಮ್ಮೆಗಿದನಾ ಭಕ್ತನಾಲಿಸುತೆ ॥ ಒಡನೆ ನಿಜಗೃಹಕ್ಕೈದಿ ನೋಡಲು । ಕಡುಜಡಾಮಯವಡಸಿ ಪುತ್ರಂ । ಮಡಿವನೆಂದಳುತಿರ್ದರೆಲ್ಲರು ಮುತ್ತಿ ದುಃಖದಲಿ ॥ ೭೨ ॥

ಭೋರನೇ ಶೋಕಿಸುತವಂ ಹೌ । ಹಾರಿ ಶಂಭೋ ಮಗನುಳಿಯಲಾ । ನಾರ ಮೊರೆವುಗಲೆಂದು ಯೋಚಿಸಿ ಶರಣನಿದ್ದೆಡೆಗೆ ॥ ಮೀರದಣುಗನನೆತ್ತಿ ತಂದೀ । ಮಾರಿಕಾಮಯದಿಂದವಿೂ ಸುಕು । ಮಾರನಂ ಪೊರೆಯೆಂದುರುಳಿಸಿದನೀತನೆದುರಿನೊಳು ॥ ೭೩ ॥

ಪ್ರಮಥರಿವನಂ ಪೊರೆವರೆಂದೀ । ಪ್ರಮಥಸಂಕುಲಪಾದಜಲಜ । ಭ್ರಮರನಾಶೀರ್ವದಿಸಲಾಕ್ಷಣದೊಳ್ವಿಕಾರಗಳು ॥ ಶಮನವಾಗಲು ನೋಡಿ ಪಿತೃಗಳು । ಸಮನಿಸಿದ ಸಂಭ್ರಮದೊಳೀತಗೆ । ನಮಿಸಿ ಪುತ್ರಸಮೇತಮೈತಂದರು ನಿಜಾಲಯಕೆ ॥ ೭೪ ॥

ಇದನರಿದು ಪುರದೊಳಗೆ ತದ್ರೋ । ಗದಿನಳಿಯಲಾಗಿರ್ಪರಂ ತಳು । ವದೆ ಶರಣನೆದುರಿನೊಳಗುರುಳಾಡಿಸಲು ತತ್ಕ್ಷಣದೆ ॥ ಬದುಕಿ ತನುವಿಕಲತೆಯನಾನದೆ । ಮೊದಲಿಗಿಂದವರೆಲ್ಲರುಂ ಬಲ । ಮೊದಗಿ ಚೆನ್ನಾದರ್ಪ್ರಸಿದ್ಧಮಿದಾಗೆ ತತ್ಪುರದೆ ॥ ೭೫ ॥

ಕೆಲವು ಪೊಳ್ತಿನಮೇಲೆ ಶರಣಂ । ಕುಳಿತ ತಾವಂ ಬಿಟ್ಟು ತಾಂ ಜೋ । ಗುಳಪದಗಳಂ ಪಾಡುತಾ ಭವಿತವ್ಯಮಂ ಬಿಡದೆ । ಉಲಿವುತೂರೊಳಗೆಲ್ಲವೋಣಿಗ । ಳೊಳಗೆ ಚರಿಸುತ್ತೂರಹೆಬ್ಬಾ । ಗಿಲಿನಕಟ್ಟೆಯಮೇಲೆ ಕುಳಿತಂ ಜನರು ಸಂದಣಿಸೆ ॥ ೭೬ ॥

---

[೧]–೩ ಶರಣರು ಉಚ್ಚರಿಸಿದ ವಾಕ್ಯಗಳು.

ತರಿಸಿದಂ ಮಂಡರಳುಗಳನೆ । ಲ್ಲರಿಗೆ ಹಂಚಿದನುಳಿದ ಬೇನಿಗ । ರೊರಲುವಿಕೆಯಂ ಕೇಳ್ದು ಕರುಣಾರಸಕಟಾಕ್ಷದೊಳು ॥ ನಿರುಕಿಸಿ ಪೊಡರ್ಪಿಂದವರನು । ದ್ಧರಿಸುತುರುತರಲೀಲೆಯಂ ಬಿ । ತ್ತರಿಸಿದಂ ನರರಂ ಪೊರೆಯಲಿಳೆಗಿಳಿದಭವನಂತೆ ॥ ೭೭ ॥

ಶರಣನ ಮಹಾಮಹಿಮೆಯಿಂದೀ । ತೆರದೊಳೂರೊಳು ಶಾಂತಿಯಾಯ್ತೆಂ । ದರಿಯದೀ ಜಾತ್ರೆಯನೆಸಗುವೆಮ್ಮಯ ಸುನಿಷ್ಠೆಯಸು ॥ ನೆರೆ ತಿಳಿದು ಮಾದೇವಿ ಮೊದಲೇ । ಕರುಣಮಂ ತೋರಿದಳೆನುತ್ತಾ । ಪುರದ ಕೆಲ ಪಾಮರರು ನಂಬಿದರೇನಿದನುಚಿತವೋ ॥ ೭೮ ॥

ಒಸೆದುಸೃಷ್ಟಿಸ್ಥಿತಿಲಯಂಗಳ । ನೆಸಪ ವಿಧಿಹರಿರುದ್ರರನು ಲೆ । ಕ್ಕಿಸದೆ ಜಗದಧಿಕಾರಮಂ ಕಣ್ಸನ್ನೆಯಿಂ ಮಾಳ್ಪ ॥ ಅಸಮಸಾಮರ್ಥ್ಯಂ ಶರಣನೊಳ । ಗೆಸೆವುದಂ ಪಶುವರ್ತನದ ಮಾ । ನಿಸರದೇಂ ಬಲ್ಲರು ನಿಷಿದ್ಧಪ್ರಕ್ರಿಯಾನ್ವಿತರು ॥ ೭೯ ॥

ಊರಿಗಡಸಿದ ಘೋರರೋಗನಿ । ವಾರಣಾರ್ಥಂ ಮಾಳ್ಪ ಪಶುಸಂ । ಹಾರಕಾರ್ಯವ ಬಿಡಿಸಲೆಂಬೀ ಶರಣಪುಂಗವನ ॥ ಸಾರಸಂಕಲ್ಪಂ ತದಾಮಯ । ದೂರಮೆನೆ ಮಾಡಿರ್ದುಮವರೀ । ಚಾರುದೇವಿಯೆ ಕರುಣಿಸಿದಳೆಂದೂಹಿಸಿದರರರೇ ॥ ೮೦ ॥

ಇಡಿದ ಹೆಗ್ಗಳ್ತಲೆಯನೋಡಿಸಿ । ದುಡುಪತಿಯ ಬಲ್ವೆಳ್ವೆಳಗಿನಾ । ಸಡಗರವ ಲೆಕ್ಕಿಸದೆ ಪೃಷ್ಠದೊಳಿನಿಸು ಮಿನುಗುಳ್ಳ ॥ ಕಿಡಿಯಪುಳುವಿಂದಂಧಕಾರಮಿ । ದಡಗಿತೆಂದೊರೆವಂತೆ ದೇವಿಯ । ಕಡುಕರುಣದಿಂ ರೋಗಮಡಗಿದುದೆಂಬ ಮಾತಾಯ್ತು ॥ ೮೧ ॥

ಪಿರಿಯದೇವತೆಯಂತವಳು ಹೆ । ಗ್ಗುರಿಯ ತಿಂಬುವಳಂತೆ ಕೋಣಂ । ಗರಸಿಯಂತೀ ರೋಗದಿಂದಂ ಮನುಜರಂ ಕಾಡಿ ॥ ನಿರುತಮಗಿಸುವಳಂತೆ ಕೋಣನ । ತರಿಯದಿರ್ದೂರವರನೆಲ್ಲರ । ನಿರದೆ ನುಂಗುವಳಂತೆ ತರಿದೊಡೆ ನುಂಗದಿಹಳಂತೆ ॥ ೮೨ ॥

ಇಂತುವರ್ತನಮಿವಳೊಳುಳ್ಳೊಡ । ದೆಂತು ದೇವತೆಯೆನಿಪಳಿವಳ । ತ್ಯಂತತಾಮಸಿ ದುಷ್ಪಿಶಾಚಿ ಕಠೋರರಾಕ್ಷಸಿಯು ॥ ಶಾಂತಿಗೀಂತಿಗಳೇತಕ ವಳಂ । ನಿಂತು ನೀರಂ ಕುಡಿಯುಗೊಡದಂ । ತಂತರಿಸದೊದ್ದೂರ ಬಿಡಿಸುವ ದೆಂದರರಿದವರು ॥ ೮೩ ॥

ಕಾಡಿ ಬೇಡುವ ಕ್ರೂರದೇವರು । ಕೂಡಿ ನೆಲೆಗೊಂಡಿರ್ದೊಡೂರೊಳು ; ಕಾಡುತನಮಡಸುವದು ಸದ್ವಿಧಿಯಡಗುತಿಹುದಲ್ಲಿ ॥ ಮಾಡಬೇಕು ವಿಚಾರ ಮಂ ನೆರೆ । ನೋಡಬೇಕು ಸ್ವಧರ್ಮಶಾಸ್ತ್ರವ । ನಾಡೆ ಸದ್ವಿಧಿಗೊಪ್ಪದಿಹ ದೇವರನು ಬಿಡಬೇಕು ॥ ೮೪ ॥

ದೇವರೇಂ ಮಾಡಿದಪವೂರೊಳು । ಭಾವಿಕರು ಸುವಿಚಾರವಿಲ್ಲದೆ । ತಾವೆ ಮನಸಿಗೆ ಬಂದ ತೆರದಿಂ ಕಲ್ಪನವ ಮಾಡಿ ॥ ಸೇವಿಸುವರು ನಿಷಿದ್ಧ ರೀತಿಯೊ । ಳಾ ವಿಕೃತವರ್ತನವೆ ಮುಂದೆ ಸು । ಧೀವಿಹೀನವ್ರಜಕೆ ವೃದ್ಧಾ ಚಾರವೆನಿಸುವದು ॥ ೮೫ ॥

ಆವ ನಾಮದೊಳಾವ ರೂಪದೊ । ಳಾವ ಸ್ಥಲದೊಳು ಶೋಭಿಸಲಿ ಘನ । ಪಾವನಾಸಮುಗುಣಗಳಿಂ ಸಲ್ಲಕ್ಷಣಗಳಿಂದ ॥ ಸೇವಕರನನ್ಯಾನು ರಾಗವ । ನಾವಗಂ ಕೈಕೊಂಡು ಮುಕ್ತಿಯ । ನೀವ ವಸ್ತುವೆ ದೇವರಿನ್ನುಳಿದ ವರು ಕ್ಷುಲ್ಲಕರು ॥ ೮೬ ॥

ಭೂವಲಯದೊಳು ಕ್ಷುದ್ರಫಲಗಳ । ನೀವ ನಾನಾಕ್ಷುದ್ರದೇವರು । ಸಾವಿರಾರುಂಟವರನೆಂದುಂ ಕನಸಿನೊಳು ಸಹಿತ ॥ ದೇವರೆಂದಾಂ ಭಾವಿಸೆನು ಮೇ । ಣೀವ ತತ್ಫಲಗಳನೆಳಸೆನೆಂ । ದಾ ವಿಚಕ್ಷಣಶಂಕರಾಚಾರ್ಯರ ವಚನ ಮಿಹುದು ॥ ೮೭ ॥

ಚೆಲುವ ಮಾವಿನಹಣ್ಣನುಳಿದ । ಗ್ಗಳಿಕೆಯಿಂ ಭಲ್ಲಾತಕೀಫಲ । ಗಳ ನಗಿದು ಬಾಯ್ಗೆಡಿಸಿಕೊಂಡಂತಭವನಂ ಬಿಟ್ಟು ॥ ಹಲವು ಕೀಳ್ದೇವರನು ಸೇವಿಸಿ । ಮಲಿನ ಮಾನಸರಾಗಿ ಮೂಢರು । ಕಳೆದುಕೊಂಬರ್ವ್ಯರ್ಥರ್ಥಮಿಾ ಮಾನುಷ್ಯಜನ್ಮವನು ॥ ೮೮ ॥

ಸರ್ವದೇವರದೇವನೆನಿಸಿದ । ಶರ್ವನಂ ಮರೆವುಗದೆ ಶರಣನ । ಪೂರ್ವ ಮಹಿಮೆಯನಿನಿಸುಲೆಕ್ಕಿಸದಧಮರೊಡಗೂಡಿ ॥ ಗರ್ವದಿಂದಾ ಕೆಲವು ಪಿರಿಯರು । ದುರ್ವಿಚಾರಕುಕಲ್ಪನೋನ್ನತ । ಪರ್ವತಾಗ್ರವನೇರ್ದು ಹಿಂಸಾಕಾರ್ಯಕೆದೆಗೊಟ್ಟು । ೮೯ ॥

ನಿಂದುದಕ್ಕಾವೂರಸಜ್ಜನ । ರಂದು ಖೇದಂಬಟ್ಟು ಪ್ರಮುಖರ । ಮಂದಿರಂಗಳಿಗೈದಿ ಕೋಣನಕೊಂದು ಗ್ರಾಮಕ್ಕೆ ॥ ಕುಂದನೇತಕೆ ತರುವಿರೈ ನೀ । ವಿಂದು ರೋಗಿಗಳೆಲ್ಲಬದುಕಿಹ । ರೆಂದೊರೆಯುಲವರೊಪ್ಪದಿವರಂ ತೆಗಳ್ದರುರಿದಿತ್ತ ॥ ೯೦ ॥

ಶರಣನಗುಸೆಯಕಟ್ಟೆಯಿಂದೇ । ಳ್ದಿರದೆ ತುರುಮಂದಿಯೊಳು ನಿಂದೊ । ತ್ತರದೆ ನಿಡುಸರದಿಂದ ಸಕಲಪ್ರಮುಖರಂ ಕೂರ್ತು ॥ ಕುರಿಗಳಿಗೆ ಕೋಣಂಗೆ ಮಾಡಿರಿ । ಕರುಣದಿಂದಂ ಪ್ರಾಣದಾನವ । ವರಸುಕೃತಮೊದಗುವದು ನಿಮಗೆ ನಿರಾಕರಿಸಬೇಡಿ ॥ ೯೧ ॥

ಭಕ್ತವೃತ್ತಿಯಿದಲ್ಲ ಜನರೇ । ಭಕ್ತರಿದಕೊಡಬಡರು ಘನರೇ । ಭಕ್ತರಿದನೆಂದೆಂದಿಗುಂ ಸೈರಿಸರು ಮತಿಯುತರೆ ॥ ಭಕ್ತಕುಲದೊಳು ಪುಟ್ಟಿ ಶಂಕರ । ಭಕ್ತರಾವೆಂದೊರೆವ ನಿಮಗಿದು । ಯುಕ್ತವೇ ತಾಂ ಬಿಡಿ ಬಿಡಿ ಮಹಾಶಯರೆ ನಯಮಯರೇ ॥ ೯೨ ॥

ಹತ್ತುಜನರೊಳು ಬೀಳ್ದಹಾವಂ । ಮುತ್ತಿಕೊಲ್ಲರೆನಿಪ್ಪ ನಾಣ್ನುಡಿ । ಯೆತ್ತಲುಂ ಪರ್ಚಿರ್ದುವೀ ಕುರಿಕೋಣಗಳನೆಲ್ಲ ॥ ಹತ್ತುಮಂದಿಯೊಳೆಂತು ಕೊಲ್ವಿರಿ । ಚಿತ್ತವಿಡಿರೀ ವಚನದೊಳು ನೀ । ವುತ್ತಮಯಶೋಲಾಭಮಂ ಪೊಂದುವಿರಿ ಮೆರೆಯುವಿರಿ ॥ ೯೩ ॥

ಸಾವಿಗಂಜಿದ ಕುರಿಯನುಳಿಸಲು । ಸಾವಿರಕೆ ಸರಿಮಾಡಿ ಪೊಂಗಳ । ನಾ ವಿಶಾಲದಯಾಳುವೆನಿಸಿದ ಕಿನ್ನರಂ ಕೊಟ್ಟು ॥ ಆ ವಿಟನ ಕೊಂದರಸನೆದುರೊಳು । ದೇವರಿಂ ಸಾಕ್ಷಿಯನು ಪೇಳಿಸಿ । ಜೀವಮಂ ತದ್ವಿಟನಿಗಿತ್ತುದನಾಲಿಸದರಾರು ॥ ೯೪ ॥

ಪರಹಿತಕ್ಕಾಗಿಯೆ ಸತಂ ಸ । ತ್ಪುರುಷರಿನಿಸಳುಕದಲೆ ತಮ್ಮಯ । ಪರಣಮಂ ಕೊಡುತಿರ್ಪರಲ್ಲದೆ ತಮ್ಮ ಹಿತಕಾಗಿ ॥ ಪರರ ಪರಣವನಪಹರಿಸ ರಿತ । ರರಿಗೊದಗಿದತಿಕಷ್ಟಮಂ ಸಹಿ । ಸರು ನಿಜಾಪದ್ದುಃಖಗಳನುರೆ ಸೈರಿಪರು ಕೇಳಿ ॥ ೯೫ ॥

ನರರಿಗೊದಗಿದ ರುಜೆಮರಣಗಳು । ಕುರಿಗಳಂ ಕೋಣಂಗಳಂ ಸಂ । ಹರಿಸಿದೊಡೆ ತೊಲಗುವವೆನಿಪ್ಪೀ ಮಾತಸಂಭವವು ॥ ಹರನು ಕೊಟ್ಟಿಹ ಬುದ್ಧಿನೇತ್ರವ । ತೆರೆಯದೇತಕೆ ಹಟವನಾಂತಿರಿ । ದುರಭಿಮಾನಪಿಶಾಚಿಯಂ ದೂಡಿರಿ ಬಲಾತ್ಕರಿಸಿ ॥ ೯೬ ॥

ನೇಣುಗಳಿನುರೆಬಿಗಿದು ದಂಡಕ್ಕೃ । ಪಾಣಪರಶುವ್ರಜವನೆತ್ತಿದ । ಪಾಣಿಯಿಂದಾರುತ್ತ ಪಾರುತ ಮುತ್ತುವದ ನೋಡಿ ॥ ಪ್ರಾಣಕಗಿದೆದೆಯೊಡೆ ದೊದರುತಿಹ । ಕೋಣನಾಗೋಣಂ ಕಡಿವುದಂ । ಮಾಣದೊದ್ದಾಡುವದ ನೆಂತೀಕ್ಷಿಸುವಿರೋ ನೀವು ॥ ೯೭ ॥

ಮಹಿಷಬಲಿಗಿಂ ಮನುಜಬಲಿಯದು । ವಿಹಿತಮಿರ್ದೊಡೆ ಶಂಕಿಸದೆ ತ । ನ್ಮಹಿಷನಂ ಬಿಟ್ಟವರನಾ ದೇವತೆಯುಸಮ್ಮುಖದೆ ॥ ಬಹುವಿಜೃಂಭಣೆ ಯಿಂದ ವಧಿಯಿಸಿ । ವಹಿಸಿದಾ ಪರಕೆಯನುತೀರ್ಚಿರಿ । ಸಹನವಿವರ್ಗಿಹು ದೇಕೆ ತವಿಪಿರಿ ಮೂಕಜೀವರನು ॥ ೯೮ ॥

ವೀರವೃತ್ತಿಯೊಳಿಂತು ಶರಣಂ । ಕಾರುಗತ್ತಲೊಳರ್ಧರಾತ್ರಿಯು । ಮೀರುವನ್ನಂ ಪ್ರಮಥವಚನಂಗಳನು ನೀತಿಯನು ॥ ಸೂರೆಮಾಡುತೆ ಪರವಶ ತೆಯಿಂ । ಮೀರದಸುಗೊಡಲೆಂದು ನಿಂದಂ । ಭೂರಿಶಿವತೇಜಃಪ್ರಭಾವಂ ಮೇರೆವರಿದೆಸೆಯೆ ॥ ೯೯ ॥

ಶರಣುಬಂದ ಕಪೋತಕಾಗಿಯೆ । ಕರುಣದಿಂ ನಿಜಕಾಯಮಾಂಸವ ಕೊರೆದುಕೊಟ್ಟು ಜಸಂಬಡೆದ ಶಿಬಿಯೆಂಬನೃಪಗಿಂದ ॥ ಶರಣುವೊಗದ ಲುಲಾಯಕಾಗಿಯೆ । ಹರಣಮಂ ಕೊಡಲೊಪ್ಪಿದೀಶ್ವರ । ಶರಣವರ್ಯ್ಯಂ ಶತ ಗುಣಾಧಿಕನಲ್ಲವೇ ಜಗದೆ ॥ ೧೦೦ ॥

---

೧ ನನ್ನನ್ನು. ೨ ನನಗೆ. (ಹಿಂದೆ ಸಾಂಕೇತಿಕ ಶಬ್ದಸೂಚನೆಯನ್ನು ನೋಡಿರಿ.)

ಪರಮಧರ್ಮಗರಿಷ್ಠನಾದೀ । ಶರಣನಾ ಪಶುವಧೆಗೆ ಸಹಿಸದೆ । ಪರಣ ಮಂ ಕಳಕೊಳ್ಳಲಹುದೀ ವೀರವೃತ್ತಿಯೊಳು ॥ ಬರಿಸಮಾಧಾನೋಕ್ತಿಯಂ ಪೇ । ಳ್ವರನು ಸೈರಿಪನಲ್ಲವೆಸಗುವ । ಪರಿಯದೇನೆಂದಗಿದು ಯೋಚಿಸಿದ ರ್ಕೆಲರ್ಮರುಗಿ ॥ ೧೧೧ ॥

ಮುನ್ನಮೂಬರಿಸಂಗಳಿಂದಂ । ಸೊನ್ನಲಿಗೆಯೊಳು ಶಿಕ್ಷಕೋದ್ಯೋ । ಗೋನ್ನತಿಯೊಳಿರುತಿರ್ದ ಪ್ರಭುನಾಮಂ ಶರಣನನುಜಂ ॥ ತನ್ನ ಬಳಗವ ನೋಡಲೆಂದೀ । ಸನ್ನುತನ ಮನೆಗಂದು ಬಂದಿ । ರ್ದಂ ನಿಜಾಗ್ರಜತಾಪವಿದ ನೀಕ್ಷಿಸಿ ಮನಂಕದಡಿ ॥ ೧೧೨ ॥

ಅಣ್ಣ ಕೇಳೈ ನಿನ್ನ ಯತ್ನವು । ಮಣ್ಣುಗೂಡುವದಿಲ್ಲಿ ಪ್ರಮುಖರು । ಹಣ್ಣಿಕೊಂಡಾ ಪಶುವಧಾಕಾರ್ಯವನು ಕೈಬಿಡರು ॥ ಕಣ್ಣು ಕಾಣದೆ ಬೇರೆ ಗ್ರಾಮದೆ । ತಣ್ಣಗಿರುವದು ಲೇಸು ಸುಮ್ಮನೆ । ಬಣ್ಣಗೆಡುವದದೇಕೆ ಸೈರಿಸು ಬಾ ಮನೆಗೆ ನೀನು ॥ ೧೧೩ ॥

ಎಲ್ಲಿ ಭೂತದಯಾಗುಣಿಗಳಿಹ । ರೆಲ್ಲಿ ವಿಮಲವಿಚಾರಪರರಿಹ । ರೆಲ್ಲಿ ವಿಹಿತೋದ್ಯೋಗಶೀಲಾಚಾರಯುತರಿಹರೋ ॥ ಎಲ್ಲಿ ವಿತರಣಭೋಗಮಯ ರಿಹ । ರೆಲ್ಲಿ ಶಂಕರಭಕ್ತಿ ನೆಲಸಿಹು । ದಲ್ಲಿ ಬಹುತರಯತ್ನದಿಂದಲಿ ವಾಸಿ ಸಲುಬೇಕು ॥ ೧೧೪ ॥

ಆವ ಮನುಜರ್ಧರ್ಮಕೊಪ್ಪರ । ದಾವ ನರರುತ್ತಮರ ಲಕ್ಕಿಸ । ರಾವ ಪಿರಿಯರು ಸ್ವಾರ್ಥಸಾಧನದಿಂದ ಬಾಳುವರು ॥ ಆವ ಜನರು ದುರಾಗ್ರಹಿ ಗಳಿಹ । ರಾವ ಮರ್ತ್ಯರು ಕ್ರೂರಕರ್ಮಂ । ಗೈವರವರೂರಂ ಬಿಡುವದೇ ಸಾಧುಲಕ್ಷಣವು ॥ ೧೧೫ ॥

ನೀತಿಯಿಲ್ಲದ ನಾಡು ತಾಳದ । ರೀತಿಯಿಲ್ಲದ ಹಾಡು ಬಂಧು । ಪ್ರೀತಿ ಯಿಲ್ಲದ ಬೀಡು ಚಿಗುರದ ಗಿಡದ ಬರಿಗೋಡು ॥ ಭೂತಿಯಿಲ್ಲದ ಮುಸುಡು ವರಖಗ । ಜಾತಿಯಿಲ್ಲದ ಗೂಡು ಪಾತಕ । ಭೀತಿಯಿಲ್ಲದ ಮಾನವತ್ವಂ ಮೆರೆವುದೇ ನೆಲದೆ ॥ ೧೧೬ ।





ಸತಿಗೆ ಪಾತಿವ್ರತ್ಯವಿಭವಂ । ಸುತಗೆ ಪಿತೃಸತ್ಕಾರನಿಷ್ಠತೆ । ಶ್ರುತಿಪಠನ ಸಂಪದವೆ ಭೂದೇವಂಗೆ ಶಿಷ್ಯನಿಗೆ ॥ ವಿತತಗುರುಸೇವಾಚತುಷ್ಟಯ । ವತುಲಸಾಧುಪ್ರೀತಿ ಪಿರಿಯಗೆ । ಹಿತಕರಂ ತದ್ಗುಣಗಳಿಲ್ಲದೊಡಿವರು ಶೋಭಿಪರೇ ॥ ೧೦೭ ॥

ಅನವರತಮುಮುಪಥ್ಯಸೇವನೆ । ತನಗೆ ಬೇಕಾಗಿರ್ದೊಡುಮುದಂ । ಸನುವುತದೆ ನಿಜಗರ್ಭರಕ್ಷಣೆಗಾಗಿ ಗರ್ಭಿಣಿಯು ॥ ಮನದೊಳೆಳಸದೆ ತ್ಯಜಿಪವೋಲ್ಸ । ಜ್ಜನಹಿತಾರ್ಥಂ ಸ್ವಾರ್ಥವಂ ಛಲ । ವನು ಬಿಡುವ ಪಿರಿಯರ ನೆರೆಯೊಳಿರಬೇಕು ಬಾಳ್ವವರು ॥ ೧೦೮ ॥

ಪಣತಿಯೊಳಗುಳ್ಳೆಣ್ಣೆ ಬತ್ತಿಗ । ಳಣಿಯರಂ ಸುಸ್ವಚ್ಛಮಿರ್ದೊಡೆ । ಪ್ರಣುತಮೆನೆ ದೀವಿಗೆಯು ನಿಚ್ಚಳಮಾಗಿಯುರಿವಂತೆ ॥ ಜನಪರೊಳು ಪರಿವಾರದವರುರು । ಗುಣಿಗಳಿರಲಾ ದೇಶವೀ ಧಾ । ರುಣಿಯೊಳತಿಕೀರ್ತಿಯನು ಪೊಂದಿ ಸದಾಸುಖದೊಳಿಹುದು ॥ ೧೦೯ ॥

ಗುಲಿಸಿ ಗುದ್ದುತ ಮೊಲೆಯನುಣ್ಬಂ । ಡಲೆಯು ಸೈರಿಸಿ ತನ್ನ ಕರುವಿನ । ಚೆಲುವ ಮೈಯ್ಯಂ ನೆಕ್ಕುವಾವಿನವೋಲ್ಸುಖಕ್ಕಾಗಿ ॥ ಪಲವುಪದ್ರವನೆಸಪಕಿರಿಯರ । ನೊಲಿದು ಸೈರಿಸಿ ಪರಮನೀತಿಯ । ಕಲಿಸಿ ಪಾಲಿಪ ಪಿರಿಯರೂರೇ ಸ್ವರ್ಗದಿಂ ಮೇಲು ॥ ೧೧೦ ॥

ನಡತೆಗೆಟ್ಟಿಹ ಜನರ ನಾಡಂ । ಬಿಡುವದೇ ಲೇಸೆಂಬ ನೀತಿಯ । ನುಡಿಯನನುಕರಿಸುತ್ತ ಕೆಲಸುಜ್ಞಾನಿಗಳು ಪಿಂದೆ ॥ ಕೆಡುಕರೂರಂ ಬಿಟ್ಟಿರದರಿಂ । ಬಿಡುವದುಚಿತಂ ಗ್ರಾಮವಿದನೀ । ಯೆಡೆಯೊಳಾವ ಪ್ರಯೋಜನಂ ನಿನಗುಂಟು ಮುನಿಸೇಕೆ? ॥ ೧೧೧ ॥

ಈ ತೆರದಿನೊರೆದೊಡಬಡಿಸಿ ಬಿಡ । ದಾತುರದೆ ಕರಕೊಂಡು ಮಂದಿರ । ಕೈತರಲು ಮುಂಜಾವಿನಿಂದಂ ಮಕ್ಕಳುಂ ತಾನು ॥ ಖಾತಿಗೊಳದುಪವಾಸಮಿರ್ಪಾ । ಪೂತಳಹ ಗುರುದೇವಿ ಕಾಣುತೆ । ಭೀತಿಭಕ್ತಿಗಳಿಂ ನಿಜೇಶಂಗಾಸನವನಿಕ್ಕಿ ॥ ೧೧೨ ॥

ಕುಳಿತ ಪತಿಯಾಜ್ಞೆಯನೆಳಸುತಂ । ಬಳಿಯೊಳೋರೆಗೆ ವಿನಯದಿಂ ನಿಂ । ದಲಸದಗಜಾಪತಿಯೆ ಮತ್ಪ್ರಿಯಪತಿಯು ಕೋರಿಕೆಯ ॥ ನಲವಿನಿಂ ಪೂರೈಸಿ ಮಾನಸ । ಕಲಘುಶಾಂತಿಯನಿತ್ತು ಪೊರೆ ಪಂ । ಬಲವನಿನಿತ್ತೇಕಿತ್ತ ಯೆಂದುರೆ ಜಾನಿಸಿದಳಾಗ ॥ ೧೧೩ ॥

ವೀರಶೈವಾಚಾರಪರರೀ । ಯೂರೊಳಿರುವದು ಪ್ರಮಥರಿಗೆ ಸರಿ । ಬಾರದೆಂದಾ ಸೊನ್ನಲಕೆ ಪೋರಮಡಲುನಿಶ್ಚಯಿಸಿ ॥ ಸಾರಪೂಜಾಪೂರ್ವಕಂ ಗಣ । ವಾರಸಂತೃಪ್ತಿಯನೆಸಗಿ ಸುಖ । ಪೂರಿತಾಮಲತತ್ಪ್ರಸಾದವನೊಲಿದಿವಂ ಸವಿದು ॥ ೧೧೪ ॥

ಗಡದ ಸಂಗನಬಸವನಾಮದ । ಮೃಡಮತೀಯನೊಳಿರದೆಸಗಿದಂ । ಗಡಿಯು ಸಾಲವ ತೀರ್ಚಲೆಂದಾಲಯದೊಳುಳ್ಳುರು ॥ ಪಡಿಯನಿತು ಕಾಣುವ ದವಸಮಂ । ಬಿಡದೆ ಮಾರ್ದೀರ್ರೈದುರೌಪ್ಯಕ । ವೊಡನವಗೆ ಕೊಡಲದರೊಳೊಂದೂಕಾಲುರೌಪ್ಯಕವ ॥ ೧೧೫ ॥

ಮರುಳಿ ಕಿಂಕರಭಾವದಿನವಂ । ಶರಣನಿಗೆ ಕೊಡಹೋಗಲದನುರೆ । ನಿರುಕಿಸಿಯಿದಂ ಮುಗುಳ್ದದೇತಕೆ ಕೊಡುವೆ ನೀನೆಂದು ॥ ಪರಿಕಿಸಲ್ಕೆಲೆ ಮಹಿಮ ಕೇಳ್ನೀಂ । ಬರಿಯುಪದದಿಂದೆಲ್ಲ ಕಾಲದೆ । ಚರಿಪೆಯೆಂದರಿದಳ್ಕರಿಂದವು ರಪ್ಪನೆಂಬವನು ॥ ೧೧೬ ॥

ನಿನಗೆ ಪಾದುಕೆಗಳನು ಮಾಡಿಸಿ । ವಿನಯದಿಂದಂ ಕೊಡಲು ಬೇಕೆಂ । ದೆನುತ ನಿಯಮಿಸಿಕೊಂಡು ನಿನ್ನಂ ಕೇಳಲಾರದಲೆ ॥ ಮನದೊಳಗಿದಾ ಭಕ್ತ ನೀವೊಂ । ದನುವ ಸಾಧಿಸುತೆಂಟುದಿನವೀ । ಧನವ ತನ್ನ ಶರಂಗಿನೊಳ್ಕಟ್ಟಿರ್ದನದನೊಮ್ಮೆ ॥ ೧೧೭ ॥

ಸನ್ನುತಪ್ರೇಮಾಪ್ತಭಾವದಿ । ನೆನ್ನೊಳುಸುರಲ್ಕೇಳ್ದು ಚಿತ್ತದೊ । ಳುನ್ನಿಸುತ ಪಾದುಕೆಯನಾನಂ ಶರಣನಾ ಹಣವಾ ॥ ನಿನ್ನ ಮನವಿರೆ ಕೊಡುಕಳೆವೆನಾ । ನೆನ್ನೊಳುಳ್ಳಂಗಡಿಯು ಸಾಲದೊ । ಳೆನ್ನುತವನಿಂ ಕೊಂಡು ಕಳೆದಿಹೆನಂದು ಲೆಕ್ಕದೊಳು ॥ ೧೧೮ ॥

ಆದರಿನಿದು ಪೆರ್ಚಾದ ಹಣವಿಹು। ದಿದನು ಸ್ವೀಕರಿಸೆಂದೊರೆಯುಲೊ। ಪ್ಪದಲೊಡನೆ ಬೇಡಪ್ಪ ಬೇಡವೆನುತ್ತ ಕೊಳ್ಳದಲೆ ॥ ಸದನಕ್ಕೈತಂದಂ ಶರಣ ನಂ। ದದನು ಮಗುಳ್ದಮರಪ್ಪಗಿತ್ತಂ। ಹೃದಯದೊಳು ತಪ್ಪಾಯ್ತೆನುತ್ತಂ ಮರುಗಿ ತದ್ಭಕ್ತಂ ॥ ೧೯ ॥

ಬೇಡಿ ತಂದೊಡೆ ಋಣಮದೆಂಬಂ। ಕಾಡಿ ತಂದೊಡೆ ಪಾಪಮೆಂಬಂ। ಕಾಡದಲೆ ಬೇಡದಲೆ ಜನರಿಂ ತಾನೆ ಬಂದದುದು ॥ ರೂಢಿಯೊಳು ಹಂಗೆಂಬ ನೀತಂ। ನಾಡೆ ಕಾಯಕರೂಪದಿಂದಂ। ಕೂಡದಿಹವಸ್ತುಗಳನೊಲ್ವನೆ ಮೋಹ ವಿರಹಿತನು ॥ ೧೦ ॥

ಮತ್ತಮೋರ್ವನೊಳುಳ್ಳ ಮೊದಲಿನ। ಪತ್ತುರೌಪ್ಯಕಋಣವ ಬಲು ಹಿಂ। ದಿತ್ತು ಕುಲಗುರುವರಗೆ ಕಾಣಿಕೆಯಾಗಿ ಮನದಲ್ಲಿ ॥ ಗೊತ್ತುಮಾಡಿದ ಪತ್ತುರೌಪ್ಯಕ। ವೊತ್ತರದೊಳರ್ಪಿಸಿದನಿವುಗಳ। ನೆತ್ತಣಿಂ ತಂದಿರ್ದನೋ ತಿಳಿಯಲ್ಕಶಕ್ಯಮಿದು ॥ ೧೧ ॥

ಆರುಪಡಿಯನಿತುಳ್ಳದವಸವ। ಮೂರಲಿನಿತರ್ಥಂ ತನಗೆ ಕೈ। ಸೇರಿ ದುದೊ ಮನೆಯಲ್ಲಿ ಪೂಣ್ದುದನೆಬ್ಬಿದನೊ ಮತ್ತೆ ॥ ಬೇರೆಜನರಿಂ ಬಂದುದೋ ಬಹ। ದಾರಿಯೊಳು ದೊರಕೊಂಡುದೋ ಎಂ। ದೂರಜನರಾಶ್ಚರ್ಯಮಾನಸ ರಾದರೂಹಿಸಲು ॥ ೧೨ ॥

ಮಂದಿರದೆ ಪುಗಿದಿರ್ದೊಡೆಂದುಂ। ಮಂದಿಯೊಳು ಸಾಲವನು ಮಾಡಂ। ಬಂದುದನ್ಯರಿನೆಂದೊಡಮರಪ್ಪನ ಪಣವನಂದು ॥ ಹಿಂದಕಂ ಬಿಡುತಿರ್ದಪನೆ ಬಹ। ಸಂದುಗೊಂದುಗಳಲ್ಲಿ ದೊರೆಯಿ। ತ್ತೆಂದೊಡೀತಂ ಮಾನ್ಯರಿಂ ಮನ್ನಣೆಯನಾಂತಪನೆ ॥ ೧೩ ॥

ನೆರೆದಸಾಧಾರಣಮಹತ್ವಮಿ। ದರಿಯಲಸದಳವುಭವಭಕ್ತರ। ಹೊರತು ಮಿಕ್ಕರಿಗೆಂಬುದಕ್ಕೀ ಮಹಿಮೆಯೇ ಸಾಕ್ಷಿ ॥ ಕರಚರಣಸಾಮ್ಯದಿನುಮಾವರ। ಶರಣರಾ ನರರಂತೆ ತೋರ್ದೊಡು। ಮರಿಯೆ ಸದ್ಗುಣದಿಂದಧಿಕರೆನಿಸುವರಿ ದಂತಿರಲಿ ॥ ೧೪ ॥

ಶರಣನಾ ಕುಲಗುರುವಿನಂ ಮಂ । ದಿರಕೆ ಕರೆತಂದೊಳ್ಳಿಚೆಳ್ಳಿಯ । ಕರಡಿಗೆಯನುಂ ನವದುಕೂಲಗಳಂ ಸಮರ್ಪಿಸುತೆ ॥ ಪುರದೆ ರಂಜಿಪ ವೀರ ಭದ್ರನ । ಪರಮನೈವೇದ್ಯಕ್ಕೆರಳ್ಪಡಿ । ಪರಿಮಳಿಪ ಸಣ್ಣಕ್ಕಿಯಂ ಕೊಟ್ಟಂ ಪ್ರಮೋದದೊಳು ॥ ೧೨೫ ॥

ಉಳಿದಖಿಲಗೃಹವಸ್ತುಗಳನ । ರ್ಗಳಮೆನಲ್ಮಾಹೇಶ್ವರರಿಗಂ । ಸಲಿಸಿ ಸತಿಗುರುದೇವಿಯನು ಮೇಣ್ಮಕ್ಕಳಾದೆಸೆವ ॥ ಚಲುವೆರುದ್ರಾಂಬೆಯನು ಸೌಮ್ಯಂ । ದಳೆದ ಕಂಠಾರ್ಯನನೊಡಂಗೊಂ । ಡಲಸದಾ ನಾಲತ್ತವಾಡವ ನುಳಿದು ಪೊರಮಡಲು ॥ ೧೨೬ ॥

ಪುರಸುಜನರಿದನರಿದು ಭೋಂಕನೆ । ನೆರೆದು ಹಾ ಹಾ ಶರಣನೂರಂ । ತೊರೆದು ಪೋಗುವನಯ್ಯೊ ಶಂಭೋ ನಿಲ್ಲಿಸುವರಾರು ॥ ದುರಿತಕರ್ಮಂ ಸೇರಲಾದುದ । ಕಿರದೆ ಪುಣ್ಯದಸಿರಿಯು ತೊಲಗಿದು । ದರರೆ ಕಾಲಕ್ರಮವ ದೆಂತುಟೊ ಎಂದು ಶೋಕಿಸುತ ॥ ೧೨೭ ॥

ಶರಣಸಂಚಯಸಾರ್ವಭೌಮಾ । ನಿರತಿಶಯಮಹಿಮಾಭಿರಾಮಾ । ಪರತರಾಭವಧರ್ಮಧಾಮಾ ವಿಮಲಚಿದ್ವ್ಯೋಮಾ ॥ ದುರಿತಮಲಸಂದೋಹ ಭೀಮಾ । ಹರಮತಾರ್ಣವಪೂರ್ಣಸೋಮಾ । ಸುರುಚಿರಸ್ತುತಿಯೋಗ್ಯನಾಮಾ ಪ್ರಮಥಸುಪ್ರೇಮಾ ॥ ೧೨೮ ॥

ದಿನದಿನದೊಳೆಮಗತಿಸುಲಭಮೆಂ । ದೆನಿಸಿದ ಭವತ್ಪಾದಯುಗದ । ರ್ಶನಮುಭವಧರ್ಮಪ್ರವಚನಶ್ರವಣಸಂಪದವು ॥ ಮನಸಿಜಾರಿಪ್ರಮಥವರ್ತನ । ದನುಭವದ ಸುಖಮಿನ್ನಸುಲಭತೆ । ಯನು ತಳೆದವೆಲೆ ಶರಣ ನಿನ್ನಗಲು ವಿಕೆಯಿಂದೀಗ ॥ ೧೨೯ ॥

ನಿನ್ನೊಡನೆ ಮಾತಾಡಿದೊಡೆ ಮೇ । ಣ್ನಿನ್ನ ಬಳಿಯೊಳು ಕುಳಿತು ಕೊಂಡೊಡೆ । ನಿನ್ನ ಬೆಂಬಳಿವಿಡಿದು ಸಂಚರಿಸಿದೊಡೆ ಮನುಜಂಗೆ ॥ ಮನ್ನಣೆಯು ಸುಖಮಪ್ಪವೈ ಮಹಿ । ಮೋನ್ನತನೆ ತೆರಳದಿರೆನುತ್ತಂ । ಬೆನ್ನುಹತ್ತಿದರೂರ ಜನರೀ ಶರಣನಂ ಬಿಡದೆ ॥ ೧೩೦ ॥

ಭವವಿಮೋಚಕ ಮುಕ್ತಿದಾಯಕ । ಶಿವನೆ ಗುರುಚರಲಿಂಗರೂಪದಿ । ನವಿರತಂ ಸನ್ನಿಹಿತಮಾಗಿರೆ ನಿಮಗದೇಂ ಕೊರತೆ ॥ ಇವರಸೇವಾತೃಪ್ತಿ ಪೂಜೋ । ತ್ಸವಗಳಿಂ ಪರಿಣಮಿಪ ನೀವೇ । ಕವಧಿಗೆಟ್ಟುಸಿರಿಡುವಿರೈ ಶಿವ ಧರ್ಮ್ಮಮಂ ಮರೆದು ॥ ೧೩೧ ॥

ಶಾಂತನಂ ಬಿಡಬಾರದಾತನ । ಚಿಂತನದೆ ಕಾಲವಕಳೆವುದ । ತ್ಯಂತ ಸುಖಮಯವಾದ ಶಾಂತಿಯ ಸಾಧಿಸಲುಬೇಕು ॥ ಕಂತುಹರಕೃಪೆ ನಿಮಗೆ ದೊರೆಯಲಿ । ಸಂತಸದೆ ಹಿಂದಿರುಗಬೇಕ್ರೆಪ । ಇಂತೆನುತ್ತವರ್ಗಳನು ನಿಲ್ಲಿಸಿ ಶಿವಶಿವಾ ಎಂದು ॥ ೧೩೨ ॥

ಪೇಳಲೇಂ ಮಧ್ಯಾಹ್ನದೊಳು ಬರಿ । ಗಾಲಿನಿಂ ಪೊರಮಟ್ಟರಾನೇ । ವೇಳಲಾ ಕಂಟಲೆಯಪೊತ್ತೈದುವ ಪತಿಯಹಿಂದೆ ॥ ಬಾಲಕಿಯ ಪೆಗಲಲ್ಲಿ ಪೊತ್ತಾ । ಬಾಲನಂ ಬಗಲೊಳ್ತಳೆದು ಸ । ಲ್ಲೀಲೆಯಿಂ ನಡೆದಳ್ಪತಿವ್ರತೆಯಾದ ಗುರುದೇವಿ ॥ ೧೩೩ ॥

ಶೂಲಧರಶರಣಾನುಕೂಲಂ । ಪಾಲಿತಾಖಿಲಲೋಕಜಾಲಂ । ನೀಲಗಲ ಭಜನಾತಿಲೋಲಂ ಸಿತಭಸಿತಫಾಲಂ ॥ ಶೀಲಕಮಲಾಕರಮರಾಲಂ । ಕಾಲಹರಸುಖಭೂಜಮೂಲಂ । ಲೀಲೆಯಿಂ ವಿರೇಶ್ವರಂ ಕುಲದೈವಮಕ್ಕೆ ನಗೆ ॥ ೧೩೪ ॥

ಅಂತು ಸಂಧಿ ೮ಕ್ಕೆ ಪದಗಳು ೫೧೪.

ಶೋಭನಂ.



ಶ್ರೀಮತೇ ದಾರುಕಾಯ ನಮಃ



## ಒಂಬತ್ತನೆಯ ಸಂಧಿ ಪ್ರಾರಂಭ.

ಸೂಚನೆ ॥ ಸತಿಸುತರನೊಡಗೊಂಡು ಬಿಸಿಲೊಳು । ಗತಿಗೆಡದೆ ಸೊನ್ನಲಪುರಕೆ ಜಿತ । ರತಿಪತಿಯ ಶರಣಾಗ್ರಗಣ್ಯಂ ತಲುಪಿದಂ ನಡೆದು ॥ ಪಲ್ಲ ॥

ಪದ ॥ ಪರಶಿವನೆ ನಿನ್ನಲ್ಲಿ ನಿನ್ನಿಂ । ಧರಿಸಿದೆನು ರೂಪಕ್ರಿಯೆಗಳಂ । ಮರೆದಿರುವೆನಜ್ಞಾನದಿಂದಂ ನಾನೆ ನೀನೆಂಬ ॥ ವರವಿಚಾರವನಿನ್ನು ನಿನ್ನೊಳು । ಬೆರೆವ ಬಗೆಯಂ ಕರುಣಿಸೈ ಭವ । ದುರಿಯೊಳುರಿದುರಿದಳಲುತಿರುವೆನು ಸಾಕು ಸಾಕಭವ ॥ ೧ ॥

ಬಿಸಿಲು ಚಳಿ ಮಳೆ ಗಾಳಿಗಳ ವೆ । ಕ್ಕಸವೆನಿಪ ಕಷ್ಟವನರಿಯದೀ । ಬಿಸಜಲೋಚನೆಯಾ ಮಹೋಗ್ರಾತಪದೆ ಸುಡುತಿರ್ಪ ॥ ವಸುಮತೀತಲದಲ್ಲಿ ತನ್ನಯ । ಕಿಸಲಸಮಮೃದುಚರಣಗಳನಿಡು । ತಸವಸದೆ ನಡೆವುದನು ನೋಳ್ಪವರಾರಳುಕರರರೇ ॥ ೨ ॥

ಉರಿವ ತಪನಾತಪದಿನುರ್ವೀ । ತರುಣಿ ನಿಟ್ಟುಸಿರಿಡುವ ತೆರದಿಂ । ಬಿರಿದ ಬೀದಿಗಳಿಂದುಗೆಯದುಣ್ಮುತ್ತಲಿರ್ದತ್ತು ॥ ಮರುಮರೀಚಿಕೆಯೇಣ್ದೆಸೆಗಳೊಳು । ಪರಿವ ಬಲ್ದೊರೆಯಂತೆ ವಿಪಿನದೆ । ಚರಿಪ ಹರಿಣವ್ರಜಕೆ ಭ್ರಾಂತಿಯನೀವುತಿರ್ದತ್ತು ॥ ೩ ॥

ಉರಿದ ನುಣ್ಗರಿಯಿಂದ ತಾಪ । ಕ್ಕರಳ್ದೆಳೆವ ಪಕ್ಕಂಗಳಿಂದಂ । ತೆರೆದ ಬಾಯಿಂ ತೇಂಕಿನಿಂದಂ ನೀರಡಿಕೆಯಿಂದ ॥ ಧರಣಿಯೊಳು ಕಾಲೂರಲಾರದೆ । ಭರದೆ ತಣ್ಣೆಳಲಂ ಪುಡುಕುತಂ । ತಿರುಗುತಿರ್ದವು ಖಗಗಳುಗ್ರನಿದಾಘದೊಳು ಬಿಡದೆ ॥ ೪ ॥

ಪೆಡೆಯೊಳಿಹ ಮಣಿಗಾಯ್ದು ತಲೆಯಂ । ಕೊಡಹುತಹಿಗಳು ಸುಡುವ ನೆಲದೊಳು । ನಡೆದು ಭೀತಿಯನುಳಿದು ಶಿಖಿಗಳ ಗರಿಯ ನೆಳಲ್ಗಳನು ॥ ತಡೆಯದಾಶ್ರಯಿಸುತ್ತಲಿರ್ದವು । ಸಿಡಿವುತಿರ್ದವು ಗಿರಿಶಿಖರಗಳು । ಪುಡುಕುತಿರ್ದವು ಶ್ವಾಪದಗಳಂಬುವನು ಬಿಸಿಲಿನೊಳು ॥ ೫ ॥

ಜಡಜಮಿತ್ರನ ಪ್ರಖರಕರವೋ । ಮೃಡನ ಪಣೆಗಣ್ಣುರಿಯಳುರ್ಕೆಯೊ । ಜಡಧಿಯಿಂದಂ ಕಾಯ್ದುಪ್ಪಗೊಂಡೇಳ್ದೌರ್ವಶಿಖಿಯುಧಟೋ ॥ ಕಡೆಯ ಕಾಲದ ಪ್ರೇತಪತಿಯು । ಗ್ಘುಡದ ಕೋಪಾನಲದಳುಂಬವೊ । ಸುಡುವ ಸುಗ್ಗಿಯೊ ಎಂದು ಧಗಧಗಿಸಿತ್ತು ಬೇಸಿಗೆಯು ॥ ೬ ॥

ಹುಡಿಯೊಡೆದು ಬಟ್ಟೆಯದು ಕಾಯ್ದು । ತ್ತುಡರುತಿರ್ದುದು ಬಳಸಿ ಜಳಮುಂ । ಗಿಡದೆಲೆಗಳಲ್ಲಾಡದಿರ್ದವು ಗಾಳಿಯಿಲ್ಲದಲೆ ॥ ಬಿಡದೆ ಬತ್ತಿರ್ದವು ತಟಾಕಗ । ಳೊಡಲೊಳಿನಿಸುಂ ಪರಿವುತಂ ಬಲು । ಬಡತನವನಾಂತಿರ್ದವಾಪಗೆಗಳ್ನಿದಾಘದೊಳು ॥ ೭ ॥

ರವಿಯತೇಜವ ತೆಗಳುವಂದದೆ । ಶಿವಶರಣಶಿವಶರಣೆಯರ್ಕಳು । ತವಕದಿಂ ಕಂಟಲೆಯನುಂ ಪುತ್ರರ್ಕಳಂ ಪೊತ್ತು ॥ ಕವಿದ ಬಿಸಿಲಿನ ತಾಪಮಂಗದೆ । ಶಿವನ ಧ್ಯಾನಸುಖಂ ಮನದೊಳು । ಧ್ಧವಿಸೆ ನಡೆವುತ್ತಿರ್ದರದ ನಾನೆಂತು ಬಣ್ಣಿಸಲಿ ॥ ೮ ॥

ನೀರೊದಗದೆಳೆವಾಳೆಯುಂದದೆ । ಚಾರುತನುವದು ಬಾಡಿದುದು ಕೆಂ । ಪೇರಿದವು ನಯನಂಗಳಾಸ್ಯಂ ಕಂದಿ ಕಪ್ಪಾಗಿ ॥ ತೋರಿದುದು ಮೃದುಪಾದ ತಳದೊಳು । ತೋರಗುರುಳೆಗಳೇಳ್ದವಾ ಬಾ । ಯಾರಿದುದು ಸರ್ವಾಂಗಮುಂ ಬೆಮರ್ದುದು ತದಂಗನೆಯ ॥ ೯ ॥

ನಡೆಯಲಾರೆನು ನಾನೆನದೆ ಕಾ । ಲ್ಸಡುವವೆನ್ನದೆ ಪೊತ್ತುಕೊಂಡೀ । ಹುಡುಗರೆನಗತಿಭಾರವಾಗಿಹರೆಂದು ಮೊರೆಯಿಡದೆ ॥ ಮಿಡುಕದೆದೆಗೆಡದಡಬಡಿಸಿ ನೀ । ರಡಿಕೆಯಾಗಿಹುದೆಂದು ಪೇಳದೆ । ಕಡು ಸಮಾಧಾನದೊಳೆ ನಡೆವುತಿರ್ದಳಾ ದೇವಿ ॥ ೧೦ ॥

ಬಿಸಿಲಿಗೊಣಗಿದ ಪತಿಯ ಮುಖಮಂ । ಮಿಸುಗುವಾ ಕಂಟಲೆಯ ಭಾರಕೆ । ಕುಸಿದ ನಿಜವಲ್ಲಭನಬೆನ್ನಂ ಕಾಯ್ದ ಪಥವಿಡಿದು ॥ ಕಸವಿಸಿಯೊಳಿಡುವಿನೆಯನಡಿಯಂ । ಭಸಿತಮದು ಮಸುಳಿಸಿದ ಗಂಡನ । ನೊಸಲನೀಕ್ಷಿಸಿ ಮರೆದು ಮರುಗುತ್ತಿರ್ದಳಾ ಮಹಿತೆ ॥ ೧೧ ॥

ಪೊರಜೆ ಪಾವೊಗ್ಗಾಲಿ ತೇರಿಗೆ । ತುರಗವೇಳ್ನೂತಂ ಪೆಳವನೀ । ಪರಿ ವಿಷಮಸಾಧನಮದಿರ್ದುಂ ಬಾಗಿ ನಡೆಯದಲೆ ॥ ಶರಣರಿಗೆ ತಾಪಂಗುಡುವನೆಂ । ದರಿದು ಕರದಿಂ ಮುನಿದು ಚಂದ್ರಂ । ಶರಧಿಯೊಳು ನೂಂಕಿದವೊಲರ್ಕಂ ಮುಳುಗಿದಂ ಕಂದಿ ॥ ೧೨ ॥

ಮೆರೆವ ಸಂಧ್ಯಾರಾಗ ಭವರ್ಮಾಂ । ಬರವನುಟ್ಟು ವಿಯತ್ಕಬರಿಯೊಳು । ಸುರುಚಿನಕ್ಷತ್ರಾಳಿವಿಚಕಿಲಮಾಲೆಯಂ ಮುಡಿದು ॥ ವರಚಕೋರನಿನಾದ ಮಂಜುಳ । ತರಸುಭಾಷೆಯನಾಡುತ ನಿಶಾ । ತರುಣಿ ಪತಿಶಶಿಯೊಳ್ಪೆರೆವ ವೋಲ್ಕವಿದುದೆಳೆಮರ್ಬ್ಬು ॥ ೧೩ ॥

ಭೂರಮೆಗೆ ಕಟ್ಟುಗ್ರಕರದಿಂ । ಭೂರಿತಾಪಂಗೊಟ್ಟು ರ ವಿಯಪ । ಹಾರಮಂ ಮಾಡಿದನು ತಜ್ಜೀವನವನೆಂದರಿದು ॥ ಕೈರವಾಪ್ತಂ ಕರುಣದಿಂದ ಸು । ಧಾರಸಾನ್ವಿತಕರಗಳಿಂ ತ । ಣ್ಣೇರೆ ಸಂತೈಸಿದವೊಲೆಸೆದುದು ವಸುಧೆ ಸಂಜೆಯೊಳು ॥ ೧೪ ॥

ಹೊತ್ತುಮುಳುಗಿದುದಿನ್ನು ಮುಂದ । ಕ್ಕೆತ್ತಪೋಗಲುಬಾರದೆನುತಂ । ಹತ್ತರದೊಳುಳ್ಳೊಂದುಹಳ್ಳಿಯ ಗುರುಮಠದೊಳುಳಿದು ॥ ಬುತ್ತಿ ಗೊತ್ತುಂ ಪೊತ್ತುಮಿಲ್ಲಂ । ಗೊತ್ತು ಬುತ್ತಿಗಳಿರ್ದಡುಂಬುವ । ವೃತ್ತಿಯಿಲ್ಲದರಿಂದಲುಪವಾಸದೊಳು ಮಲಗಿದರು ॥ ೧೫ ॥

ಶರಣಶರಣೆಯರಿರಲಿ ಹಸಿವಿಂ । ಕಿರಿಯಕೂಸುಗಳಳದೆ ಸುಮ್ಮನೆ । ಯೊರಗಿದವು ಮಾತೋಪಕಂಠದೊಳೆನಿತುಸ್ಥೈರಣೆಯೋ ॥ ಹರನವರಿಗಲ್ಲದೆ ನರಾಳಿಗೆ । ದೊರೆಯದೀ ಸಂಸ್ಕಾರಮರರೇ । ಶರಣಸುತರೇ ಭಾಪು ನೀವೇ ಧನ್ಯರಹುದಹುದು ॥ ೧೬ ॥

ಶರಣಸುಕುಟುಂಬವಿದು ಪೊರವು । ಟ್ಟಿರುವದೂರಿಗೆ ಕತ್ತಲಂ ಪರಿ । ಹರಿಸಿ ಮಿತ್ರನೆನಿಪ್ಪ ಪೆಸರಂ ಸಾರ್ಥಕವನಿಂದು ॥ ಕರಮೆಸಗಿಕೊಳ್ಳೀಳೆಲ್ಲೈ ದಿನ । ಕರನೆ ನೀನೆಂದೆಬ್ಬಿಪಂದದೆ । ಪಿರಿಯಸರದಿಂ ತಾಮ್ರಚೂಡಂ ಕೂಗಿ ದುದು ಪದೆದು ॥ ೧೭ ॥

ಕರಮನನ್ಯಪರೇಶಚಿಂತನ । ಪರವಶದೆ ಕುಳ್ಳಿರ್ದ ಶಂಕರ । ಶರಣ ಶರಣೆಯರೊಡನೆ ಕುಕ್ಕುಟನಾದಕೆಚ್ಚೆತ್ತು । ಭರದೊಳಾ ನಿತ್ಯಕ್ರಿಯೆಯನಾ । ಚರಿಸಿ ಫಾಲಸ್ಥಲದೆ ಭಸಿತವ । ಧರಿಸಿಕೊಂಡಲ್ಲಿಂದ ಮುಂದಕೆ ತಳರ್ದರಸ ವಸದೆ ॥ ೧೮ ॥

ಕ್ರೂರಮುಂದೇಹರರ ಶೌರ್ಯವ । ನಾರಿಸುವ ಚಂಡಪ್ರತಾಪವು । ನಾರತಂ ನಿಲ್ಲದೆ ನಿರಾಲಂಬಾಧ್ವದೊಳು ಚರಿಪ ॥ ಸಾರಬಲಮೆನಗಾವನಿಂ ಕೈ । ಸಾರಿರುವದಾ ಶಿವನಶರಣರ । ಚಾರುಚರಣವ ಕಾಣಲೆಂಬವೊಲರ್ಕ ನುದಿಸಿದನು ॥ ೧೯ ॥

ದಾರಿಯೊಳು ಮುದ್ದೇಬಿಹಾಳೆಂ । ಬೂರೊಳಗೆ ಪಾಯ್ದೈದುತಿ ರಲೀ । ಮಾರಮರ್ದನಶರಣದಂಪತಿಗಳನುಕಂಡೊಡನೆ ॥ ಧೀರನೆನ್ನಿಸಿದಾಲ ಮಟ್ಟಿಯ । ಚಾರುಗುರುಪಟ್ಟಾಧಿಪಂ ಬಳಿ । ಸಾರಿತನಗಂ ನಂಟನಾದುದ ರಿಂದವಂ ತಡೆದು ॥ ೨೦ ॥

ಶರಣರೇ ನೀವಿತ್ತ ಪೋಗುವ । ಪುರವದಾವುದು ಶಕಟಹರಿಗಳು । ದೊರೆಯುಲಿಲ್ಲವೆ ನಿಮಗೆ ಬರಿಗಾಲಿಂದ ಪೆಗಲಲ್ಲಿ ॥ ಹೊರೆಯನಣುಗರನೆತ್ತಿ ಕೊಂಡತಿ । ಭರದೆ ಪೋಗುವ ಕಾರಣಮದೇ । ನರುಹಿರೆಂದಾಶ್ಚರ್ಯಮನ ದಿಂದವನು ಬೆಸಗೊಳಲು ॥ ೨೧ ॥

ಒಡನೆ ತದ್ಗುರುಪಟ್ಟದಧಿಪತಿ । ಯಡಿಗಳಿಗೆ ಕಡುನಮ್ರದಿಂ ಕರ । ಜಡಜವಮಂ ಮುಗಿದಪ್ಪ ಸೊನ್ನಲಪುರಕೆ ಪೋಗುವೆವು ॥ ನಡೆವ ಬಲಮಿರೆ ಶಕಟಹರಿಗಳ । ಗೊಡವೆಯೇಕಾ ಪುರದೊಳಿರಲೆಂ । ದಡಸಿಹುದು ಲಿಂಗೇಚ್ಛೆ ಯೆಂದಿವನಂದು ಬಿನ್ನೈಸೆ ॥ ೨೨ ॥

ಅಲ್ಲಿಗೈದುವದೇತಕ್ಕೈ ನೀ । ನಿಲ್ಲಿ ಗಣದಾಸೋಹಕಾರ್ಯವ । ನಿಲ್ಲದ ವೊಲಿಂತೆಸಗುತಿರ್ದೊಡೆ ಸಾಲದೇ ಬೇರೆ ॥ ಅಲ್ಲಿಯಿಲ್ಲಿಯೆನಿಪ್ಪ ಭಾವನೆ। ಸಲ್ಲದೆಂದವನೊರೆಯೆ ಲಿಂಗ । ಕ್ಕಲ್ಲದೆಡೆಬೇಡಿನ್ನೆನುತ್ತಂ ನುಡಿದನಿವ ನಂದು ॥ ೨೩ ॥

ಮುಂದೆ ಪೆರ್ಚಿಗೆ ಪೇಳಲಾರದ । ಮಂದಲೀಲಾಮೂರ್ತಿಯಿವನಿಂ । ತೆಂದವಂ ತಿಳಿದಾದೊಡೆಲೆ ಶರಣಾಗ್ರಣಿಯೆ ನೀವು ॥ ಇಂದು ಜರುಗಿಹುದೀ ನಗರದೊಳ । ಗಂದದಗಣಾರಾಧನೆಯುಮುದ । ರಿಂದ ತೀರ್ಚಿರಿ ಲಿಂಗ ಪೂಜೆಯನಿಲ್ಲಿಯೇ ಎನಲು ॥ ೨೪ ॥

ವೇಳೆಯಾಗಿಲ್ಲಂ ಶಿವಾರ್ಚನೆ । ಗಾಲಿಸೈ ತಂಪೊತ್ತಿನಲ್ಲಿಯೆ । ಲೀಲೆ ಯಿಂದಂ ದಾರಿಸಾಗುತ್ತಿಹುದು ಮಾರ್ಗದೊಳು ॥ ಶೀಲವೆನೆ ಲಿಂಗಾರ್ಚನೆಯ ದನು । ಕೂಲಮಾದೊಡೆ ಜರುಗಿದಪುದೀ । ಕಾಲದೊಳಗಪ್ಪಣೆಯಕೊಡಬೇ ಕೆಂದಿವಂ ಬೇಡೆ ॥ ೨೫ ॥

ಪ್ರಮಥಗಣಸಂತೃಪ್ತಿಯಪ್ಪೀ । ಸಮಯದೊಳು ಪೋಗುವದು ಭಕ್ತರ। ಸಮಿತಿಗೊಪ್ಪುಗೆಯಪ್ಪುದೇ ಬಿಡಲಾರೆವಾವೆಂದು ॥ ವಿಮಲಗುರುಪಟ್ಟಾಧಿಪಂ ಸಂ । ಭ್ರಮದೊಳಾಗ್ರಹದಿಂದ ತಡೆಯಲು । ಸುಮನದೀಶ್ವರಶರಣವರ್ಯಂ ತತ್ಪುರದೊಳುಳಿದು ॥ ೨೬ ॥

ನಡೆದ ಪ್ರಸ್ಥದೆ ಪೋಗದೀತಂ । ಪಿಡಿದ ವ್ರತಕನುಸರಿಸಿ ಪೇಟೆಯೊ । ಳೊಡನೆ ಸಾಮಗ್ರಿಯನದೆಲ್ಲವ ಬಿಲಿತು ತಂದಲ್ಲಿ ॥ ಮುಡದಿಯಿಂದಡಗಿಯನು ಮಾಡಿಸಿ । ಸಡಗರದೆ ತತ್ಪಟ್ಟಪತಿಯಂ । ಬಿಡದುಣಿಸಿ ತಾವೆಲ್ಲರುಂಡರು ತತ್ಪ್ರಸಾದವನು ॥ ೨೭ ॥

ಉಗಿಯುಬಂಡಿಯನೇರಿಪೋಗ । ಲ್ಬಗೆದು ಬಳಿಕಿವರಾಲಮಟ್ಟಿಯ । ಸೊಗಸೆನಿಪ ನಿಲ್ದಾಣಕೈತರಲನಿತರೊಳದಿವರ್ಗೆ ॥ ಸಿಗದೆ ಪೊರಮಡಲದನು ನಿರುಕಿಸಿ । ಯುಗಿಯದೆಲ್ಲರು ನಡೆದು ಪೋಪುದೆ । ಜಗದಧೀಶನ ಮನಕೆ ಬಂದಿಹುದೆಂದಿವಂ ನೆನೆದು ॥ ೨೮ ॥

ನಿಲದೆ ನಡೆವುತ ಮುಂದೆ ಪಥದೊಳು । ಕಳಿದರುಪವಾಸದೊಳೆರಳ್ದಿನ । ಗಳನಿವರ ಮಾನಸಬಲಂ ಕೆಡದಿರ್ದೊಡುಂ ನಡೆದ ॥ ಬಲುಪಥಶ್ರಮದಿಂದ ತನುಬಲ । ವಿಳಿದು ಕಾಲುಗಳೆಳೆಯೆ ಬಳಲದೆ । ತೆಲಗಿಯೆಂಬೂರೆಡೆಯೊಳೊಂದುದ್ಯಾನವಮುಂ ಪೊಕ್ಕು ॥ ೨೯ ॥

ಚೆಲುವೆಸೆವ ಪೊಸಮಾಮರದ ತ । ಣ್ಣೆಳಲಿನೊಳಿವರ್ವಿಶ್ರಮಿಸಿದರು । ನಳನಳಿಸುವೆಳೆದಳಿರ್ಗಳಿಂದಂ ಬಹುಫಲಗಳಿಂದ ॥ ಗಿಳಿಗಳ ಕಲಧ್ವಾನದಿಂ ಕೋ । ಗಿಲೆಯ ಮಧುರಸ್ವರದ ಸೊಬಗಿಂ । ದುಲಿವ ಪಾರಿವಗಳ ಬಿನದದಿಂ ಮೆರೆದುದಾ ಮರವು ॥ ೩೦ ॥

ಅಲರಬಂಡುಂಡುರ್ಕ್ಕಗೊಂಡಳಿ । ಗಳ ಬಳಗದಿಂಚರಮದಾ ವನ । ಜಲರುಹಾಲಯೆ ಪದೆದು ಪಾಡುವ ಗಾನದಂದದೊಳು ॥ ಬಳಲಿಬಂದಧ್ವಗರ ಚಿತ್ತಂ । ಗೊಳಿಸುತಿರ್ದತ್ತಗಲ್ದ ಪುರುಷರ । ಲಲನೆಯರ ಮನಕೀವುತಿರ್ದತ್ತ-ತನುತಾಪವನು ॥ ೩೧ ॥

ಬಿರಿದ ಮಲ್ಲಿಗೆ ನಾಗಸಂಪಿಗೆ । ಯರಳ್ದ ಸೇವಂತಿಗೆಯುಗರು ತಾ । ವರೆಗಳೊಳ್ಸುಳಿದುರುಪರಾಗಂಬೆರೆದು ವನದಲ್ಲಿ ॥ ಪರಿಪರಿದು ಮಂದಾನಿಲಂ ಪಥಿ । ಕರಿಗೆ ತಣ್ಪಂ ಕಂಪನಿತ್ತು । ಸರವ ಕಳೆವುತ್ತಿರ್ದುದವರಾನಂದಮುಂ ಮೊಳೆಯೆ ॥ ೩೨ ॥

ಕುಸುಮಮಂಜರಿದಳೆದ ಲತೆಯಾ । ಮಿಸುಪ ಲತೆಯಡರಿದ ಮರಂ ತ । ಧ್ವಸುಮತೀಜವ ಬಾಗಿಸಿದ ಫಲವಾ ಫಲವ ಶೀಳ್ದು ॥ ರಸವನೀಂಟುವ ಕೀರಮಾ ಶುಕ । ವಿಸರವರ್ಣವನೆಳೆದಳಿರ್ಗೆ । ತ್ತೊಸೆದು ಬಳಿಸಾರುವ ಪಿಕಂಗಳ್ಮೆರೆದವಾ ಬನದೆ ॥ ೩೩ ॥

ವರವಸಂತಂ ವಾಲವಾಯಜ । ಸುರಪಮಣಿಗಳ ಗೊಂಚಲುಗಳಿಂ । ಸ್ಫುರಿತಪೀತಾಂಬರದ ಮೇಲ್ಕಟ್ಟಿಂದ ವಿರಚಿಸಿದ ॥ ಸ್ಮರವಿವಾಹಸುಮಂಟಪದವೊ । ಲ್ಮೆರೆದುದಾ ಕಾಯ್ಪಣ್ಗಳಿಂದಂ । ಮಿರುಗುತಿಹ ನವಪಲ್ಲವಗಳಿಂದಲ್ಲಿ ನೇರಿಲವು ॥ ೩೪ ॥

ತಳಿರಡಿಗಳಿಂ ಬಾಳೆಗಂಬಂ । ಗಳ ತೊಡೆಗಳಿಂದಂ ಕಪಿತ್ಥೋ । ತ್ಫಲ ಕುಚಗಳಿಂ ಪೂಗಭುಜಯುಗದಿಂದ ದಾಡಿಮದ ॥ ಚೆಲುರದಗಳಿಂ ಚಂಪಕದ ಸ । ಲ್ಲಲಿತನಾಶಿಕದಿಂದಲರ ಕಂ । ಗಳಿನಳಿಯ ಕುಂತಲದಿನೆಸೆದಳು ವನ ಕಮಲನಿಲಯೆ ॥ ೩೫ ॥

ಮಧುಸಖನ ಕೋದಂಡಕೋಶವೊ । ಮಧುರತೆಯ ಜನ್ಮಸ್ಥಲವೊ ವನ । ವಧು ಚೆದುರಿನಿಂದುಟ್ಟ ಮಿಸುನಿಯ ಚೆಲ್ಲಣವೊಮತ್ತೆ ॥ ವಿಧುಕಿರಣ ನಿಚಯದ ಸೊಬಗೊ ತ । ತ್ತಿಥಿಗತಶ್ರೀಕಲೆಯೊ ಎಂಬಂ । ತಧಿಕಶೃಂಗಾರ ವನು ಬೀರಿದುದಿಕ್ಷುವಿನ ಬೆಳೆಯು ॥ ೩೬ ॥

ಪೊಡವಿಯೊಳು ಬಹುಕಂಟಕಗಳಂ । ಪಡೆದೊಡುಂ ನಿಜಘನತೆಯಿಂದಂ । ಬಿಡದೆ ನಿಖಿಲಜನಕ್ಕೆ ಪ್ರಿಯನಾದುತ್ತಮನ ತೆರದೆ ॥ ಬುಡದಿನಗ್ರದ ವರೆಗೆ ಭೂಜದೊ । ಳಿಡಿದ ಪನಸಿನತೋರಪಣ್ಗಳು । ಕಡುಸೊಗಸನೀವುತ್ತಲಿರ್ದುವು ನೋಳ್ಪವರ ಕಣ್ಗೆ ॥ ೩೭ ॥

ಮುಗುಳು ಲಾಜೆ ಮರಂದಮಾಜ್ಯಮು । ದುಗುವ ಕುಜನಿರ್ಯಾಸಮ ವೃತಂ । ಚಿಗುರ್ದಶೋಕಂ ಜ್ವಾಲೆಯಗ್ರದೊಳೆರಪ ತುಂಬಿಗಳೆ ॥ ಪೊಗೆ ಪಿಕಂಗಳು ದ್ವಿಜರು ತದ್ಧ್ವನಿ । ನಿಗಮಘೋಷಮದಾಗಲೆಸೆದುದು । ಮಿಗೆ ಮದನಮುನಿಹೋಮಶಾಲೆಯ ತೆರದೊಳುಪವನವು ॥ ೩೮ ॥

ವಸುಮತೀದೇವತೆಯಲಂಪಿಂ । ದೊಸೆದು ಕಂಪಿನ ಮಣಿಮುಕುರಮಂ । ಪೊಸತಿದೆನೆ ವನದೇವತೆಗೆ ತೋರ್ಪಂತೆ ನೆಲಕುದುರ್ದ ॥ ಕುಸುಮಸುಪ ರಾಗಂಬೆರೆದು ಕಡೆ । ಗೊಸರುವನಿತುದಕಮದು ತೀವಿದ । ಮಿಸುಪ ಪೂಗಿಡ ದಾಲವಾಲಂ ಕಂಗೆಸೆದುದಲ್ಲಿ ॥ ೩೯ ॥

ಇಂತೆಸೆವ ತದ್ವನದಸಿರಿಯಂ । ಸಂತಸದೊಳೀಕ್ಷಿಸುತ ಕುಳ್ಳಿ । ರ್ದಂತಕಾರಾತಿಯುಶರಣದಂಪತಿಗಳೆಡೆಗೋರ್ವ ॥ ಕಂತುಹರಯೋಗೀಶ್ವರಂ ಪಸಿ । ವಂ ತಡೆಯದೈತಂದು ನೆಳಲೊಳ । ಗಂತರಿಸದುಸ್ಸೆಂದು ಕುಳಿತಂ ಶರಣಸದನರಿದು ॥ ೪೦ ॥

ಎಲೆ ಮಹಾತ್ಮ ಚರೇಂದ್ರ ನೀವೀ । ಸ್ಥಲದೆ ನಿಮ್ಮಯ ಲಿಂಗಪೂಜೆಯ । ನೊಲಿದೆಸಗಬೇಕೆಂದು ವಂದಿಸಿ ಬಿನ್ನಪವ ಮಾಡಿ ॥ ತೆಲಗಿಯಿಂದಾಕ್ಷಣವೆ ಪಾಕದ । ಪಲವು ದಿನಸಂ ತಂದು ಕುಡೆ ತ । ಲ್ಲಲನೆ ಮಿಂದಡಗಿಯನು ಮಾಡಿದಳಾಗ ಸೊಗಸಾಗಿ ॥ ೪೧ ॥

ಲಿಂಗಪೂಜಾನಂತರಂ ಚರ । ಪುಂಗವನನುರೆತಣಿಸಿ ಬಳಿಕ ನಿ । ಜಾಂಗನಾ ತನುಜಾತರಿಂದೊಡಗೂಡಿ ಸವಿಯಾಗೆ ॥ ಮಂಗಲಪ್ರದತತ್ಪ್ರಸಾದಸು । ಖೇಂಗಿತವ ಮನಗಂಡು ಭುಂಜಿಸಿ । ಪೊಂಗಿ ನಡೆದವರ್ಮುಂದಕಾ ದಂಪತಿಗಳಲ್ಲಿಂದ ॥ ೪೨ ॥

ಘೋರತರಸಂಸಾರಿಗಳಿಗತಿ । ದೂರಮೆನಿಸಿದ ಮುಕ್ತಿಪುರಮಂ । ಸಾರಿರುವ ಶರಣರಿಗೆ ದಾರಿಯದೀಡೆಯೆಂಬಂತೆ ॥ ಮೂರುದಿನಮುಪವಾಸಮಳುಕದೆ । ದಾರಿಯೊಳಗೂರ್ಗಳನು ದಾಂಟುತೆ । ಸೇರಿದರು ಭೀಮಾನದೀತೀರವನು ಪದುಳದೊಳು ॥ ೪೩ ॥

ಮಿಂದವರ ಪಾಪವನುಮೊಂಟುವ । ಮಂದಿಯ ತೃಷಾಬಾಧೆಯಂತಟ । ದಂದವೂದಾಶ್ರಮದೊಳಿಹ ಮುನಿಗಳ ಮಲಿನತೆಯನು ॥ ಬೆಂದವರ ತಾಪವನು ಕನಿಕರ । ದಿಂದ ಪರಿಹರಿಪೆನಗೆ ಸರಿಯಾ । ರೆಂದು ಕೂಗಿಡುವಂತೆ ದನಿಗೈದುದು ತದಾಪಗೆಯು ॥ ೪೪ ॥

ಕ್ಷಿತಿಯೊಳಖಿಲಪ್ರಾಣಿಸಂಚಯ । ಕತಿಶಯಪ್ರಿಯಮಾಗಿ ಬುಧಸ । ನ್ನುತಪವಿತ್ರಮುಮಾಗಿ ನಿರ್ಮಲಮಾಗಿ ಶುಭಮಾಗಿ ॥ ವಿತತಕೀರ್ತಿಪ್ರಯುತಮಾಗಿಹ । ಪ್ರತಿರಹಿತಜೀವನನವ ತನ್ನಯ । ಪತಿಗೆ ಕುಡಲ್ಕೈದುವವೊಲಾ ನದಿ ಪರಿವುತಿರ್ದತ್ತು ॥ ೪೫ ॥

ಶಳೆಯುನಡುವಿಂ ಸುಳಿಯನಾಭೀ । ವಲಯದಿಂದರಸಂಚೆಮೊಲೆಯಿಂ । ಪುಳಿನಜಘನದಿನಬ್ಜಮುಖದಿಂ ಝಷನಯನದಿಂದ ॥ ಲಲಿತಮೆನೆ ಶೈವಾಲಕುಂತಲ । ಕುಲದಿನೊಪ್ಪಿ ನದೀರಮಣಿ ಕಂ । ಗೊಳಿಸಿದಳು ನಿಜರಮಣನಂ ಕೂಡಲ್ನಡೆವ ತೆರದೆ ॥ ೪೬ ॥

ಘೋರನಕ್ರವ್ರಾತದಿಂ ತ । ತ್ತೀರಧರಣೀಜಾತದಿಂದಂ । ಚಾರು ಪಾನೀಯಪ್ರವಾಹದಿನನಿಮಿಷಗಳಿಂದ ॥ ಹಾರುವ ತುಷಾರಂಗಳಿಂದ ಗ । ಭೀರವಿತತಸ್ಥಲಗಳಿಂದಂ । ಬೀರುತಿರ್ದುದು ತತ್ತರಂಗಿಣಿ ಕಂಗೆ ಮಂಗಲವ ॥ ೪೭ ॥

ನೀನು ಲವಣೋದಕಮಯಂ ಬಡ । ಬಾನಲಾತ್ಮಕನತುಲಭಂಗವಿ । ತಾನಪಾತ್ರಂ ಕುಂಭಜಾಪ್ರಿಯನಾಗಿ ಬಾಳ್ದಿರುವೆ ॥ ನಾನು ಸನ್ಮಾನವತಿಯಿಹೆನೆಂ । ದಾ ನದಿ ಸಮುದ್ರವನು ಕೂರ್ತಭಿ । ಮಾನದಿಂದುಸುರುತ ಕುಣಿವವೊಲು ಗುಳುಗುಳಿಸಿದತ್ತು ॥ ೪೮ ॥

ಹೈಮವತಿಯಿಂದಭವಗುತ್ತಮ । ನಾಮರೂಪಗಳೊದಗಿದಂದದೆ । ಭೀಮೆಯಾದೆನ್ನಿಂದ ಕಡಲತಿಪಾವನತೆವಡೆದು ॥ ಭೂಮಿಯೊಳು ಪೆಸರಾದುದೆನುತಂ । ಪ್ರೇಮದಿಂ ಬಿನದಿಸುವವೊಲ್ತುಟ । ನೀಮಹಿಳೆ ಪರಿವುತ್ತಲಿರ್ದಳು ಬಲು ಸೊಬಗಿನಿಂದ ॥ ೪೯ ॥

ಒಂದು ತಾಣದೊಳಿರದೆ ಮನಸಿಗೆ । ಬಂದವೊಲ್ಬಹುಮಾರ್ಗದೊಳು ಮಾ । ನಂದೊರೆದು ಸಂಚರಿಸುವಳು ತಟನೀರಮಣಿಯೆಂದು ॥ ಮಂದಿಯೆನ್ನಂ ಪಳಿಯದಿರರೆಂ । ಬೊಂದು ಭಯದಿಂದವಳು ನಿಜತನು । ಗುಂದಿದವೊಲೊಡಲೊಳಗೆ ಪರಿದುದು ದಾಂಟಲಳವೆನಿಸಿ ॥ ೫೦ ॥

ಆ ಸರಿತ್ತಟದಲ್ಲಿ ಶರಣಾ । ಗ್ರೇಸರನ ಕಂಡೋರ್ವ ಸನ್ನುತ । ದೇಶಿಕಂ ಸುಸ್ನೇಹಭಾವದೊಳೆಲವೊ ಮಹಿಮಾಢ್ಯ ॥ ಈ ಸಮಯದೊಳು ಲಿಂಗದರ್ಚನೆ । ಗೈಸುವದು ನಿನ್ನಿಂದಹುದೆ ಪೇ । ಳ್ಬೇಸರಾದೊಡೆ ಬೇಡವೆಂದು ವಿಚಾರಿಸಲ್ಕೊಡನೆ ॥ ೫೧ ॥

ಆಗಬಹುದೈ ಬೇಸರೇತಕೆ । ನೀಗಲಾರದ ಕಾರ್ಯವಲ್ಲಿದು । ರಾಗದಿಂದಿಲ್ಲಿಯೆ ಶಿವಾರ್ಚನೆಗೈಯಬೇಕೆಂದು ॥ ಬಾಗಿ ಬಿನ್ನಪವೆಸಗಿ ಶರಣಂ । ಪೋಗಿ ಹತ್ತರದೂರೊಳಗಣಿಂ । ಬೇಗತಂದಂ ಬೇಳೆಯಕ್ಕಿಯನೆಲ್ಲವನು ಬಿಡದೆ ॥ ೫೨ ॥

ಒಡನೆ ಸತಿಗುರುದೇವಿ ಮಿಂದಾ । ಮುಡಿಯನುಟ್ಟಪ್ಪವನು ಪೂಜಿಸಿ । ಯಡಗಿಯಂ ಮಾಡಿದಳು ಶೀಘ್ರದೊಳಾ ಚರೇಂದ್ರನನು ॥ ಬಿಡದೆ ಪೂಜಿಸಿ ತಣಿಸಿ ಬಳಿಕಂ । ಮಡದಿಮಕ್ಕಳುಸಹಿತವಿೂತಂ । ಸಡಗರದೊಳುಪಭೋಗಿಸಿದನಾ ಸುಪ್ರಸಾದವನು ॥ ೫೩ ॥

ಬಳಿಕ ಪೊಳೆಯಂ ದಾಂಟಿ ಮುಂದಕೆ । ತಳುವದಲ್ಲಿಂ ನಡೆದೆರಡು ದಿನ । ಗಳೊಳು ತಲುಪಿದರಾಗ ಸೊನ್ನಲಪುರಕವುವರಿಂತು ॥ ಒಲೆದು ಪೊರ ಮಟ್ಟಂದಿನಿಂದಂ । ನಿಲದೆ ಮೂರೇಬಾರೆ ಪಥದೊಳು । ಸಲೆ ಸವಿದರನುಕೂಲಮಾಗೆ ಚರಪ್ರಸಾದವನು ॥ ೫೪ ॥

ಕಾಯಮೋಹಿಗಳಲ್ಲದೀ ಜಿತ । ಕಾಯಜನಶರಣಾಗ್ರಣಿಗಳೀ । ಕಾಯ ಕಷ್ಟಗಳಂ ಪರಸ್ಪರರೊರೆಯದಾಲಿಸದೆ ॥ ಮಾಯೆಯಂ ಪರಿಹರಿಪ ಲಿಂಗನಿ । ಕಾಯಲೀಲೆಯೊಳಾಡುತಂ ಪ್ರಭು । ರಾಯನೊಪ್ಪುವ ತೆರದೆ ಬಂದರು ಸೊನ್ನಲಿಗೆಗಿವರು ॥ ೫೫ ॥

ಬೇರೆ ಮಂದಿಯ ಗುರುತುಮಿಲ್ಲದ । ಕಾರಣಂ ತತ್ಪುರದೆ ಮುನ್ನವೆ । ಸೇರಿಕೊಂಡಿರ್ದನುಜನಾದಾ ಪ್ರಭುಸಮಾಹ್ವಯನ ॥ ಚಾರುನಿಲಯುವನೈದೆ ಪುಡುಕುತ । ಸಾರಿ ನಿಂದಂ ಮೊದಲೊಳಲ್ಲಿಯೆ । ವೀರಶರಣಾಗ್ರೇಸರಂ ಸತಿಪುತ್ರರೊಡಗೂಡಿ ॥ ೫೬ ॥

ಸನ್ನುತನಿರಾಭಾರಿದೇಶಿಕ । ನೆನ್ನಿಸಿದ ಗುರುಸಿದ್ಧಬಸವನ । ಪನ್ನಳಿನ ಕಾರುಣ್ಯಬಲಮಂ ಭಕ್ತಿಯಿಂ ಪಡೆದು ॥ ಚೆನ್ನಕವಿವರ್ಯಂ ಬರೆದ ಮಹಿ । ಮೋನ್ನತಾಭವಶರಣಕುಲಸಂ । ಪನ್ನವಿರೇಶ್ವರಪುರಾಣದೆ ಪ್ರಥಮಕಾಂಡಮಿದು ॥ ೫೭ ॥

ಭಸಿತರುದ್ರಾಕ್ಷಾಂಕಕಾಯಂ । ಪಶುಪಕಾರ್ಯಾತುಲಸಹಾಯಂ । ಕುಶಲಯುಮಿವರನಿಚಯಗೇಯಂ ನಿರ್ಗಲದಪಾಯಂ ॥ ವಸುಮತೀಮಾಮಾನನೀಯಂ । ಬಸವಕೀರ್ತನಲಸದುಪಾಯಂ । ಮಿಸುಪಶಾಂತಿಯನೀಗೆ ವೀರೇಶ್ವರ ಶರಣನೆನಗೆ ॥ ೫೮ ॥

ಅಂತು ಸಂಧಿ ೯ಕ್ಕೆ ಪದಗಳು ೫೭೨. ಶೋಭನಂ.

ಪ್ರಥಮ ಕಾಂಡವು.

ಶ್ರೀ ಶಿವಾಭ್ಯಾಂ ನಮಃ



## ಹತ್ತನೆಯ ಸಂಧಿ ಪ್ರಾರಂಭ.

ಸೂಚನೆ ॥ ಕಳ್ಳನೆಂದರಿದೀ ಶರಣನಂ । ಕ್ಷುಲ್ಲಕೋಕ್ತಿಯ ನಾಡಿ ಥೋಬಡೆ । ಮಲ್ಲಿಕಾರ್ಜುನನಾಮುಕಂ ಬಡಿದಳಿದ ನಳಲೊದಗಿ ॥ ಪಲ್ಲ ॥

ಪದ ॥ ಭೂಮಿಜಲಮರುದಾಪ್ತಪವನ । ವ್ಯೋಮರವಿಶಶಿತಾರಕಾಶಾ । ಸ್ತೋಮಭುವನಶ್ರೇಣಿಜಡಚೇತನಗಳೊಳಹೊರಗೆ ॥ ಕಾಮಸಂಹರ ನೀನೆ ವ್ಯಾಪಿಸಿ । ತಾಮರಸಜಾಂಡಪ್ರಕರಕಂ । ಸ್ವಾಮಿಯುಂ ಕಾರಣನುಮಾಗಿರುತಿರುವೆ ಪೊರೆ ಶಂಭೋ ॥ ೧ ॥

ಶರಣನಾ ಚೆಲುವೆಸೆವ ಸೊನ್ನಲ । ಪುರದೆ ಮುನ್ನಿನ ತೆರದೆ ತನ್ನಯ । ಪರಮಕಾಯಕವಾದ ಬೇಡದ ಭಿಕ್ಷೆಯಂ ಮಾಡಿ ॥ ಅರಿದು ದಾಸೋಹವನು ಬಿಡದಾ । ಚರಿಸತೊಡಗಿದನನುಜನಾ ಮಂ । ದಿರದೊಳಿಂತೇಳೆಂಟುದಿನಗಳ ತನಕಮಿದು ನಡೆಯೆ ॥ ೨ ॥

ತ್ರಿವಿಧವಸ್ತುನಿಮಿತ್ತವೆಸಗುವ । ಶಿವಶರಣನೀಶಪ್ರಪಂಚಮು । ಮವಿರತಂ ಸತಿಸುತನಿಮಿತ್ತಂ ತದನುಜಂ ಮಾಳ್ಪ ॥ ಸವಿಯಿರದ ಜೀವಪ್ರಪಂಚಮು । ಮಿವು ಪರಸ್ಪರಮುದ್ರುಚಿ ತಮೋ । ನಿವಹಗಳವೋಲ್ತಿಳಿಯೆ ಮೇಳನವಾಗದುದರಿಂದ ॥ ೩ ॥

ಒಂದು ಮನೆಯೊಳು ಕೂಡಿ ನಡೆಯುವಿ । ವೆಂದರಿದು ವೀರೇಶ್ವರಂ ಬೇ । ರೊಂದುಮನೆಯನುದಾರನೋರ್ವನಿನುಚಿತಮೆನೆ ಪಡೆದು ॥ ಚಂದದಿಂ ದಾಸೋಹವೆಸಗು । ತ್ತೆಂದಿನಂತೆ ಶಿವಾನುಭವಸುಖ । ದಿಂದ ಪರಿಣಮಿಸುತ್ತಲಿರ್ದಂ ನಿಸ್ಪೃಹತೆಯಿಂದ ॥ ೪ ॥

ಇದು ಮಧುರಮಿದು ಕಾರಮಿದು ಪುಳಿ । ಯಿದು ಸುರಸಮಿದು ಬೇಕ ರುಚಿಯಿಹು । ದಿದುವೆನಗೆ ಬೇಡವಿದೆನುತ್ತನ್ನದೊಳಗಾರಿಸದೆ ॥ ಸದರಮೆನೆ ಹಿತಸತ್ಯಪರಿಮಿತ । ಮೃದುಲಯುತಭಾಷಣವನಾಡುತೆ । ಪದೆದು ಶರಣನ-ಜಿಹ್ವನೆನಿಸಿದನೇನಿದರ್ಗ‌ಳವೋ ॥ ೫ ॥

ಎಳೆಯಪೆಣ್ಗೊಸಂ ವಿರಾಜಿಪ । ಮೊಳೆವ ಜವ್ವನದಂಗನೆಯನಿ । ರ್ಪ‌ಳಿದ ಶತವರ್ಷದ ಹಳೆಯಮುದುಕಿಯನು ಸಮವಾಗಿ ॥ ತಿಳಿದು ನಿರುಕಿಸಿ ನಿರ್ವಿಕಾರಂ । ದಳೆದು ಶರಣಂ ಷಂಢನೆನಿಸಿದ । ನಿಳೆಯೊಳಿವನಂ ಪೋಲ್ವ ಪೂಜ್ಯರ್ದೊರೆವರಿನ್ನಾರು ॥ ೬ ॥

ಪಾವನದ ಭಿಕ್ಷಾರ್ಥಮುಂ ಗುರು । ದೇವತಾಕಾರ್ಯಾರ್ಥಮಂಗದೆ । ತೀವಿಬಾಧಿಸುವಾ ಮಲಾದಿವಿಸರ್ಜನನಿಮಿತ್ತಂ ॥ ಭೂವಲಯದೊಳು ಚರಿಸುತಂ ಬೇ । ರಾವಕಾರ್ಯಕ್ಕಾಗಿಯುಂ ತಾ । ನಾವಗಂ ಸಂಚರಿಸದೀತಂ ಪಂಗುವೆನಿಸಿದನು ॥ ೭ ॥

ಎಡಬಲಕೆ ಪಿಂದಕ್ಕೆ ನೋಡದೆ । ನಡೆವ ಕುಳ್ಳಿರ್ದೆಡೆಗಳೊಳ್ಕುಂ । ಗಡೆಗೆ ಪದಿನಾರ್ವೊಳಗಗಳನಕಲ್ಲದಲದರ ಮುಂದೆ ॥ ನಡೆ ನಿರುಕಿಸದೆ ಜಾಗರೂಕತೆ । ವಿಡಿದು ಮೆರೆವೀ ಶರಣವರ್ಯಂ । ಪೊಡವಿಯೊಳು ತಾನಂಧನೆನಿಸಿದನಖಿಲಬುಧರೊಪ್ಪೆ ॥ ೮ ॥

ಪ್ರೀತಿವಚನವನಪ್ರಿಯೋಕ್ತಿ । ವ್ರಾತಮಂ ಕೇಳ್ದಾಲಿಸದವೊ । ಲ್ವಾತಿಶಯಮೆನೆ ಹರ್ಷಶೋಕಂಗಳನು ಪೊಂದದಲೆ ॥ ಭೂತಲಾಗ್ರದೆ ಬಧಿರನೆನಿಸಿದ । ನೀತನೊಳು ನುತಿನಿಂದೆಗಳ್ಸಮ । ರೀತಿಯಿಂ ಪರಿಣಮಿಸಿದವಿದೇಂ ಪುಣ್ಯಸಂಫಲವೋ ॥ ೯ ॥

ಕರಣದೊಳಗಿಂದ್ರಿಯನಿಕರಮಡ । ಗಿರುವ ಕಾರಣದಿಂದ ಬಲುಹ । ತ್ತರದೆ ವಿಷಯಂ ಬಂದಡುಂ ಸುಪ್ತಂ ವಿಕಾರವನು ॥ ಧರಿಸದಂದದೆ ಜಾಗ್ರದೊಳು ಹ । ತ್ತರವನೈದಿದ ವಿಷಯಗಳಿಗೆವೆ । ಗರಗದೀ ಶಿವಶರಣವರ್ಯಂ ಮುಗ್ಧನೆನಿಸಿದನು ॥ ೧೦ ॥

ಇಂತಜಿಹ್ವತ್ವಾದಿಸದ್ಗುಣ । ಸಂತತಿಯೊಳೊಪ್ಪುವ ಶರಣನ । ತ್ಯಂತ ಶುಭಚಾರಿತ್ರಮದು ಮೊದಲಾ ಪುರದ ಜನರ ॥ ಸ್ವಾಂತಕಂ ಗೋಚರಿಸ ಲಿಲ್ಲವ । ನಂತರಂಗಸ್ಥಿತಿಯನರಿದವ । ರುಂ ತಿಳಿಸಲಿದ್ದಿಲ್ಲವಾ ಪುಟಭೇದನ ದೊಳಾಗ ॥ ೧೧ ॥

ಕೆಲಬರಿವನರೆಮರುಳನೆಂದರ್ । ಕೆಲಬರೀತಂ ಮುಗ್ಧನೆಂದರ್ । ಕೆಲರು ದಂಭಾಚಾರಪರನಿವನೆಂದು ಗಳಪಿದರು ॥ ಕೆಲಬರಿವನತಿಕುಟಿಲನೆಂದರು । ಕೆಲಬರೂಹಿಸಲರಿಯೆವೆಂದರು । ಹಲವು ಬಗೆಯಿಂದಿಂತು ನುಡಿದರು ಜನರು ತಿಳಿದಂತೆ ॥ ೧೨ ॥

ಒಂದು ದಿನದುದಯದೊಳು ಕಾಯಕ । ಕೆಂದು ಪೊರಮಟ್ಟೋರ್ವ ಧನಿಕನ । ಮಂದಿರದ ಚೌಕಿನೊಳು ಸುಮ್ಮನೆ ಬಂದು ನಿಲಲಲ್ಲಿ ॥ ಮುಂದಿ ಯಿದ್ದಿಲ್ಲಾರುಮೀತಂ । ಬಂದ ಸುಳಿವಂ ರಮ್ಯಹರ್ಮ್ಯಾದೆ । ನಿಂದ ತದ್ಧನಿಕಂ ತಿಳಿವುತಿವನಾವನೋಎಂದು ॥ ೧೩ ॥

ಹರಿದ ಹೊಲಿದಂಗಿಯನು ತೊಟ್ಟು । ಕಿರಿಯಪಂಚೆಯನುಟ್ಟು ದಕ್ಷಿಣ । ಕರದೆ ಬೆತ್ತವ ತಳೆದು ತ್ಯಾಪಿಯಜೋಳಿಗೆಯನಾಂತು ॥ ಕರಿಯರುವೆಯಿಂ ಚೀಲಮಂ ಪ । ಚ್ಚಿರುವ ಕೋರಿಯನಡ್ಡಪೆಗಲ । ಲ್ಲಿರಿಸಿ ಕಾವಿಯ ವಸನ ದಿಂದೆಸೆವೀತನಂ ನೋಡಿ ॥ ೧೪ ॥

ಇವನ ಪರಿಚಯವಿಲ್ಲದುದರಿಂ । ದಿವನು ಭಿಕ್ಷಾಸಮಯದೊಳ್ಮಾ । ನವನು ಧರಿಸುವನೆಂಬುದದು ಗುರುತಿಲ್ಲದುದರಿಂದ ॥ ಅವನು ಮೇಲಿಂದಾರು ನೀನೆಂ । ದವಗಡಿಸಿ ಕೇಳಲ್ಕರಣಪುಂ । ಗವನದಕೆ ಮಾರ್ನುಡಿಯದಿರಲೊಡ ನಿಳಿದುಪರಿತಂದು ॥ ೧೫ ॥

ಧನಿಕನೀ ಶರಣಾಗ್ರಣಿಯ ಬಡ । ತನದ ವೇಷಕ್ಕಾಸಿಕನಿಹುದಕೆ । ಮನದೆ ತಸ್ಕರನೆಂದು ಭಾವಿಸಿ ಗರ್ಜಿಸುತ ಬೈದು ॥ ಕಿನಿಸಿನಿಂ ಕೋಲ್ಗೊಂಡು ದಂಡಿಸಿ । ಕನಿಕರಂದೊರೆದೊಂದುಕೋಣೆಯೊ । ಳನುವನರಿಯದೆ ದಬ್ಬಿ ಬಾಗಿಲಮುಚ್ಚಿ ಮದದಿಂದ ॥ ೧೬ ॥

ಉಣಲೊಳಗೆ ಪೋದಂ ದುರಾತ್ಮಂ। ಪಣದಮುದವೆನಿತುಂಟೊ ಶರಣನ। ಗುಣದಚಿನ್ಹವನೆತ್ತಬಲ್ಲರು ವಿಟ್ಕ್ರಿಮಿಗಳಳರರೇ ॥ ಅಣಿಯರಂ ಮೈಯೊಡ್ಡಿ ನಿಂದೀ । ಪ್ರಣುತಶರಣನನಾರ್ಪಿನಿಂ ಕೈ । ದಣಿಯೆ ದಂಡಿಪ ಮನವದೆಂತವ ಗಾದುದೋ ತಿಳಿಯೆ ॥ ೧೭ ॥

ಬೈದೊಡುಂ ಬಲುಬಡಿದೊಡುಂ ಖತಿ । ಖೇದಮುದ್ರೆಗಳೊಗೆಯದಲೆ ಸೊಗ । ಸಾದ ಮುಖದೊಳು ಶಾಂತಿಕಲೆಯುಕ್ಕೇರುತಿರ್ದುದನು ॥ ಆ ದುರಾತ್ಮಂ ಕಂಡುಕಂಡುಂ । ಶ್ರೀದನಿವನಹುದೆಂದು ಯೋಚಿಸ । ದಾದ ಕಾರಣದಿಂದವಂ ನರನೆಂಬ ಬಗೆಯೆಂತೋ ॥ ೧೮ ॥

ಹಳಿಯಚಿಂದಿಯೊಳಿರ್ದೊಡೇನಾ । ತೊಳಪರನ್ನಂ ಬೆಲೆಗೆಡುವದೇ । ಹೊಲಿದ ಹರಿದುಡುತೊಡಿಗೆಯಿರಲುಂ ಶರಣಪುಂಗವನ ॥ ವಿಲಸಿತಾಭವದಿವ್ಯತೇಜಂ । ಬೆಳೆವುದಲ್ಲದೆ ಕಳೆಗೆಡುವದೇ । ತಿಳಿಯರೀ ಶಿವಯೋಗಿಗಳ ಮರ್ಮವನು ಗಾವಿಲರು ॥ ೧೯ ॥

ಬಡಿವನಂ ಕೈಯೆತ್ತಿ ಹರಸುವ । ಪೊಡವಿಗತಿಹಿತವೆಸಗುತಿಹ ಮೇ । ಣಡಸಿದೆಡರ್ಗೆದೆಗೆಡದ ಮೃಡಶರಣಾಗ್ರಗಣ್ಯನನು ॥ ತುಡುಗನೆಂದೂಹಿಸಿ ಕೆನಿಸಿನಿಂ । ನುಡಿದು ಬೈವುತ ಬಡಿದು ಕೋಣೆಯೊ । ಳಿಡುವನಿತು ತಪ್ಪೆಂತು ತೋರ್ದುದೊ ತನ್ನರನಬಗೆಗೆ ॥ ೨೦ ॥

ಹುಳಿಯೊಗರುಸವಿಯುಪ್ಪುಕಾರಂ । ಗಳೆನು ಮನುಜಂ ತಿಳಿಯಬಲ್ಲಂ । ಕಲುಷಪುಣ್ಯಂಗಳನು ವಸ್ತುಗುಣಕ್ರಿಯಾದಿಕವ ॥ ಸಲೆ ಪರೀಕ್ಷಿಸಿ ತಿಳಿಯದಿರ್ದೊಡೆ । ನೆಲದೊಳಾತಂ ಪಶುಖಗಕ್ರಿಮಿ । ಗಳಬಳಗದಿಂ ಗೀಳನೆನ್ನಲು ಸಂಶಯಮುದೇನು ॥ ೨೧ ॥

ಮನೆಗೆ ಜಂಗಮದೇವನೈತರೆ । ವಿನುತಮಂಗಲವೆಂದು ನಂಬುವ । ರನುಭವಿಗಳೀ ಶುಭಚರಿತ್ರಂ ಪ್ರಮಥಗಣಮೋಹಿ ॥ ವಿನಯಗುಣಸಂಪನ್ನನಾದೀ । ಘನಪುನೀತಂ ಮನೆಗೆ ಬಂದೊಡೆ । ಮುನಿದು ದಂಡಿಸಿದಾ ಮನುಷ್ಯನ ಪಾಪಕೆಣೆಯುಂಟೇ ॥ ೨೨ ॥

ವೀರಮಾಹೇಶ್ವರರ ತಣಿಸದೆ । ಧೀರರೆಂದುಂ ಘುಂಜಿಸರವಂ । ವೀರಶೈವಮತೀಯನಿರ್ದುಂ ಭಿಕ್ಷೆಗೈತಂದ ॥ ವೀರನಂ ಬಂಧನನಿವಾಸದೆ । ಸೇರಿಸಿ ಪೊದಳ್ದುಣಲುಪೋದಾ । ಕ್ರೂರಕರ್ಮಿಯ ಗಂಟಲೊಳದೆಂತಿಳಿದುದೋ ಕೂಳು ॥ ೨೩ ॥

ಪಾಪಮಂ ಘುಂಜಿಸಿದನೋ ಸಂ । ತಾಪಮಂ ತಾಂ ಮೆಲಿದನೋ ಶಿವ । ಶಾಪಮಂ ಪಡಕೊಂಡನೋ ಎಂಬಂದದಿಂದುಂಡು ॥ ಈ ಪುರುಷನಂ ಬಿಡದೆ ಸುಮ್ಮನೆ । ಕೋಪದಿಂದಂಗಡಿಗೆ ತೆರಳ್ದಾ । ಪಾಪಿ ಮಗುಳ್ದೊಂಬತ್ತುತಾಸಿಗೆ ಮನೆಗೆ ಪರಿತಂದು ॥ ೨೪ ॥

ಶರಣನೆಚ್ಚರದಿಲ್ಲದೊಳಪೊ । ಕ್ಕಿರೆದುಪಾಹಾರವನು ಸೇವಿಸಿ । ಪೊರಗೆ ಬಂದಾ ಬಲಿದ ಕೋಣೆಯಬಾಗಿಲಂ ತೆರೆದು ॥ ನಿರುಕಿಸಲು ಘನಪುಣ್ಯ ಮೊರ್ಗಿನ । ತೆರದೆ ನಿಂದಿರ್ದಂ ಮಹಾತ್ಮಂ । ಹರುಷರಸಮುದ್ರಾಕಲಿತಮುಖ ತಾಮರಸನಾಗಿ ॥ ೨೫ ॥

ಏನುಮಾಡಿದೊಡುಂ ಬೆದರದೀ । ಮಾನವಿಲ್ಲದ ಪಿರಿಯಕಳ್ಳಂ । ಮೌನದಿಂ ನಿಂದಿರ್ಪನೆಂದತಿಕೋಪದುಬ್ಬೆಗದೆ ॥ ತಾನಿವನಕುತ್ತಿಗೆಯ ಪಿಡಿದನು । ಮಾನಿಸದೆ ಪೊರನೂಂಕಿದಂ ತ । ನ್ಮಾನವಾಧಮನೀಶರಣನಂ ಬಲುಹಿನಕಟಕಟಾ ॥ ೨೬ ॥

ಬಿಡದೆ ಮತ್ತಂ ಕೆನ್ನೆಗಳವಿಂ । ದಡಿಗಡಿಗೆ ಬಡಿವುತ್ತ ಬೈವುತ । ಪಿಡಿದು ನೂಂಕಿದನಂಗಣದಿನತ್ತಾಚೆಗೀತನನು ॥ ಕೆಡುಕನಾದಾ ಪಾತಕಿಯ ಕೈ । ಗುಡಿಯಲಿ ಮಹಾವಿಷದಮುಳ್ಳದು । ಸುಡುವದೆನ್ನೆದೆಯುವನ ಪೆಸರುಂ ಕೇಳಿದಾಕ್ಷಣವೇ ॥ ೨೭ ॥

ಘನತೆಯುಂ ಪಡೆದಿರ್ದ ಥೋಬಡೆ । ಯೆನಿಪ ಮನತನಕವನು ಪಿರಿಯಂ । ಧನಯುತಂ ವರಮಲ್ಲಿಕಾರ್ಜುನನಾಮಕಂ ಚತುರಂ ॥ ವಿನುತಕುಲಭವ ನಿರ್ದುವಿೂ ಶರ । ಣನನು ಬಡಿದತಿಘೋರಪಾತಕಿ । ಯೆನಿಸಿದಂ ತತ್ಪೂರ್ವ ಕರ್ಮದ ಪೇರ್ಮೆಯೆನಿತುಂಟೋ ॥ ೨೮ ॥

ತುಡುಗುವಮಾಡದೆ ಕೆಡಕುಮಾತಂ। ನುಡಿಯದೆನಿತುಂ ಬೇಡಿ ಕಾಡದೆ। ನಡುಮನೆಯಬಾಗಿಲೊಳು ಪೋಗದೆ ಹೊರಗೆ ನಿಂದಿರ್ದ ॥ ಮೃಡಶರಣನಂ ಬಡಿಸಿ ಕೋಣೆಯೊ। ಳಿಡಿಸಿ ದುರ್ಗತಿಗೀಡುಮಾಡಿದ। ಜಡಪುರಾಕೃತಕರ್ಮ ಕತಿಧಿಕ್ಕಾರವಿರಲರರೇ ॥ ೨೯ ॥

ಆವ ತೇಜೋಮಯನ ಮೆಲ್ಲಡಿ। ದಾವರೆಯ ಸೋಂಕಿನ ಪ್ರಭಾವದಿ। ನೀ ವಸುಧೆ ಪರಿಶುದ್ಧಮಾಗುವದಾ ಮಹಿಮನೊಲೆದು ॥ ಪಾವನತೆಗುಡಲಾಲ ಯಕೆ ಬರೆ। ಭಾವದೊಳು ಕ್ರೋಧವನು ವಹಿಸಿದ। ಗಾವಿಲನ ದುರ್ಜನ್ಮವರಿ ಗಳಿಗಾದೊಡುಂ ಬೇಡ ॥ ೩೦ ॥

ಶರಣರೊರೆದೊಡೆ ಶರಣರುಗುಳ್ದೊಡೆ। ಪರಮಶರಣರು ದುಡಿಸಿಕೊಂ ಡೊಡೆ। ಶರಣವರ್ಯರು ಕಾಡಿದೊಡೆ ಬೈದೊಡೆ ಬಡಿದೊಡವರ ॥ ಕರುಣ ವೆಂದೇಭಾವಿಸದೆ ಶಿವ। ಶರಣನಂ ದಂಡಿಸಿದ ಮನುಜನ। ದುರಿತಸಂಚಯ ಕೊಳವೆ ನಿಷ್ಕೃತಿ ಸರ್ವಶಾಸ್ತ್ರದೊಳು ॥ ೩೧ ॥

ಹರಿವಿಧೀಂದ್ರಮುಖಾಮರರ ಭಾ। ಸುರಸಕಲಪದವಿಗಳನೀವಾ। ಸುರು ಚಿರಮಹಾಪುಣ್ಯದೊಪವುಳ್ಳೊಡೆ ಶರಣರಿರವ ॥ ಅರಿವ ಸನ್ಮತಿಯುದಿಪುದಲ್ಲದೆ। ದುರಿತಜಲಧಿಯೊಳಾಳುತಿಹ ದು। ರ್ನರ ಪಶುಗಳೆಂತರಿದಪರು ಧರಣಿಯೊಳಿ ದಂತಿರಲಿ ॥ ೩೨ ॥

ತಿಳಿದು ನೋಡಲ್ಬಂಧಮುಕ್ತಿಗ। ಳೊಳಗೆ ಮಹದಂತರಮದಿರಲುಂ। ಚೆಲುವ ಶರಣನ ಭಾವಮಿವುಗಳೊಳಂತರಿಸಲಿಲ್ಲ ॥ ಇಳೆಯೊಳೀತನ ಸಹನ ಶೀಲತೆ। ಯೊಲವದೆನಿತೋ ಬಿಟ್ಟೊಡನೆ ನಿಜ। ನಿಲಯಕೈತಂದಂ ಮಗುಳ್ದು ಪೊಳ್ತಾದುದರಿನಂದು ॥ ೩೩ ॥

ಕುಳಿತರುಪವಾಸದೊಳೆ ಶರಣ। ರ್ನಿಲಯದೊಳು ಸಂತೋಷಭಾವಂ। ದಳೆದು ಪ್ರಣವಧ್ಯಾನಸೀಯೂಷವನು ಸವಿವುತ್ತ ॥ ಬಲುಬಡಿದೊಡುಂ ಕಡಿ ದೊಡುಂ ಪ್ರ। ಜ್ವಲಿಸುವಗ್ನಿಯೊಳಿಟ್ಟೊಡುಂ ಪೊಳ। ಪಳಿಯದಿಹ ಕನಕದ ವೊಲಿರ್ಪರು ಶರಣಪುಂಗವರು ॥ ೩೪ ॥

ಇಲ್ಲಿ ಜನರೊಳಗಿನಿಸು ಪರಿಚಯ । ವಿಲ್ಲದುದರಿಂದಿಂತು ಭಿಕ್ಷೆಯು । ನಿಲ್ಲಲಹುದೊಮ್ಮೊಮ್ಮೆಯೆಂದಿವನಂದಿನಿಂ ಕೆಲದ ॥ ಹಳ್ಳಿಯೂರುಗಳಾದ ಶೇಳಿಗೆ । ಯಲ್ಲಿ ಹಿಪ್ಪರಿಗೆಯೊಳು ತಿರಿತಂ । ದೊಳ್ಳಿದಾಸೋಹವನೆಸಗಿದಂ ಕೆಲದಿನಗಳನಕ ॥ ೩೫ ॥

ಮರುಳಿ ತತ್ಪುರದಲ್ಲಿ ಮೂವ । ತ್ತೆರಡು ಭಾಗಂಗಳನೆಸಗಿ ತಾಂ । ಮರೆಯದೊಂದೊಂದೋಣಿಯೊಳಗೊಂದೊಂದು ದಿನವೈದಿ ॥ ತಿರಿಯತೊಡಗಿದ ನಾದೊಡುಂ ಮುದ । ವೆರಸಿ ತಕ್ಕಪ್ರಸಂಗದೊಳಗಾ । ಯೆರಡುಪಳ್ಳಿಗಳಲ್ಲಿ ತಿರಿಯುತ್ತಿರ್ದನೊಮ್ಮೊಮ್ಮೆ ॥ ೩೬ ॥

ಅಂದು ಶರಣನ ಬಡಿದ ತಿಂಗಳೊ । ಳೊಂದು ಭೀಷಣರೋಗವಾತಗೆ । ಬಂದಡಸಲಿದು ವೀರಶರಣದ್ರೋಹದುಷ್ಫಲವು ॥ ಮಂದಮತಿಯಾನಾದೆ ನೇತರ । ದಿಂದವೀ ಕಷ್ಟಂ ತೊಲಂಗುವ । ದೆಂದು ಚಿಂತಿಸಿ ಬಳಲಿ ಬೆಂಡಾಗುತ್ತವಂ ಕಂದಿ ॥ ೩೭ ॥

ಶರಣನಮಲತರಪ್ರಸಾದಂ । ದೊರೆದೊಡಲ್ಲದೆ ಬದುಕೆನೆನುತಂ । ಪರಿಪರಿಯುಪಾಯವನೆಸಗಿದೊಡುಮದುದೊರೆಯದಿರಲು ॥ ಕೊರಗಿ ಗುರುದೇವಿಯನು ಕಂಡವ । ಳ್ಗೆರಗಿ ತಾಯೆ ಮಹಾದುರಾತ್ಮಂ । ದುರಿತಮೂರ್ತಿ ದುರಂತಘಾತಕಿಯಾಗಿರುವೆನವ್ವಾ ॥ ೩೮ ॥

ಎನ್ನ ಪೋಲುವ ದುಷ್ಪುರುರ್ವಿಯೊ । ಳಿನ್ನು ಪುಟ್ಟಲುಬಾರದವ್ವಾ । ಬನ್ನಬಡುತಿರ್ಪೆನ್ನ ದೋಷವ ಮರೆಯಬೇಕವ್ವಾ ॥ ನಿನ್ನಮಗನೆಂದರಿವುದವ್ವಾ । ಸನ್ನುತಶ್ರೀಶರಣಪುಂಗವ । ನುನ್ನತೋನ್ನತಸುಪ್ರಸಾದವ ಕೊಡಿಸು ಹಡದವ್ವಾ ॥ ೩೯ ॥

ಕೊರಗಿಸುತ್ತಿಹ ಘೋರರುಜೆಯಿಂ । ಮರಣಕಭಿಮುಖನಾಗಿರುವೆನೀ । ಶರಣಕೃಪೆಯಿಂದುಳಿವೆನಾನೆಂಬೊಂದುನಂಬುಗೆಯು ॥ ಇರುವದವ್ವಾ ಕರುಣಿಸೆನುತಂ । ಮರುಳ್ದವಂ ವಂದಿಸಲು ಮನದೊಳು । ಮರುಗುತಂ ತನ್ಮಲ್ಲಿಕಾರ್ಜುನನಾಮನಂ ಕೂರ್ತು ॥ ೪೦ ॥

ಕೇಳಿದೊಡೆ ಕೊಡರದನನವರು ಮೇ । ಣ್ಪೇಳುವನಿತಳವಿವರಿಗಿಲ್ಲಂ । ಕೇಳಿ ಪಡೆವುದು ಹೇಳಿಕೊಡಿಸುವದೆರಡುವೊಳಿತಲ್ಲ । ಮೇಲೆನಿಪ ಶಿವಭಕ್ತಿಯಿಂದನು । ಕೂಲಮಪ್ಪುದು ತಾನೆ ಭಕ್ತಿಯೆ । ಮೂಲಮಾ ಪರಮಪ್ರಸಾದಕ್ಕದೆ ಪೊರೆವುದಪ್ಪಾ ॥ ೪೧ ॥

ಸುರಪತಿಗೆ ಭೋಗವನು ಬೊಮ್ಮಗೆ । ನೆರೆ ನಿಗಮವಿದ್ಯಾವಿಭವಮಂ । ಮುರಹರಗೆ ಚಕ್ರವನಖಿಲಮುನಿಗಳಿಗೆ ಮುಕುತಿಯನು ॥ ವರಪುರಾತನಸಂಕುಲಕ್ಕುರು । ತರಗಣೇಶತೆಯಂ ಪಶುಪನಿಂ । ಕರುಣಮುಂ ಮಿಗೆ ಕೊಡಿಸಿದವರಾರಪ್ಪ ಪೂರ್ವದೊಳು ॥ ೪೨ ॥

ಇಂದು ಮುಂದಾ ಭೋಗಮುಕ್ತಿಗ । ಳಂ ದಯಾಘನನಾದ ಶಿವನಿಂ । ಮುಂದಿಯರ್ಥಿವ್ರಜಕೆ ಕೊಡಿಸುವದುಂಟೆ ಯೋಚಿಸಲು ॥ ಒಂದು ಭಕ್ತಿಯೊಳಾ ಪ್ರಸಾದಂ । ಕುಂದದ ಪ್ರಸಾದದೊಳು ಸೌಖ್ಯಂ । ಪೊಂದಿರುವವಿಂತೆಂದವಳು ಪೇಳಿದಳದಂ ಕೇಳ್ದು ॥ ೪೩ ॥

ಮಾಡಿದುತ್ಕಟಪಾಪದಿಂದೀ । ಹಾಡೆನಗೆ ಸಮನಿಸಿದುದಿನ್ನದ । ನಾಡಲೇನೆನ್ನಲ್ಲಿ ಸದ್ಗುಣವಿಲ್ಲದಲೆ ಬರಿದೆ ॥ ಬೇಡಿಕೊಂಡೊಡೆ ಶರಣಕೃಪೆಕೈ । ಗೂಡದೆಂದಾಲಯಕೆ ಬಂದಾ । ಕೇಡನವನನುಭವಿಸಲಾದಂ ಪಾರವಿಲ್ಲದಲೆ ॥ ೪೪ ॥

ಸತ್ತರಣುಗರು ಬಳಿಕವಂ ಬಿಡ । ದೆತ್ತಿಕೊಂಡಂ ವಂಶವೃದ್ಧಿಗೆ । ದತ್ತಪುತ್ರನನೋರ್ವನಂ ಮುಂದೊಂದು ತಿಂಗಳೊಳು ॥ ಸತ್ತುಹೋದನು ತಾನು ತತ್ಪು । ತ್ರೋತ್ತಮನುಮುವನಣುಗರಳಿದರು । ಮುತ್ತಿದಾಮಯದಿಂದ ನಿರ್ವಂಶಮೆನೆ ತೀವ್ರದೊಳು ॥ ೪೫ ॥

ಇತ್ತ ದೇವಿಯಚಾತ್ರೆಯೊಳು ನಾ । ಲತ್ತವಾಡದ ತತ್ಪ್ರಮುಖರೀ । ಚಿತ್ತಜಾಂತಕಶರಣನಭಿಮತಮಂ ತಿರಸ್ಕರಿಸಿ ॥ ಮತ್ತಮುಹಿಪನ ಕೊಲ್ಲಿಸಿದ ಬಳಿ । ಕೊತ್ತುವತಿಹಾನಿಗಳವರಿಗಂ । ಮುತ್ತಲಾತ್ಮದೆ ತಮ್ಮ ದೌರ್ಜನ್ಯವನು ನೆನೆನೆನೆದು ॥ ೪೬ ॥

* ನನಗೆ.

ತಂದೆ ತಾಯ್ಗಳ್ಮಕ್ಕಳಿಗೆ ಪೇ । ಳ್ವಂದದಿಂ ಪರಿಪರಿಯೊಳೀ ತುರು । ಮಂದಿಯೊಳು ನಿಂದೆಮ್ಮ ಕಲ್ಯಾಣಾರ್ಥಮಕ್ಕರದೆ ॥ ಅಂದು ಬೋಧಿಸಿದೊಳ್ಳಿ ಮಾತಂ । ಪಿಂದಿರಿಸಿದಪರಾಧವೀ ಬಗೆ । ಯಿಂದ ದುಃಖಕೆ ಕಾರಣಮದಾಯ್ತೇನುಮಾಡುವದು ॥ ೪೭ ॥

ಕ್ರೂರಕರ್ಮಂಗಳನು ನೋಡಲು । ಬಾರದೆಂದತಿಖೇದಗೊಂಡೀ । ಯೂರನುಳಿದೈದಿದನು ಸೊನ್ನಲಪುರಕೆ ನಿಲ್ಲದಲೆ ॥ ವೀರಶರಣನ ಚರಣಸೇವೆಗೆ । ದೂರರಾದೆವು ತಿಳಿಯಲಿಲ್ಲಿ । ನ್ನಾರಮರೆವುಗಬೇಕೆನುತ್ತಂ ಪಲುಬಿ ಪಂಬಲಿಸಿ ॥ ೪೮ ॥

ಕೆಲಬರವರೊಳು ಸತ್ವರದೆ ಸೊ । ನ್ನಲಿಗೆಗೈತಂದೀತನಂ ಕಂ । ಡೆಲೆ ದಯಾಕರ ನಿನ್ನ ಹಿತಬೊಧವನು ಧಿಕ್ಕರಿಸಿ ॥ ಬಳಲಲಾದೆವು ಕ್ಷಮಿಸು ತಪ್ಪಾ । ಯ್ತುಲಸದಾ ನಾಲತ್ತವಾಡ । ಕ್ಕೊಲೆದು ಬಿಜಯಂಗೈದು ಪಾಲಿಪುದೆಂದು ಕುಂಬಿಡಲು ॥ ೪೯ ॥

ಅಲ್ಲಿ ಸಮನಿಪ ಲಾಭವಾವುದು । ಇಲ್ಲಿ ತೋರುವ ಹಾನಿಯಾವುದು । ಎಲ್ಲಿಯೇಂ ಗಣಸೇವೆ ನಡೆದೊಡೆ ಸಾಕು ಚಿತ್ತದೊಳು ॥ ಅಲ್ಲಿಯಿಲ್ಲಿಯೆನಿಪ್ಪ ಭಾವನೆ । ಹೊಲ್ಲ ಗುರುಚರಭಕ್ತಿಯುಳ್ಳೊಡ । ದೆಲ್ಲಕಡೆಯೊಳ್ಪೊರೆವುದೆಂದಾಡಿದನವರಿಗಿವನು ॥ ೫೦ ॥

ಮುಂದಕಿಟ್ಟಡಿಯಂ ಮಹಾತ್ಮರ್ । ಪಿಂದಕಿಡುವವರಲ್ಲವೆಂದಿಗು । ಮೆಂದು ಮನಗಂಡೇನುವಂ ಮಾತಾಡಲಗಿದವರು ॥ ನೊಂದು ಶರಣಾನುಜ್ಞೆಯಂ ಪಡೆ । ದಂದು ಮಗುಳ್ದರ್ಸಾಧುಬೋಧದೆ । ಕುಂದನೂಹಿಸಿದವರು ಕೆಡುತಿಹರೆಂಬ ಮತಿಗಲಿತು ॥ ೫೧ ॥

ಪರಮಶಿವಲಾಂಛನಗಳಂ ಧರಿ । ಸಿರುವನಿಗೆ ಶರಣೆಂಬುದೇ ಭಾ । ಸುರ ಮಹೇಶ್ವರ ಭಕ್ತಲಕ್ಷಣವಿದಕೆ ಪೊರತಾಗಿ ॥ ಚರಿಸುವಾತಂ ಕುಲಜನಿರ್ದೊಡು । ಮರಿಯೆ ದುಷ್ಪಾಪಂಡಿಯೆನಿಪಂ । ಪರತರಾಗಮವೇದಶಾಸ್ತ್ರಗಳೊಪ್ಪವಾತನಿಗೆ ॥ ೫೨ ॥

ಶರಣವಚನವೆ ಹರವಚನವೆಂ । ದರಿದವಗೆ ಪರಮಾರ್ಥಮಕ್ಕುಂ । ಶರಣವಚನವೆ ನರವಚನವೆಂದರಿದ ಪಾಮರನು ॥ ಪಿರಿದನರ್ಥಪರಂಪರೆಯು ನಿಹ । ಪರಗಳೊಳುಪೊಂದುವನವಂ ಸಂ । ಚರಿಸುವಂ ನಿರಯಂಗಳೊಳು ತಿರುಗುವನು ಭವಗಳೊಳು ॥ ೫೩ ॥

ನಿನ್ನಪಾಂಗಂ ಕಾಮದುಘಮದು । ನಿನ್ನ ಹಸ್ತಂ ದಿವಿಜಭೂಜಂ । ನಿನ್ನ ಮೆಲ್ಲಡಿದಾವರೆಯೆ ಚಿಂತಾಮಣಿಯು ನಾಡೆ ॥ ನಿನ್ನ ವಾಕ್ಸುಪದಾರ್ಥಭೂತಂ । ನಿನ್ನ ಕೃಪೆ ಜೀವತ್ವಮಂಕಳೆ । ದುನ್ನತಸುಖಂ ಗುಡುವುದೈ ವೀರೇಶಶಿವ ಶರಣ ॥ ೫೪ ॥

ಅಂತು ಸಂಧಿ ೧೦ಕ್ಕೆ ಪದಗಳು ೬೨೬.

ಶುಭಂ.



ಶ್ರೀ ನಂದೀಶಾಯ ನಮಃ



## ಹನ್ನೊಂದನೆಯ ಸಂಧಿ ಪ್ರಾರಂಭ.

ಸೂಚನೆ ॥ ಪಣದಮುದದಿಂ ಶರಣನಾಮಂ । ತ್ರಣವನೊಪ್ಪದೆ ಕೆಟ್ಟನೋರ್ವಂ । ಪ್ರಣುತಶರಣಂ ಪ್ರಮಥರನು ತಣಿಸಿದನುಸವಿದೋರಿ ॥ ಪಲ್ಲ ॥

ಪದ ॥ ಜ್ಞಾನಿ ನೀನಜ್ಞಾನಿಯಾನೈ । ದಾನಿ ನೀನತಿದೀನನಾನೈ । ಮಾನಿ ನೀನಭಿಮಾನಿಯಾಂ ಪೆತ್ತಯ್ಯನುಂ ನೀನು ॥ ಸೂನು ನಾನುತ್ತಮನು ನೀನೈ । ಹೀನನಾನಾನಂದಶರನಿಧಿ । ನೀನು ದುಃಖಸಮುದ್ರಮಗ್ನಂ ನಾನು ಪೊರೆ ಶಂಭೋ ॥ ೧ ॥

ಧನಿಕನಹ ಕಾಡಾದೆಯಣ್ಣಪ । ನೆನಿಪನಿಗೆ ದಾನಾರ್ಯನೆಂಬಾ । ವಿನುತ ಬುಧವರಗೊಮ್ಮೆ ಶರಣಂ ಭೋಜನಕೆ ಪೇಳೆ ॥ ದಿನದಿನಂ ತಿರಿತಂದು ಬಲು ಬಡ । ತನದೆ ಕಾಲವ ಕಳೆವ ಶರಣನ । ಮನೆಗುಣಲ್ಪೋಗುವದು ಧನಿಕರಿಗುಚಿತಮಲ್ಲೆಂದು ॥ ೨ ॥

ಧನದಮುದದಿಂದಣ್ಣಪಾಖ್ಯಂ । ಮನಸಿನೊಳುದಾಸೀನತೆಯನಾಂ । ತೆನಿತು ಶರಣಂ ಕರೆದುಡುಂ ಪೋಗದಿರಲದನರಿದು ॥ ಅನುನಯದೊಳಾ ಪಂಡಿತಂತ । ದ್ಧನಿಕನಂ ಕೂರ್ತೆಲವೊ ಶ್ರೀಯುತ । ನಿನಗಿದೇಕಭಿಮಾನವೂಟಕೆ ಬಂದೊಡೇನಾಯ್ತು ॥ ೩ ॥

ಬಡವನೆಂದು ತೃಣೀಕರಿಸದಿರು । ಬಡವನಲ್ಲಂ ವೀರಶರಣಂ । ಬಡವನಾದೊಡೆ ಭೋಜನಕೆ ಕರೆವುತ್ತಲಿರ್ದಪನೆ ॥ ಪೊಡವಿಯೊಳು ಬಡದಿಟ್ಟಗೀತಂ । ಬಡವನಂದದೆ ಕಾಣ್ಬನಲ್ಲದೆ । ಜಡರುಹಭವಾಂಡವನು ಪೋಷಿಪ ಶಕ್ತಿಯುಂಟವಗೆ ॥ ೪ ॥

ಕಲಮರಾಳಕೆ ಕಾಕಮೂಖಂ । ಡಲಗೆ ತಿರುಕಂ ಹರಿಗೆ ನರಿಯುಂ । ಮಲಯಜಮಹೀರುಹಕೆ ಬರ್ಬೂರಾಗಮಂ ಮುನಿಗೆ ॥ ಖಲನಮೃತಕಂಬಲಿ ಸುವರ್ಣ । ಚಲಕೆ ಮೊರಡಿ ಪಯೋನಿಧಿಗೆ ಪ । ಲ್ವಲಮದೆಂತಂತಭವ ಶರಣಗೆ ಶ್ರೀಯುತರ್ಸರಿಯೇ ॥ ೫ ॥

ತಿರಿವ ಕಜ್ಜಂ ನಿನ್ನ ಮನಸಿಗೆ । ಕಿರಿದೆನಿಸಿ ತೋರಿದುದೊ ಮಹಿಮರು । ತಿರಿವುದೇ ಪಿರಿದಾದ ಕಾಯಕವೆಂದು ಗ್ರಹಿಸಿಹರು ॥ ತಿರುಕೆಯದು ಕಡುದೀನ ರೆನಿಸಿದ । ಕಿರಿಯರುದರವ ಪೋಷಿಪುದು ಮೇ । ಣ್ಪಿರಿಯರ ಜಗದ್ಧಿತಚರಿತ್ರಕೆ ಸಾಧನಂ ತಿಳಿಯೆ ॥ ೬ ॥

ಹರಿವಿಧೀಂದ್ರಕುಬೇರಮುಖ್ಯಾ । ಮರರಿಗಗ್ಗದ ಸಿರಿಯನುಂ ಮುನಿ । ಪರಿಗವಿರಳಾನಂದಮುಯಮೋಕ್ಷವನು ಕರುಣಿಸಿದ ॥ ಗಿರಿಜೆಯಾಣ್ಮಂ ತಿರುಕ ನಲ್ಲವೆ । ಪರರಿಗೈಸಿರಿಯೀವ ಪಿರಿಯರ । ತಿರುಕೆಯದು ಸಾಮಾನ್ಯಮೆಂಬುವ ದೆಗ್ಗತನಮುಲ್ತೆ ॥ ೭ ॥

ಪಿರಿಯರಲ್ಲದ ಕಿರಿಯರಲ್ಲದ । ದುರಭಿಮಾನದ ವಿತ್ತಮೋಹಿಗ । ಳುರೆ ಜಗತ್ಕಲ್ಯಾಣಕಾರ್ಯದ ನೆವವನೊರೆದೊರೆದು ॥ ತಿರಿದು ತಂದರ್ಥವನು ಸ್ವಾರ್ಥದೆ । ದುರುಪಯೋಗಂಗೈವರೊಲಿದೀ । ಪಿರಿಯಕಳ್ಳರು ಮಾಳ್ಪ ತಿರುಕೆಯ ತೆರದೊಳಲ್ಲಮಿದು ॥ ೮ ॥

ಪೆಸರಿಗಾ ದಾಸೋಹಕಾರ್ಯವ । ನೆಸಗಿ ಸವಿಮಾತಾಡಿ ಭಕ್ತರ । ವಿಸರದಿಂದಂ ಬಹುಧನಾದಿಗಳಂ ತಿರಿದು ತಂದು ॥ ಪಸಿದು ಬಂದತಿದೀನಜನರಿಗೆ ! ಕಸವನೀಡಿ ಸದನ್ನಮಂ ತಾ । ನೊಸೆದು ಪ್ರಿಯರೊಡಗೊಂಡು ತಿಂಬನ ತಿರುಕೆಯಲ್ಲಮಿದು ॥ ೯ ॥

ತಿರಿದ ಸಾವಿರಪಣದೊಳೊಂದಂ । ಕರಮುಸುರ್ದ ಜನಹಿತದ ಕಾರ್ಯದೊ । ಳಿರಿಸಿ ಬಳಿಕುಳಿದರ್ಥದಿಂ ಸತಿಪುತ್ರಬಂಧುಗಳಂ ॥ ಪೊರೆವುತಂ ಕಲಹಾದಿಪಾಪಾ । ಚರಣೆಯೊಳು ವಿನಿಯೋಗಿಸುತ್ತಂ । ಚರಿಪ ಕಪಟಿಯ ತಿರುಕೆಯಂತಲ್ಲಂ ಪುನೀತಮಿದು ॥ ೧೦ ॥

ಸಾರಪುಣ್ಯಾರ್ಥಂ ಪ್ರತಿಷ್ಠಾ । ಗೌರವಾರ್ಥಂ ಧನನಿಮಿತ್ತಂ । ಜಾರ ಚೋರಕ್ರೂರರೆನ್ನದೆ ಸರ್ವರೊಳು ತಿರಿದು ॥ ಸಾರಿ ದಾಸೋಹವನೆಸಪ ಸಾ । ಧಾರಣರವೊಲುಜಡಧನಕ್ಕೀ । ವೀರಶರಣಂ ಕೈದುಡುಂಕಂ ಮರೆದು ಮೋಹ ದೊಳು ॥ ೧೧ ॥

ಘೋರಜಠರಂಭರಣಕಾಗಿಯೆ । ಬೇರುಪಾಯಂಗಾಣದೀ ಸಂ । ಸಾರ ದೊಳು ತಿರಿದುಂಬ ಕಿರಿಯರವೊಲ್ಶರಣನಿವನು ॥ ಹಾರಯಿಸಿ ತಿರಿದುಂಬನೆಂ ದೊಡೆ । ಸೇರುತಿಹುದಘಮುದರಿನಿಂದು ವಿ । ಚಾರಿಸೈ ಮನದೊಳ್ತಿರಸ್ಕೃತ ಭಾವಮಂ ತ್ಯಜಿಸು ॥ ೧೨ ॥

ಅರಿಯೆ ಕ್ಷುತ್ತಾಪವನದೊಂದನೆ । ಪರಿಹರಿಪ ದಾಸೋಹದಂತೀ । ಶರ ಣನುರುದಾಸೋಹಮಲ್ಲಂ ಕ್ಷುಧೆಯತಾಪವನು ॥ ದುರುಳಮನಸಿನತಾಪಮಂ ಸಂ । ಹರಿಸಿ ಶಾಂತಿಯನೀವುದಿದಿವಂ । ಕರೆದುದೆಮ್ಮಯಪುಣ್ಯವಿದನು ನಿರಾ ಕರಿಸಬೇಡ ॥ ೧೩ ॥

ನಿನಗೆ ಬಹುಧನವಿರ್ದಡೇನಾ । ಯ್ತನಘಶರಣನಸುಪ್ರಸಾದ । ಕ್ಕನು ಮತಿಸದಿರೆ ಜನಿಸದಿರದತಿಕಷ್ಟವದರಿಂದ ॥ ಧನಿಕನೇ ಬಾ ಭಕ್ತಿಯಿಂ ಭೋ । ಜನಕೆ ಶರಣರಮನೆಗೆನುತ್ತೊಂ । ದನುವಿನಿಂದಂ ಪೇಳಲದಕವನೊಪ್ಪಲಿಲ್ಲ ನಿಸು ॥ ೧೪ ॥

ನೀನು ಬಾರದೊಡಾರುಮೂಡುವ । ದೇನು ನಿನಗಿದು ತಿಳಿಯಬೇಕೈ । ನಾನು ಪೋಗುವೆನೂಟಕಾ ಮಹನೀಯನಾಲಯದೆ ॥ ಸಾನುರಾಗದೊಳೊಂದಿ ನಿಸು ಜಲ । ಪಾನಮಂ ಮಾಡಿದೊಡೆ ಪಾಪವಿ । ತಾನಮುರಿವುದೆನುತ್ತ ತದ್ಬುಧನೋರ್ವನೈದಿದನು ॥ ೧೫ ॥

ಬಿನ್ನಪವ ಪಿಡಿದಮಲಚಿತ್ತರು । ತನ್ನಮನೆಗೂಟಕ್ಕೆ ಬಾರದೊ । ಡುಣ್ಣ ದಿರ್ದಾ ನೇಮವಿಡಿದಿಹ ಶರಣಪುಂಗವನು ॥ ಹೊನ್ನಿನುರ್ಕಿಂ ಬಾರದಿಹನವ । ಗಿನ್ನುಮಾಡುವದೇನೆನುತ್ತಂ । ದುನ್ನಿಸುತೆ ತಾನರ್ಪಿಸಿದನಾ ಕಾಲಕನುಸರಿಸಿ ॥ ೧೬ ॥

ಒಮ್ಮೆ ಕರೆದೊಡೆ ಪೋಗದನನಿ । ನ್ನೊಮ್ಮೆ ಕರೆವಡೆ ನಂಟುತನವೇ । ಹೆಮ್ಮೆಯುಳ್ಳಭಿಮಾನಿಯಾದಣ್ಣಪ್ಪನಂ ಮತ್ತೆ ॥ ಸಮ್ಮದಂಮಿಗೆ ಶರಣವರ್ಯ್ಯಂ । ನೆಮ್ಮಿ ಕರೆಯುವದೆಂತು ಮನುಜರು । ಸುಮ್ಮನೇ ಸಜ್ಜನರಕೃಪೆಗೆರವಾಗುತಿ ಹರಹಹಾ ॥ ೧೭ ॥

ಮುಂದೆ ತದ್ಧನಿಕಂಗೆ ಮೆಲ್ಲನೆ । ಬಂದು ಘಟಸಿದುದಲ್ಪಕಾಲದೊ । ಳಂದವಳಿಸುವ ದುರ್ಧರಕ್ಷಯರೋಗಮುದರಿಂದ ॥ ಕಂದಿ ಕುಂದಿ ಮಹಾವ್ಯಥೆ ಯೊಳಾ । ನಿಂದು ಚರಮಾವಸ್ಥೆಯಂ ದಲ್ । ಪೊಂದಿದೆನೆನುತ್ತವನು ಚಿಂತಿ ಸಿದಂ ಪ್ರಯಾಸದೊಳು ॥ ೧೮ ॥

ಶ್ರೀಯುತನೆ ಶರಣಪ್ರಸಾದಕೆ । ಬಾಯಿದೆರೆಯದೆ ಧಿಕ್ಕರಿಸಿ ಕ್ಷಯ । ಕಾಯನಾದೆ ಮದಾಂಧತೆಯೊಳಿನ್ನಾದೊಡುಂ ನೀನು ॥ ಕಾಯಜಾಂತಕಶರಣನು ಚಿತೋ । ಪಾಯಕರಕೃಪೆವಡೆದೊಡೊದಗಿದ । ಪಾಯಮಿದು ತೊಲಗುವದೆ ನುತ್ತಾ ಕೋವಿದಂ ನುಡಿಯೆ ॥ ೧೯ ॥

ಸುಪ್ರಸಾದಕ್ಕಲಸಬೇಡೆಂ । ದಾ ಪ್ರವೀಣಂ ಮೊದಲು ಪೇಳ್ದೊಡು । ಮಪ್ರಬುದ್ಧತೆಯಿಂದ ಕೇಳದೆ ಕೆಟ್ಟೆನಾನಕಟ ॥ ಕ್ಷಿಪ್ರದೊಳು ರೋಗವನು ಪರಿಹರಿ । ಪಪ್ರಮೇಯನ ಕೃಪೆವಡೆವ ದಿ । ವ್ಯಪ್ರಸಂಗವನೆಂತು ಕಾಂಬೆನೊ ಎಂದು ಯೋಚಿಸುತ ॥ ೨೦ ॥

ಇಂದುಧರಶರಣಪ್ರಸಾದವ । ತಂದು ಕೊಟ್ಟೊಡೆ ನಿನಗೆ ತಕ್ಕನಿ । ತಿಂದು ಪಣಮಂ ಕೊಡುವೆನಾನೆಂದೋರ್ವಗಣವರಗೆ ॥ ಅಂದು ಸೂಚಿಸಲದ ಕವಂ ಮನ । ದಂದು ಶರಣನ ಮನೆಗೆ ಭಿಕ್ಷೆಗೆ । ಬಂದು ಬೇಡಿದನಲ್ಲಿ ನೀಡ ಲ್ಕೇನುಮಿಲ್ಲದಿರೆ ॥ ೨೧ ॥

ಸುಮ್ಮನಿರ್ದಂ ಶರಣಪುಂಗವ । ನಿಮ್ಮನದೊಳಾ ಗಣವರಂ ಸು । ತ್ತಂ ಮಿಗೆನಿರೀಕ್ಷಿಸಿ ಸಮೀಪದೊಳಲ್ಲಿ ಬಿದ್ದಿರ್ದ ॥ ಬಿಮ್ಮನುಳ್ಳೆಯಗಡ್ಡೆಯೊಂದಂ । ಗಮ್ಮನೇ ತಕ್ಕೊಂಡು ಲೇಸನೆ । ನೆಮ್ಮಿ ಜೋಳಿಗೆಯೊಳು ಮಡುಗಿಕೊಂಡಂ ನಿಗೂಢದೊಳು ॥ ೨೨ ॥

ಅದನು ನಿರುಕಿಸುತೊಡನೆ ಶರಣಂ । ಸದಮಲನೆ ನೀನೊಯ್ಯುವೀ ಚೆಲು । ವೊದಗಿದುಳ್ಳಿಯಗಡ್ಡಿ ನಿನಗಲ್ಲಂ ಪರರಿಗಾಗಿ ॥ ಪದುಳದಿಂದಂ ಕೊಂ ಡುಪೋಗುವೆ । ಯಿದನು ಕೊಡುವದರಿಂದವರ ಬಾ । ಯ್ಗಿದುವೆ ಗಡ್ಡಿಯೆನಿಕ್ಕು ಮೆಂದಂ ಸಹಜಲೀಲೆಯೊಳು ॥ ೨೩ ॥

ಆಲಿಸಿದನೀ ಮಾತನಯ್ಯಂ । ಪೇಳಿ ತದ್ಧನಿಕಂಗದಂ ಕೊಡ । ಲಾಳಿ ಗೊಳ್ಳುತೆ ಶಿವಶಿವಾ ವೃತ್ಯುವಿನ ಮುತ್ತಿಗೆಯು ॥ ಮೇಳವಾದುದೆನುತ್ತ ಚಿಂತೆ ಯೊ । ಳಾಳುತತಿವೇದನೆಯೊಳಾತನ । ಕಾಲದೊಳ್ಮುಗಿಸಿದನು ಮಾನವಲೋಕ ಯಾತ್ರೆಯನು ॥ ೨೪ ॥

ಕರುಣದಿಂ ದುಷ್ಕರ್ಮಮಂ ಪರಿ । ಹರಿಸಲೆಂದು ಮಹಾಪ್ರಸಾದಕೆ । ಕರೆದ ಶರಣನವಚನವನುಪೇಕ್ಷಿಸಿ ಧನಾಸ್ವಿತನು ॥ ಮರಣಕೀಡಾದಂ ಬುಧೋ ತ್ತಮ । ನೊರೆದೊಡುಂ ತಾನೊಪ್ಪಲಿಲ್ಲಂ । ಧರಣಿಯೊಳ್ಧನಮುದಮುದೇಗೈಯದೊ ವಿಚಾರಿಸಲು ॥ ೨೫ ॥

ಸ್ವಜನದಾಕ್ಷಿಣ್ಯವನು ತೊರಿಪುದು । ಸುಜನರಂ ಮನ್ನಿಸಗೊಡದು ಬಹು । ಕುಜನಸಂಗವ ಪೆರ್ಚಿಪುದು ಕರುಣವನು ಕಳೆಯುವದು ॥ ಭುಜಗ ಭೂಷಣಪಾದಪೂಜಾ । ಭಜನೆಗಳ ಬಯಕೆಯನು ಕೆಡಿಪುದು । ಗಜಮಹಿಷ ಮದದಿಂದಧಿಕವೀ ಧನಮದಂ ಜಗದೆ ॥ ೨೬ ॥

ಪರರ ಯಶಮಂ ಸಹಿಸದಿರುವಂ । ನಿರುತಮಾತ್ಮಸ್ತುತಿಯನೆಳಸಂ । ದುರಭಿಮಾನಂಬಿಡಿದು ಬೇಡುವನುನ್ನತಾಸನವ ॥ ಮೆರಿಸುವಂ ತನ್ನೈಸಿರಿಯ ನೆನ । ಗೊರೆಯುದಾರೆಂಬೊಂದುಹೆಮ್ಮೆಯೊ । ಳಿರುವನರ್ಥಮುದಾಂಧನವಿವೇಕ ದೊಳು ಮೈಮರೆದು ॥ ೨೭ ॥

ಹಮ್ಮುಕೆಟ್ಟದು ಹಮ್ಮಿನಿಂ ಹರಿ । ಬೊಮ್ಮರಾಕೌಶಿಕನು ಕೆಟ್ಟರು । ಹಮ್ಮಿನಿಂದಮರಾಸುರನರರ್ಪಶುಗಳೆನಿಸುವರು ॥ ಹಮ್ಮುಪರತತ್ವಾನುಭೂತಿ ಯೊ । ಳುಮ್ಮಳಂಗುಡುತಿಹುದು ಜೀವಿಗೆ । ಹಮ್ಮುಪರಿಭವ ಬೀಜಮೆನಿಸು ವದಾಗಳದರಿಂದ ॥ ೨೮ ॥

ನಾನು ನಾವೆಂದಾಡದೀಚೆಗೆ । ನಾನು ನಾವೆಂದಾಡುವೆಡೆಯೊಳು । ನಾನು ರಾಗದಿನಿ*ವರೆನಿಪ ಶಬ್ದವನು ಬಳಿಸುತ್ತ ॥ ತಾನುಮಾ ಗುರುದೇವಿಯುಂ ಬಹು । ದೀನಭಾವದೆ ನುಡಿವುತಿರ್ದರು । ಭೂನುತಸುಶರಣರಿಗೆ ಹೇಯಮದೆನಿತೊ ಹಮ್ಮಿನೊಳು ॥ ೨೯ ॥

ಕುಂದದೊರ್ವ ಕಿರೀಟಮಶದಾ । ನಂದಘನನಿಜಗುಣಚರೇಂದ್ರಂ । ಚೆಂದಮಾಗೆ ಶಿವಾನುಭವಮಂಟಪವನುರೆರಚಿಸಿ ॥ ಸುಂದರಮಹಾಭಕ್ತಗಣ ವರ । ವೃಂದದಿಂದೊಡಗೂಡಿ ನಿತ್ಯಮ । ಮಂದಶಿವತತ್ವಾನುಭವಮಂ ಮಾಡುತಿರಲಲ್ಲಿ ॥ ೩೦ ॥

ಶರಣನಿದನರಿದಲ್ಲಿಗೆ ನಿರಂ । ತರದೊಳಾ ಸಮಯಕ್ಕೆ ನಡೆತಂ । ದೆರಗಿ ವಿನಯದಿನೆದುರೊಳೊಂದೇಕಾಲಿನಿಂ ನಿಂದು ॥ ಸರಸಮೆನಲಾಕರ್ಣಿಸುತ ತಾ । ನರೆಮುಗಿದ ನಯನಂಗಳಿಂ ಸುಖ । ಪರವಶದೊಳೋಲಾಡುತಿರ್ದಂ ಮಾನಸಮದೊಪ್ಪಿ ॥ ೩೧ ॥

ಅಲ್ಲಿ ನೆರೆದವರೆನಿತು ಪೇಳ್ದೊಡು । ಮೊಳ್ಪೆವಾತಿಂ ತೀರುವನಕಂ । ನಿಲ್ಲುತಿರ್ದಂ ಶಾಸ್ತ್ರದೊಳು ತಪ್ಪಾಗೆ ಪೇಳಿದೊಡೆ ॥ ಸೊಲ್ಲಿರೈಯಿನ್ನೊಮ್ಮೆ ಸಹಜದೆ । ಸಲ್ಲುವರ್ಥವನೆನ್ನುತಿರ್ದಂ । ಸೊಲ್ಲುತಿರ್ದಂಕೇಳ್ದೊಡವರಿಗೆ ಬೆಡಗಿನಿಂದಿವನು ॥ ೩೨ ॥

ಇವನ ಬೆಡಗಿನ ಮಾತಿನರ್ಥವ । ನವರೊಳಗೆ ಸಿದ್ಧಾರ್ಯನೆಂಬನು । ಭವಿಯರಿದು ಮಗುಳ್ದೆಲ್ಲರಿಗೆ ಬೋಧಿಸಲದಂ ಕೇಳ್ದು ॥ ತವಕದಿಂ ಹಾ ಹೌದೆಪ ಎನು । ತ್ತೊರೆವುದಕೆ ತಲೆದೂಗುತಿರ್ದಂ । ವರಶಿವಾನುಭವಾಮೃತದ ಸುಖಮೆಂತುಟೋ ಇವಗೆ ॥ ೩೩ ॥

ಬಲ್ಲತನದಭಿಮಾನವಿರ್ದೆಡೆ । ಯಲ್ಲಿ ಕೇಳಂ ಪೇಳನೇನುವ । ನೆಲ್ಲಿ ನಿರಹಂಕಾರಮಿಹುದಾ ತಾಣದೊಳು ಪೋಗಿ ॥ ಚಿಲ್ಲಲಿತಸಲ್ಲಾಪವೈಭವ । ದಲ್ಲಿ ವಿಹರಿಸುತಿರ್ಪನೀತಂ । ಬಲ್ಲಿದನೆನುತ್ತೊಪ್ಪಿ ನಂಬಿದರಿವನನವರೊಲೆದು ॥ ೩೪ ॥

* ಈ ಚಿಹ್ನದ ಸಂಕೇತವನ್ನು ಹಿಂದೆ ಓದುಗರಿಗೆ ಕೊಟ್ಟ ಸೂಚನೆಯಲ್ಲಿ ನೋಡಿರಿ.

ಆ ಶಿವಾನುಭವೈಕಮಂಡಲಿ । ಗೀ ಶರಣನೌತಣವನಿತ್ತಂ । ದಾಸಭಾವ ದೊಳೊಮ್ಮೆ ತತ್ಸನ್ಮಂಡಲಿಯೊಳುಳ್ಳ ॥ ಶ್ರೀಸುಖದ ನಾಲ್ವತ್ತುಜನರು । ಲ್ಲಾಸ ದಿಂದೀ ಶರಣನ ಪ್ರಸಾ । ದಾಶೆವಿಡಿದೈತಂದರೀ ಮಹಿಮೋದಯನ ಮನೆಗೆ ॥ ೩೫ ॥

ಅವರನೂಟಕೆ ಕುಳ್ಳಿರಿಸುವು । ತ್ಸವದೆ ಕುಂಟೋಜಿಯ ಮಠದ ಸು । ಪ್ರವಿಮಲಶ್ರೀಚನ್ನಬಸವೇಶ್ವರಮಹಾಸ್ವಾಮಿ ॥ ಸವಿನುಡಿಯನಾಡುತ್ತ ಮೆಲ್ಲನೆ । ತವೆ ಮಹಾನಸದಲ್ಲಿ ಪೊಕ್ಕೀ । ಶಿವಶರಣರೆಸಗಿರ್ದ ಪಾಕದ ಭಾಂಡಮಂ ನೋಡಿ ॥ ೩೬ ॥

ಗಡಿಗೆಯದು ಬಲುಸಣ್ಣದಿಹುದಾ । ಯಡಿಗೆಯೆವಿಪ್ಪ ಜನಕೆ ಸಾಲದು । ಬಿಡದೆ ನೀವಿನಿಸಿನಿಸು ಭುಂಜಿಸಿರೆಂದು ಸನ್ನೆಯೊಳು ॥ ನುಡಿಯುಲದಕವರೆಲ್ಲ ರೊಡಬ । ಟ್ಟೆಡೆಯಮಾಡಿಸಿಕೊಂಡರಿನಿಸಿನಿ । ಸೊಡನಿದಂ ತಿಳಿದೀ ಮಹಾತ್ಮಂ ಸಹಜಲೀಲೆಯೊಳು ॥ ೩೭ ॥

ಸಾಕು ಸಾಕೆಂಬನಿತು ಸಂತೃ । ಪ್ತೈಕಭಾವನೆಯಿಂದ ಮೇಣ್ಮೇ । ಣೀ ಕಪರ್ದಿಯ ಶರಣನೆಡೆಬಡಿಸಲ್ಕಲರದನು ॥ ಸ್ವೀಕರಿಸಿದರ್ಮ್ಮಧುರಮುಂಮಿಗೆ । ಪಾಕಮೆಂತದು ಸಾಲ್ದುದೆನ್ನುತ । ನೇಕತರದಿಂ ನುತಿಸಿದರು ಬಲುಸೋಜಿಗ ಮಿದೆಂದು ॥ ೩೮ ॥

ನಾವು ಧನಿಕರು ನಮ್ಮ ಮನೆಯೊಳು । ಸೇವಿಸುವ ಮೃಷ್ಟಾನ್ನಮದು ಶರ । ಣಾವತಂಸಂ ನೀಡಿದೀಯಂಬಲಿಗೆ ರುಚಿಯಿಂದ ॥ ಸಾವಿರದೊಳೊಂದಕ್ಕೆ ದಲ್ಪುರಿ । ಭಾವಿಸಲ್ಸರಿಬಾರದೆಂದವ । ರೀ ವಿನಯಮಣಿಭೂಷನಂ ನುತಿಸಿದರು ಶಿವನೆಂದು ॥ ೩೯ ॥

ಶರಣನಾಲಯದೊಳಗೆ ಸವಿಗೂ । ಳ್ದೊರೆವುದೆಂದತ್ಯಾಶೆಯಿಂದೊ । ಲ್ದರೆ ಮುದುಕನುಂ ಭೋಜನಪ್ರಿಯನಾದ ಗಣನೋರ್ವಂ ॥ ಕರೆಯದಾ ಮಂಡಲಿ ಯೊಡನೆ ಬಂ । ದುರುತರದ ಸಕ್ಕರೆವೆರೆದ ಸವಿ । ಯಿರುವ ಹುಗ್ಗಿಯಿದೆಂದು ತಿಳಿದಾಯಂಬಲಿಯುನವನು ॥ ೪೦ ॥

ಹೆಚ್ಚಿಗಂ ವೊದಲೆಡೆಬಡಿಸಿಕೊಂ । ಡಿಚ್ಚೆಯಿಂ ತುತ್ತೆತ್ತಿ ಬಾಯಿಗೆ । ಹಚ್ಚಿನಿರುಕಿಸಿ ಸಪ್ಪಗಿಪ್ಪಂಬಲಿಯಿದೆಂದರಿದು ॥ ನುಚ್ಚಿಗೇಕಿನಿಬರನು ಕರೆದನೊ । ಹುಚ್ಚುಶರಣನೆನುತ್ತಪಂ ಬಲು । ರೊಚ್ಚಿಗೇಳ್ದುಣ್ಣದಲೆ ಸಿಡಿಮಿಡಿಗೊಂಡನಾತ್ಮದೊಳು ॥ ೪೧ ॥

ಎಡೆಬಡಿಸಿಕೊಂಡನಿತನಿನಿಸುಂ । ಬಿಡದೆ ಭುಂಜಿಪ ನಿಯಮವಿಹುದೀ । ಮೃಡಶರಣನಾಲಯದೊಳದರಿಂದುಣ್ಣಬೇಕೆಂದು ॥ ತೊಡಗಿದೊಡೆ ನಿಸ್ಸಾರಮಾದೀ । ಯೊಡಕಲಿನಸಂಗಟಿಯು ಗಂಟಲೊ । ಳೊಡನಿಳಿಯದೇಗೈವುದೆಂದಾಲೋಚಿಸಿದನವನು ॥ ೪೨ ॥

ಬಹಳಭಸಿತವ ಪಣೆಗೆ ಧರಿಸುವ । ಬಹಳಶಿವಪೂಜೆಗಳನೆಸಗುವ । ಬಹಳತರದಿಂ ವಚನಶಾಸ್ತ್ರವ ಪೇಳುವಾಲಿಸುವ ॥ ಬಹಳಶೀಲವ ಮಾಡಿ ತೋರುವ । ಬಹಳಜನರಂ ಬಲ್ಲೆನೀ ಪರಿ । ಬಹಳನಟಪರು ಪೊರಗೆ ಮನೆಯೊಳು ಪುರುಳಿರುವದಿಲ್ಲ ॥ ೪೩ ॥

ಏಕೆ ಬಂದೆನೊ ಬರುವ ಜನರೊಡ । ನೇಕೆ ಪಿರಿದೆಡೆಬಡಿಸಿಕೊಂಡೆನೊ । ಏಕೆ ಯೋಚಿಸದಾದೆನೋ ಬಡಭಿಕ್ಷವೆಂಬುದನು ॥ ಕಾಕುಮನಸಿನ ಕಡುದುರಾಶೆಯ । ದೀ ಕುಶಲರೊಳ್ಪ್ರಕಟಮಪ್ಪುದು । ಸಾಕು ಬೇಕೆಂದುಸುರಲಸದಳವೆಂದು ಬಳಲಿದನು ॥ ೪೪ ॥

ಸುತ್ತನೋಡುವನೊಮ್ಮೆ ವೋರೆಯ । ನೆತ್ತಿ ಸಾಕೆಂದೆಂಬಭಾವವ । ನೊತ್ತಿ ತೋರುವನೊಮ್ಮೆ ಮೈಮುರಿಯುವನು ತಾನೊಮ್ಮೆ ॥ ತುತ್ತನಾಸ್ಯದೊಳಿಟ್ಟು ಪಲ್ಗಳಿ । ನೊತ್ತರದೊಳಾಯಾಸದಿಂ ಜಗಿ । ವುತ್ತ ನುಂಗುವನೊಮ್ಮೆಯೀಪರಿಮಾಳ್ಪುದಂ ನೋಡಿ ॥ ೪೫ ॥

ಏನು ಮಾಹೇಶ್ವರನೆ ನಿನಗಿ । ನ್ನೇನು ಬೇಕಾಗಿರ್ಪುದೆಲ್ಲರಿ । ಗೇನು ಕಾರಣವಿಂದು ಹಿಂದಾದೆಯೆನುತಾತನನು ॥ ಶ್ರೀನಿರಂಜನನಿಜಗುಣಂ ಸ । ನ್ಮಾನಮುಂ ಮಿಗೆ ಕೇಳಲಾತಂ । ಭೂನುತನೆ ಸಪ್ಪಿರುವದಿದನಾರುಣ್ಣಬೇಕೆಂದಂ ॥ ೪೬ ॥

ಅದನು ಕೇಳ್ದರಿದೀ ಶರಣನವ । ನೆದುರಿನೊಳು ಕುಳಿತೆಲವೊ ಪ್ರಮಥನೆ । ಯಿದು ಪ್ರಸಾದಂ ಮಧುರಮಿರ್ಪುದು ಸಪ್ಪಿರುವದುಂಟೆ ॥ ಪದೆದು ಭುಂಜಿಸೆನುತ್ತೊರೆಯಲವ । ನದನು ಸವಿದನು ಬಹುಮಧುರಮೆನೆ । ಹೃದಯದೊಳು ಕೌತುಕವನಾಂತಾಕ್ಷಣದೊಳುತ್ಸವದೆ ॥ ೪೭ ॥

ಸುಪ್ರಸಾದಮಿದೆಂದು ನಂಬದ । ತಿಪ್ರಯಾಸಂಬಟ್ಟನುಣ್ಣಲು । ಸುಪ್ರಸಿದ್ಧಮಹಾಪ್ರಸಾದಮಿದೆಂದು ಬೋಧಿಸಿದ ॥ ಅಪ್ರತಿಮಶರಣೋಪದೇಶೋ । ಕ್ತಿಪ್ರಭಾವದಿನಾ ಗಣೇಂದ್ರಂ । ಕ್ಷಿಪ್ರದೊಳ್ಭುಂಜಿಸಿದನಮೃತಪ್ರಾಯಮೆನಲರರೆ ॥ ೪೮ ॥

ಯಾಗದಿಂ ಬಹುದಾನದಿಂದಂ । ಯೋಗದಿಂ ಜಪತಪಗಳಿಂ ನರ । ನಾಗಮನುಮುನಿದನುಜದಿವಿಜರಿಗೆಂದುಮೊದಗದಿಹ ॥ ರಾಗಹರನ ಪ್ರಸಾದವದು ತನ । ಗಾಗಿ ಸುಲಭದಿನೊದಗಲದರುಪ । ಭೋಗಮುಂ ಸಲೆ ಪೊಂದದಾಗಣನಜ್ಞತನಮೆನಿತೋ ॥ ೪೯ ॥

ಶರಣನಂಬಲಿಯೇ ಪ್ರಸಾದಂ । ಪರಮಸೌಖ್ಯದಮೆಂದು ನಂಬಿದ । ಪುರುಷರಿಗೆ ಸವಿಯಾಗಿ ಪರಿಣಮಿಸುವದು ಕೂಳೆಂದು ॥ ಅರಿದ ನರಗುರಿಗಳಿಗರುಚಿಯಾ । ಗಿರುವದು ಪ್ರಸಾದಮಿದು ಮಾಹೇ । ಶ್ವರರಕುಲದೊಳ್ಪುಟ್ಟಿದೊಡದೇಂ ಫಲಿಸದಾಯ್ತವಗೆ ॥ ೫೦ ॥

ಕೂಳತಿಂಬುವ ಮಾನವರ್ಸಾವಿ । ಗೂಳಿಗಾಡಿ ಮೃಗಂಗಳಂದದೆ । ಬಾಳುತಿರ್ಪರು ಭೂತಕಾಯವ ನಚ್ಚಿಮೋಹದೊಳು ॥ ಶೂಲಪಾಣಿಯಸುಪ್ರಸಾದವ । ಲೋಲಮನದಿಂ ಸವಿವ ಸದ್ಭ । ಕ್ತಾಳಿಪೂತಾಂಗವನು ಪಿಡಿದಮೃತದೊಳು ರಮಿಸುವರು ॥ ೫೧ ॥

ಕಿವಿಗಪಸ್ವರಮೆಂತಸಹ್ಯ । ತ್ತವನು ಪುಟ್ಟಿಪುದಂತಸಂಸ್ಕೃತ । ವಿವಿಧಪಾಕಂ ಭಕ್ತಚಿತ್ತಕಶುಭವನಾಗಿಪುದು ॥ ನವರಸಾಲವನುಳಿದು ಬೇವಂ । ಸವಿವ ಕಾಗೆಯುವೊಲ್ಪ್ರಸಾದವ । ನವನಿತಳದೊಳು ಬಿಟ್ಟು ಭವಿಗಳು ಕೂಳಿಗೆಳಸುವರು ॥ ೫೨ ॥

ಕೂಳಿನಿಂ ಭವಬುದ್ಧಿಯೊಗೆವುದು । ಶೂಲಧರನಪ್ರಸಾದದಿಂ ಮುನಿ । ಜಾಲಸನ್ನುತಭಕ್ತಿಜನಿಪುದು ಮೂಢಮಾನವರು ॥ ತಾಳದರ್ಥಿಸುತಿಹರು ಕೂಳಂ । ಮೇಲೆನಿಪ ಶಂಭುಪ್ರಸಾದವ । ಲೀಲೆಯಿಂದರ್ಥಿಪರು ಜಾಣರು ಶಿವ ಸುಖಕ್ಕಾಗಿ ॥ ೫೩ ॥

ಖಗಮೃಗಕ್ರಿಮಿಕೀಟಕಾದಿಗ । ಳಿಗೆ ನಿರಂತಂ ದೊರೆವ ಕೂಳ್ಜೀ । ವಿಗಳೊಳಧಿಕನೆನಿಪ್ಪ ನರನಿಗಸಾಧ್ಯವೇ ನಾಡೆ ॥ ಜಗದೊಳೀ ಮಹಿತಪ್ರಸಾದಂ । ನಗಸುತಾಪತಿಭಕ್ತಗಲ್ಲದೆ । ಬಗೆಯೆ ಮಾನವ ಕುಲಕಸಾಧ್ಯಂ ಚೆನ್ನಿವಾಸವಿದು ॥ ೫೪ ॥

ಆ ಮಹಾಪಾಮರನ ರೀತಿಯ । ನಾ ಮಹಿತಸಂಘದವರೀಕ್ಷಿಸಿ । ವಾಮದೇವನ ದಿವ್ಯಚೇಷ್ಟೆಯಿದೆಂದೆನುತ ನಕ್ಕು ॥ ಪ್ರೇಮದಿಂದಪ್ಪಣೆಯನುರೆ ಪಡೆ । ದೀ ಮಹಾತ್ಮನ ದಿವ್ಯಲೀಲಾ । ಸ್ತೋಮಮಂ ಪೊಗಳುತ್ತ ಮಗುಳ್ದರು ತಮ್ಮ ಮನೆಗಳಿಗೆ ॥ ೫೫ ॥

ಶರಣಚರಣಾಂಬುಜದ ಸೇವೆಯೆ । ಪರಿಭವವ ಪರಿಹರಿಪುದೆಂದಾ । ದರದೆ ಗುರುಹಿರಿಯರ್ಕಳಾಡುವ ವಚನಮಂ ಕೇಳ್ದು ॥ ಶರಣುಬಂದೆನು ಹರಶರಣರೊಳು । ಪಿರಿದು ಕಿರಿದೆಂಬರಿವನಡಗಿಸಿ । ಪೊರೆಯುವರ ದಾಸತೆಯನೆನಗೊಲಿದಿತ್ತು ವೀರೇಶಾ ॥ ೫೬ ॥

ಅಂತು ಸಂಧಿ ೧೧ಕ್ಕೆ ಪದಗಳು ೬೮೨.

ಮಂಗಲಂ.

ಶ್ರೀ ಗುರುಸಿದ್ಧಬಸವಾಯ ನಮಃ



# ಹನ್ನೆರಡನೆಯ ಸಂಧಿ ಪ್ರಾರಂಭ.

ಸೂಚನೆ ॥ ಮಗನ ಮೃತಿಯೊಳು ಧೃತಿಗೆಡದೆ ನಾ । ರಿಗೆ ಪ್ರಸಾದಂಗೊಡಲು ಯತ್ನಿಸಿ । ಮೃಗವಿಷಾಣೋದ್ಧತಿಯ ಸೈರಿಸಿ ಶರಣನೊಪ್ಪಿದನು ॥ ಪಲ್ಲ ॥

ಪದ ॥ ಶ್ರುತಿಗಳೊಳು ವೇದಾಂತತಂತ್ರ । ಪ್ರತತಿಯೊಳು ಸನ್ಮಂತ್ರಕುಲದೊಳು । ಸ್ಮೃತಿಸಮೂಹದೊಳಖಿಲ ಶಾಸ್ತ್ರಪುರಾಣನಿವಹದೊಳು ॥ ವಿತತಮೆನೆ ಪ್ರತಿಪಾದ್ಯವಾದ । ಪ್ರತಿಮವಸ್ತುವೆ ನೀನೆನಿಸಿ ಕಾ । ಮಿತಫಲಂಗಳ ನೀವೆ ಭಕ್ತರಿಗಭವ ಪೊರೆಯೊಲೆದು ॥ ೧ ॥

ಮನಸಿಜಹರಾಕಾರಶರಣನ । ತನುಜನೆನಿಸಿದ ಚೆಲುವ ಶ್ರೀಕಂ । ಠನು ದಿನದಿನಂ ಪಾಠಶಾಲೆಯೊಳೋದಿ ಭೋಜನಕೆ ॥ ಮನೆಗೆ ಪರಿತಂದಾತ್ಮಜನನೀ । ಜನಕರಿಗೆ ಮಣಿದಯ್ಯಕೇಳೀ । ದಿನದ ಪಾಠವನೆಂದು ಪೇಳುತ್ತಿರ್ದನನು ನಯದೆ ॥ ೨ ॥

ಸಾಲೆಯೊಳು ಕೆಲಲಿಂಗವಿಲ್ಲದ । ಬಾಲರೊಡನಾನೋದಲಾರೆನು । ಫಾಲದೊಳು ಶ್ರೀಭಸಿತಲೇಪನವಿಲ್ಲದೈದುವರು ॥ ಶೀಲವಿಲ್ಲಂ ಸ್ನಾನವಿಲ್ಲಂ । ಮೈಲಿಗೆಯೊಳಿರುತಿರುವರವರೊಳು । ಮೇಳಯಿಸಿ ಕುಳ್ಳಿರುವದೆಂತೈಯೆಂದುಸುರುತಿರ್ದಂ ॥ ೩ ॥

ಕೆಟ್ಟಮಾತುಗಳಾಡುತಿರ್ಪರು । ಸಿಟ್ಟಗೇಳುತ್ತಿಹರು ಸುಮ್ಮನೆ । ಕೊಟ್ಟಯಂ ಪೇಳ್ವೆಳೆಯರೊಳು ಗೆಳೆತನವ ಬೆಳಿಸುವರು ॥ ನೆಟ್ಟನಾ ಶಿಕ್ಷಕರು ತೋರಿದ । ಕಟ್ಟಳೆಯನೇ ಮುರಿವುತಿರ್ಪರು । ನಿಟ್ಟಸರು ಹಿರಿಯರನೆನುತ್ತೊರೆವಂ ಕುಮಾರಕನು ॥ ೪ ॥

ಶಿವನಪೆಸರಂ ನುಡಿಯುದಿರ್ಪರು । ಶಿವನಕಥೆಯಂ ಪೇಳದಿರುವರು । ಶಿವನಪದಮಂ ನೆನೆಯದಾಟದೆ ಬಿನದಿಸುವರಲ್ಲಿ ॥ ಶಿವನವರೊಳುಳ್ಳೀ ನಡತೆಯಂ । ತವೆ ತೊಲಂಗಿಸಿಯೊಳ್ಳೆಗುಣಮಂ । ತವಕದಿಂ ಕೊಡಲಾಗದೇಕೆನುತಿರ್ದನೊಮ್ಮೊಮ್ಮೆ ॥ ೫ ॥

ಆರುವರ್ಷಂ ತುಂಬಿದೀ ಸುಕು । ಮಾರಗೀ ಶೀಲತ್ವವೀ ಸುವಿ । ಚಾರವೀ ವರನೀತಿಯೀ ಪಾತಕಭಯಂ ಮತ್ತೆ ॥ ಸಾರಭೂತದಯಾಪರತ್ವಂ । ಧಾರುಣಿಯೊಳೊದಗುವೊಡಿವನ ಸಂ । ಸ್ಕಾರಬಲಮೆಂತುಟೊಯೆನುತ್ತಿರ್ದರ್ತಿಳಿದ ಜನರು ॥ ೬ ॥

ಇರೆಯಿರುತ ಪರ್ಬಿದುದು ಸೊನ್ನಲ । ಪುರದೆ ಗುರುಳೆಯುಬೇನೆಯುದನಂ । ದರಿದು ಶರಣಾನುಜರೆನಿಪ ಮಲ್ಲೇಶ್ವರಂ ಮತ್ತೆ ॥ ಕಿರಿಯುಪ್ರಭು ನಾಮಕನು ಪೆಳದಿರ್ । ತರುಳನಂ ಕರಕೊಂಡುಪೋದರು । ಭರದೆ ಶೇಳಿಗೆಯೆಂಬ ಪಳ್ಳಿಗೆ ಶರಣರಂ ಕೇಳ್ದು ॥ ೭ ॥

ಪೋದಮರುದಿನದಲ್ಲಿ ಕಂಠನಿ । ಗಾದುದಾಮಯುವದನು ಕಂಡತಿ । ಖೇದಮಾನಸರಾಗಿ ಚಿಕ್ಕಪ್ಪಗಳು ಹೌಹಾರಿ ॥ ಈ ದುರಾಮಯುದಿಂದ ಮಗನಂ । ವೇದಘೋಟನೆ ರಕ್ಷಿಸೈ ತ್ವ । ತ್ಪಾದಮಂ ಮರೆಹೊಕ್ಕೆವೆಂದಳಲಿದರು ಬಾಯ್ಬಿಟ್ಟು ॥ ೮ ॥

ಎಮ್ಮ ಮೂವರಿಗೀತನೋರ್ವನೆ । ಸಮ್ಮತಿಪ ಸುಕುಮಾರನಿರ್ಪನು । ನೆಮ್ಮಿಕೊಂಡಿಹೆವೀ ಕುಲಾಂಬುಧಿಚಂದ್ರನಂ ದೇವಾ ॥ ಸಮ್ಮದಂಮಿಗೆ ಪೊರೆದು ನೀಂ ಮನ । ದುಮ್ಮಳವ ಪರಿಹರಿಸು ನಿನ್ನಡಿ । ಯಂ ಮರೆಯುವೆಂದೆಂದುಮೆಂದಳಲಿದರವರ್ಪಲುಬಿ ॥ ೯ ॥

ಘಟಿಸಿದಾಮಯುಬಾಧೆಗಿಂ ಸಂ । ಕಟದೆ ಚಿಕ್ಕಪ್ಪಗಳಳಲುವು । ತ್ಕಟತರವ್ಯಥೆ ತನಗೆ ಬಲುಪಿರಿದಾಗಿ ಕಂಠಯುನು ॥ ಕಟಕಟಾ ಸೈರಣಿಯನೆಲೆ ಧೂ । ರ್ಜಟಿಯೆ ಕೊಡು ನೀನಿವರಿಗೆನುತಂ । ನಿಟಲದೊಳು ಕರಸಂಪುಟವನಿಟ್ಟುರಚಿದನು ಬಿಡದೆ ॥ ೧೦ ॥

ಇವರಿಗೆ ಸಮಾಧಾನಮಂ ಪೇ । ಳುವದಿದೆನ್ನಿಂ ಸಾಧ್ಯಮಲ್ಲಂ । ತವೆ ಜನಕನೈತಂದೊಡಿವರಂ ಸೈತಿರಿಸುತಿಹನು ॥ ತವಕದಿಂದಾ ಮಹಿಮನಂ ಬರಿ । ಸುವದುಚಿತಮೆಂದರಿದೊರೆದನಾ । ಕುವರನವರಿಗೆ ತನ್ನ ಪಿತನಂ ಕರಿಸಿರೆಂದೆನುತ ॥ ೧೧ ॥

ಶರಣಗುರುದೇವಿಯರನವರಾ । ತರುಳನನುಮತಿವಿಡಿದು ತಳುವದೆ । ಬರಿಸಲೀ ಪಿತಮಾತೆಯರ್ನರಳುವ ಕುಮಾರನನು ॥ ನಿರುಕಿಸಿ ಶಿವೇಚ್ಛಾನುಸಾರಂ । ಜರಗುತಿಹ ಕಾರ್ಯವ ನಿರೋಧಿಪ । ಪುರುಷರಾರೆಂದೆಂದರಣುಗನ ಹತ್ತಿರದೆ ಕುಳಿತು ॥ ೧೨ ॥

ಜನನಿ ತನಯುನಮೈದಡವಿ ಬಲು । ಕನಿಕರದಿನೈ ಪುತ್ರ ನಿನ್ನಯ । ತನುವಿನೊಳು ಜನಿಸಿದ ರುಜಾಯಾತನೆಯದೆಂತಿಹುದು ॥ ಎನುತ ಬೆಸಗೊಳಲವನು ಜನನೀ । ಜನಕರಂ ಕಡೆಗಣ್ಗಳಿಂದಂ । ಘನತರಾಪದ್ಭಾವಮುಂಮಿಗೆ ನೋಡಿ ಕೈನೀಳ್ದು ॥ ೧೩ ॥

ಮಲಗಿದಲ್ಲಿಯೆ ತತ್ಪದಗಳಂ । ನಿಲುಕಿಸಿ ವಲಂ ಮುಟ್ಟಿ ನಿಜಕರ । ಜಲಜಮಂ ಫಾಲದೊಳಮರ್ಚುತೆ ಮಾತೆ ನೀಂ ಕೇಳೆ ॥ ತಿಳಿಯದೀ ಚಿಕ್ಕಪ್ಪಗಳು ಬಿಡ । ದಳುವ ದುಃಖಂ ಬಾಧಿಪುದು ಸಂ । ಗಳಿಸಿದ ರುಜಾಬಾಧೆಗಿಂ ಮೇಲಾಗಿ ಪಗಲಿರುಳೆ ॥ ೧೪ ॥

ಒರೆದು ನೀವೀ ಪಿರಿಯರಂ ಸೈ । ತಿರಿಸಿರೆನಗಾನಂದಮಪ್ಪುದು । ಬರಿದೆ ಶೋಕಿಸಲೇನು ಫಲಮುಗಜಾಧಿಪಂ ಜಗವ ॥ ನೆರೆ ಸೃಜಿಸಲುಂ ಪೊರೆಯಲುಂ ಸಂ । ಹರಿಸಲುಂ ಸುಸಮರ್ಥನದು ವಿ । ಕ್ಕರಿಗಸಾಧ್ಯಂ ಮರೆದರೇಕಿವರಿದನೆನುತ್ತೊರೆಯೆ ॥ ೧೫ ॥

ತನಯುನಾಡಿದ ವಚನಮಂ ಕೇ । ಳ್ದನುಜರಿಗೆ ತಾಳ್ಮೆಯನು ಬೋಧಿಸಿ । ದನು ಜನಕನನಿತರೊಳೆ ತರುಳನರೋಗವಾರ್ತೆಯನು ॥ ಜನರಿನರಿದು ನಿಲಂಗಿಸಂಗಾ । ರ್ಯನೆನಿಪೀ ಶರಣಪ್ರಿಯಸಖಂ । ಮನೆಗೆ ಬಂದಂ ಚೆನ್ನಮಲ್ಲಾರ್ಯನೆನಿಪವನೊಡನೆ ॥ ೧೬ ॥

ನೋಡಿದಂ ಬಾಲನನುಪಾಯುವ । ಮಾಡಿಸುವೆನಿವಗೆಂದವಂ ಮಾ । ತಾ ಡಲದನಾಲಿಸಿ ಯುಗದಗಿಗದಗಳವೇಕಾರ್ಯ ॥ ಕೂಡಿದಾಮಯಮೋಚನಾ ರ್ಥಂ । ರೂಢಿಯೊಳು ಶಿವಭಕ್ತಜನರಿಗೆ । ಮಾಡಿದವರಾರೌಷಧೋಪಾಯ ವನು ಪೂರ್ವದೊಳು ॥ ೧೭ ॥

ಪತಿಯೆನಿಸಿದೀ ಲಿಂಗಕಲ್ಲದೆ । ಸತಿಯೆನಿಪ ಶಿವಶರಣಗುಂಟೇ । ಕ್ಷಿತಿ ಯೊಳೀ ಬಾಲನೊಳು ಘಟಿಸಿರ್ದಾಮಯದ ಗುರುತು ॥ ಖತಿಯನಾನುವದು ಚಿತಮಲ್ಲೆಂ । ದತಿಸಮಾಧಾನವನು ಮಾಡುತ । ಹಿತವಚನಮಂ ಪೇಳ್ದನೀ ದುಃ ಖಾಂಬುದಾನಿಲನು ॥ ೧೮ ॥

ಪಡಿನುಡಿಯನಾಡದಲೆ ಸುಮ್ಮನೆ । ನಡೆದನೀತನದೃಢವಿಚಾರದ । ಬೆಡ ಗಿದದ್ಭುತಮೆನುತಲಾ ಮಾಹೇಶ್ವರಂ ಮುಂದೆ ॥ ನಡುವಿರುಳೊಳಾ ಕಂಠನೆಚ್ಚರು। ಗೆಡದೆ ಗಿರಿಜಾಪತಿಯಧ್ಯಾನವ । ಪಿಡಿದು ಗುರುದೇವೋ ಮಹಾದೇವೋ ಎನುತ ನುತಿಯ ॥ ೧೯ ॥

ಮಾಡತೊಡಗಿದನಾಗ ಮಾತೆಯು । ನೋಡಿ ಹರುಷಂಗೂಡಿಯೇಕೈ । ನಾಡೆ ಪ್ರಾತಃಸ್ತೋತ್ರಮಂ ನೀಂ ಮಾಳ್ಪೆ ದಿನಕರನು ॥ ಮೂಡಲಿನ್ನೀರ್ಜಾವ ಮಿಹುದೆನೆ । ಕೂಡಿರುವದೆನಗುದಯಮುದರಿಂ । ಮಾಡುವೆನು ನಾನೀಗಳಾ ಪ್ರಾತರ್ನುತಿಯನೆಂದು ॥ ೨೦ ॥

ಹರಮನುವನೆಡೆವಿಡದೆ ಕರಮು । ಚ್ಚರಿಸುತೇನೊಂದೆಡರನಾನದೆ । ಪರಮಶಿವನೊಳ್ಬೆರೆದನಾತಂ ಶಿವಶಿವಾ ಎನುತ ॥ ತರುಳನಂ ಪಿಡಿದೆತ್ತಿ ಮೈ ದೊಳೆ । ದೊರಸಿ ಭಸಿತವ ಪೂಸಿ ವಾಸಿನೊ । ಳೊರಗಿಸಿದಳಾ ಮಾತೆ ಮಡಿಯಂ ಪೊದಿಸಿ ಹರುಷದೊಳು ॥ ೨೧ ॥

ಬಳಿಕಲಾ ದಂಪತಿಗಳುತ್ಸವ । ದಳೆದು ಸಿದ್ಧೇಶ್ವರವಚನಸುಖ । ದೊಳಗೆ ಪರಿಣಮಿಸುತ್ತ ಕುಳ್ಳಿರಲಾ ಸಮಯದಲ್ಲಿ ॥ ಎಳೆಯನಾಮಯವೆಂತಿರು ವದೋ । ತಿಳಿಯಲೆಂಬಾ ಕಳಕಳಿಕೆಯಿಂ । ಕೆಳೆಯರನೊಡಂಗೊಂಡು ಬಂದಂ ಸಂಗಯಂ ಮುಗುಳ್ದು ॥ ೨೨ ॥

ಭಸಿತದಿಂ ಕಂಗೊಳಿಸುವಾ ಮೃತ । ಶಿಶುವಿನಂ ಸಿದ್ಧೇಶವಚನವ । ನೊಸೆದೊರೆವ ಶಿವಶರಣನಂ ಸಮ್ಮುಖದೊಳಾಲಿಸುವ ॥ ಬಿಸಜಮುಖಿಗುರು ದೇವಿಯುಂ ದೀ । ಪ್ತಿಸುವ ದೀಪದಬೆಳಗಿನೊಳು ಕಂ । ಡುಸುರಿಡುತ್ತೀಶರಣ ನೆದುರೊಳು ನಿಲ್ಲಲಾಕ್ಷಣದೆ ॥ ೩೩ ॥

ಅಪ್ಪಗಳ್ಪರಿತಂದರೀ ಸಿ । ದ್ಧಪ್ಪನಮಹಾವಚನಶಾಸ್ತ್ರ । ಕ್ಕೊಪ್ಪಿ ಬಂದರು ಬನ್ನಿರೆಪ ಮೂರ್ತವನು ಮಾಡಿರೆಪ ॥ ಅಪ್ಪಗಳ್ಕುರಿರುಳೊಳಿರದೈ । ದಿಪ್ಪುದೇ ಬಹುಭಾಗ್ಯವೆನುತಂ । ತಪ್ಪದೆರಗಿದನೀ ಮಹಾತ್ಮಂ ಪತ್ನಿಯೊಡಗೂಡಿ ॥ ೩೪ ॥

ಅಸುದೊರೆದ ಪಸುಳಂಗಿನಿಸುಶೋ । ಕಿಸದೆ ಜಾಯಾಪತಿಗಳೀರ್ವರು । ಮಿಸುಪ ಸುಖಸಂತೋಷಮುದ್ರಾಕಲಿತಮುಖರಾಗಿ ॥ ಅಸಮಸಿದ್ಧೇಶ್ವರವಚ ನಚಿ । ದ್ರಸವನುಣ್ಣುತ ಕುಳಿತಿರುವದಿದು । ಪೊಸತೆನುತ್ತಾಡಿದರು ಮಾಹೇಶ್ವ ರನು ತತ್ಸಖರು ॥ ೩೫ ॥

ನಿಮ್ಮ ವಸ್ತುವು ನಿಮಗೆ ಸಲ್ಲಿದು । ದುಮ್ಮಳವದೇಕಿವರ್ಗೆ ಬರಿಚೀ । ಲಂ ಮಹೀತಲದಲ್ಲಿ ಬೀಳ್ದಿಹುದಿದನು ಕೊಂಡೊಯ್ದು ॥ ಗಮ್ಮನೇ ಸಂಸ್ಕರಿಸ ಬಹುದೆಪ । ಹಮ್ಮಿನಂಕುರವೆನಿಪ ಮೋಹ । ಕ್ಕಂ ಮನಂಗುಡೆ ಪ್ರಮಥಪುಂಗವರೊಪ್ಪದಿರುವರೆಪ ॥ ೩೬ ॥

ಪಡೆದವರಿಗೊರೆದೊಗೆಯಲಿಲ್ಲಂ । ಕಡೆಗಿವರ ಬೆಸನವ ಪಡೆದು ತಾಂ । ಮಡಿಯಲಿಲ್ಲಂ ನಡುವೆರಡುದಿನಮಿವೆರಬಗೆಯಂತೆ ॥ ಕಡುಸುಖವನುರೆ ಪೊಂದಲಿಲ್ಲಂ । ಬಿಡದೆ ಕರ್ಮಾಧೀನನೆನಿಸಿದ । ಹುಡುಗನಂ ಮಮಕರಿಪುದೇತಕ್ಕೆನಲವರು ಮರುಗಿ ॥ ೩೭ ॥

ಶರಣಕರುಣಾಪಾತ್ರರಾದಾ । ಪಿರಿಯರುಂ ಪ್ರಮಥಾಗ್ರಗಣ್ಯರು । ನೆರೆದು ತತ್ಸುಕುಮಾರನ ಸಮಾಧಿಕ್ರಿಯೆಯ ತೀರ್ಚೆ ॥ ಪರಿಪರಿಯೊಳೀ ದಂಪತಿಗಳುರು । ತರದೃಢವಿರಾಗತ್ವಮುಂ ಜನ । ವರಿಯೆ ನುತಿಸಿದರಿವರು ನಿಸ್ಸಂಸಾರಿಗಳೆನುತ್ತ ॥ ೩೮ ॥

ಒಂದುಪ್ರಸ್ತಾವದೊಳಗೀ ಶರ । ಣೇಂದುಸಂದರ್ಶನನಿಮಿತ್ತಂ । ಚೆಂದ ಮಾಗೆ ಚಿತಾಪುರದ ಶಾಂತಪ್ಪನೆಂಬೋರ್ವ ॥ ಕಂದುಗೊರಲನ ಭಕ್ತನತಿ ಮುದ । ದಿಂದ ಬಂದು ಕಿರೀಟಮಠದೊಳ । ಗಂದುಳಿದನಾಪ್ತೇಷ್ಟಬಂಧುಕು ಟುಂಬಸಹಮಾಗಿ ॥ ೨೯ ॥

ತನಗೆ ತನುಭವರಿಲ್ಲದುದರಿಂ । ಘನದಯಾಮಯಸಿದ್ಧರಾಮೇ । ಶನ ಚರಣಮಂ ಕೂರ್ತು ಸುತರಂ ಬೇಡಬೇಕೆಂದು ॥ ನೆನೆವುತಾ ಶಾಂತಪ್ಪನ ರ್ಧಾಂ । ಗಿನಿಯು ತನ್ಮಠವೇದಿಕಾಗ್ರದೆ । ವನಿತೆಯರಿನೊಡಗೂಡಿ ಕುಳ್ಳಿರ್ದಳ್ವಿ ನೋದಿಸುತಾ ॥ ೩೦ ॥

ಅನಿತರೊಳು ವೀರೇಶಶರಣಂ । ಸನುವುತಂಮಿಗೆ ಬಂದು ತಾನಾ । ವ ನಿತೆಯೆದುರೊಳು ನಿಂದು ಜೋಳಿಗೆಯಿಂ ಪ್ರಸಾದವನು ॥ ಕನಿಕರದೆ ತೆಗೆದಾ ಜನನಿ ಕೊ । ಳ್ಳೆನುತ ಕೊಡಹೋಗಲ್ಕಿವನ ಬಡ । ತನದ ವೇಷವ ಕಂಡು ಮನದೊಳು ದ್ರವ್ಯಮದದಿಂದ ॥ ೩೧ ॥

ಸಾವುಕಾರನ ಮಡದಿಯಾದೆನ । ಗಾವನೋ ಬಡಭಿಕ್ಷುಕನಿವಂ । ತೀ ವಿದೀ ಗೆಳತಿಯರೊಳೇನುವನೋ ಕೊಡುವನೆಂದು ॥ ಭಾವದೊಳುದಾಸೀನತೆ ಯನಾಂ । ತಾ ವನಿತೆಯೊಲ್ಲೆಪ್ಪ ಹೋಗೆಂ । ದೀ ವಿರಾಗಿಯನವಳು ಧಿಕ್ಕರಿಸಿ ದಳು ಮೊಗದಿರುವಿ ॥ ೩೨ ॥

ಒಲ್ಲೆನೆನ್ನಲು ಬಾರದಾ ನೀ । ನೊಲ್ಲೆನೆಂಬುವದೇಕೆ ಜನನಿಯೆ । ಸಲ್ಲ ದೀ ನುಡಿ ನಿನಗೆ ಹಿಡಿಯೌ ಮನದೆ ಬಯಸಿರ್ದ ॥ ಸಲ್ಲಲಿತಶಂಭುಪ್ರಸಾದವಿ । ದಲ್ಲದಿನ್ನೊಂದಲ್ಲ ಮಾತೆಯೆ । ಕೊಳ್ಳೆನುತಿವಂ ಮಗುಳ್ದೊರೆಯಲವಳೊಪ್ಪ ಲಿಲ್ಲರರೇ ॥ ೩೩ ॥

ವಾರಣಾಶ್ವಾಂದೋಲಿಕಾರಥ । ವಾರದಿಂ ನವರತ್ನಗಳಲಂ । ಕಾರದಿಂ ಚೀನಾಂಬರಗಳಿಂ ವಾದ್ಯದೊದವಿಂದ ॥ ಗೌರವದೊಳಿಹ ಸ್ವಾಮಿಗೊಪ್ಪುವ । ನಾರಿ ಪರಿದರುವೆಯ ಶರಣನ ಕೃ । ಪಾರಸಕೆ ಕೈಯೊಡ್ಡಲುರೆ ನಾಣ್ಚಳೆಯಳೇ ಮನದೆ ॥ ೩೪ ॥

ಪೊಡವಿಯಾಣ್ಮರು ಕಾಮಿಗಳು ಭ್ರಮೆ । ವಡೆದ ಧನಿಕರು ಕುಟಿಲರುತ್ಸವ । ದೊಡವೆರೆದವರ್ತಳೆವರುತ್ತಮವಸನಭರಣಗಳ ॥ ಮೃಡನ ಶರಣರು ಪ್ರಮಥರಾಗಳ್ । ಬಡತನದ ವೇಷದೊಳು ಬಾಳ್ವರು । ಪೊಡವಿಯೊಳಗಿದ ನೇನುಬಲ್ಲಳು ಮೋಸವಾಯ್ತುವಳ್ಗೆ ॥ ೩೫ ॥

ಗುಣಿಗಳಿಗೆ ಬಡತನದ ವೇಷಂ । ಗುಣವಿಹೀನವ್ರಜಕೆ ಮಣಿಭೂ । ಷಣದವೇಷಂ ಸಹಜಮಾ ಗುಣಹೀನವೇಷವದು ॥ ಗುಣಿಗಳುರುವೇಷದವೊಲೀ ಧಾ । ರುಣಿಯೊಳತಿಪೂಜ್ಯತ್ವಮಂ ಮ । ನ್ನಣೆಯನೆಂತಾಳ್ದಪುದು ದೈನ್ಯಂ ಗುಣಿಗೆ ಬಾಧಕವೇ ॥ ೩೬ ॥

ಮುರಿದ ಬೆತ್ತಂ ಪರಿದ ಜೋಳಿಗೆ । ಕಿರಿಯಕೋವಣಮುಗುವ ಜೊಲ್ಲುಂ । ನರೆನವಿರು ಪಳೆಸಜ್ಜೆ ಮಾಸಿದಭಸಿತರೇಖೆಗಳು ॥ ವಿರಸವಚನಂ ನಿರಿದೊವಲ್ಪೊಂ । ದಿರುವ ಗಣನಂ ಕಂಡು ಶಿವನೆಂ । ದೆರಗಿ ತತ್ಕೃಪೆವಡೆಯದಾತಂ ಭಕ್ತನೆನಿಸುವನೇ ॥ ೩೭ ॥

ಹೊಲೆಯನಂದದೆ ಹೇಸಿರೂಪಂ । ದಳೆದು ಮೃತಗೋವತ್ಸಮಂ ಪೊ । ತ್ತುಲಸದಧ್ವರಮಂಟಪಕ್ಕೈತಂದ ಶಂಭುವನು ॥ ತಿಳಿದನಾ ಸೋಮಾಸಿಮಾರಂ । ವಿಲಸಿತಾಭವರೂಪಿಯಾದ । ತ್ಯಲಘುಶರಣನನರಿಯಲಿಲ್ಲವಳೇಂ ಮದಾನ್ವಿತಳೋ ॥ ೩೮ ॥

ಮಿಸುಪ ಕಾಷಾಯಾಂಬರಗಳುಂ । ಭಸಿತ ಲಿಂಗ ಶಿವಾಕ್ಷ ಜಡೆ ರಂ । ಜಿಸುವ ಪಾವುಗೆ ಬೆತ್ತ ಕೋವಣ ಯೋಗವಟ್ಟಗಳು ॥ ವಸುಧೆಯೊಳು ಶಿವ ಲಾಂಛನಗಳೆ । ನ್ನಿಸುವವಿವುಗಳನಾಂತು ಪರಿಪಾ । ಲಿಸದೆ ಜನರಂ ವಂಚಿಪರು ಕೆಲವೇಷಧಾರಿಗಳು ॥ ೩೯ ॥

ಇಲಿಗೆ ಬಲೆಯೊಳಗಣಕಡಬು ಮೀ । ನ್ಗಳಿಗೆ ಗಾಳದೆ ಸಿಲುಕಿಸಿದ ಪುಳು । ಕುಳಿಯಮೇಲೆಸಗಿರ್ದ ಪುಲ್ಲಿನಪಾಸುಗೆಯು ಗಜಕೆ ॥ ಖಲರು ಧೂರ್ತರು ಸ್ವಾರ್ಥಿಗಳು ನೆರೆ । ತಳೆವ ಗುರುಚರಸಾಧುವೇಷಂ । ತಿಳಿಯೆ ಭಾವಿಕಜನಕೆ ಮೋಸಸ್ಥಾನವದರಿಂದ ॥ ೪೦ ॥

ಬರಿದೆ ವೇಷಕ್ಕಾಡಿ ಭಕ್ತಂ । ಮರುಳುತನದಿಂ ಕೆಡುವನೆಂದಾ । ವರ ವಚನಶಾಸ್ತ್ರಂ ಪೊಡರ್ಪಿಂ ಬೋಧಿಸುತ್ತಿಹುದು ॥ ನೆರೆ ತಪೋಬಲಮೆರಗಿದವ ರಂ । ಪೊರೆವುದಲ್ಲದೆ ಪಿರಿಯವೇಷಂ । ಪೊರೆಯದಿದನರಿದವನೆ ಭಕ್ತಂ ಸಾಕಿದಂತಿರಲಿ ॥ ೪೧ ॥

ನಾಡೆ ಶರಣಂ ಸುಪ್ರಸಾದವ । ನೀಡಲೆತ್ತಿದ ಕರಕಮಲವಂ । ನೋಡಿ ಶಿವನುಂ ಬೇಡುವಂತಿರ್ದತ್ತದಂ ಬಯಿಸಿ ॥ ಖೋಡಿಯುವಳೊಲ್ಲೆಂದು ಹಾಸ್ಯವ । ಮಾಡಿದಳ್ಕೆಳದಿಯರೊಳೀತಂ । ಮಾಡಬೇಕಿನ್ನೇನೆನುತ ಕೈಹಿಂದೆ ತಕ್ಕೊಂಡು ॥ ೪೨ ॥

ಮರುಳಿ ನಡೆದಂ ಭಿಕ್ಷೆಗೀ ಶಿವ । ಶರಣನೂರೊಳಗತ್ತಮಿತ್ತಂ । ತರುಣಿಗಾಶೀರ್ವದಿಸಬಂದೀತನನು ದೂರದೊಳು ॥ ನಿರುಕಿಸಿದ ಕೆಲಜನರವಳ ಹ । ತ್ತಿರಕೆ ಪರಿತಂದದನು ತಿಳಿದಾ । ಸರಸಿಜಾಕ್ಷಿಯ ಮರುಳುತನಕುಮ್ಮಳಿಸಿ ಸೈರಿಸದೆ ॥ ೪೩ ॥

ಆತನೇ ಶಿವಶರಣನಾ ಪರಿ । ಪೂತಚರಿತನ ಸುಪ್ರಸಾದವ । ನೇತಕೆ ನಿರಾಕರಿಸಿದೌ ಮತಿಹೀನಳೇ ನಿನ್ನ ॥ ಪಾತಕವನೇವೇಳ್ವುದೌ ಸಂ । ಪ್ರೀತಿಯಿಂ ತಾನೇ ಮನೆಗೆ ಬರ । ಲಾತುರಿಪ ಸಿರಿಯಂ ತೃಣೀಕರಿಸಿದವೊಲಾಯ್ತು ಬಲೆ ॥ ೪೪ ॥

ನಿನ್ನೊಳುಳ್ಳವಿಚಾರವೇ ಭವ । ದುನ್ನತಿಯನೇ ಬಣ್ಣಗೆಡಿಸಿದು । ದೆನ್ನುತಾ ಸುಜನರ್ಕಳೀಳಿಸಲದನು ಕೇಳ್ದವಳು ॥ ಸನ್ನುತಶ್ರೀಸಿದ್ಧರಾಮನ । ಪನ್ನಗನಮಂ ನಂಬಿದೊಡೆ ಮುಂ । ದೆನ್ನಭೀಷ್ಟಂ ದೊರೆಯದಿರದೆಂದೆಂದಳವಳಮುವ ॥ ೪೫ ॥

ಸಿದ್ಧರಾಮಂ ಶರಣನಾಜ್ಞಾ । ಬದ್ಧನಾಗಿರ್ದುದನು ಸೊಕ್ಕಿದ । ಬುದ್ಧಿಹೀನರದೆಂತು ಬಲ್ಲರು ಭೂತಲಾಗ್ರದೊಳು ॥ ಉದ್ಧರಿಸು ತಪ್ಪಾಯ್ತೆನುತ್ತತಿ । ಶುದ್ಧಮನದಿಂ ಕ್ಷಮೆಯನರ್ಥಿಸ । ದುದ್ಧತಳೆನಿಪ್ಪಾ ಪ್ರಮದೆ ಶರಣನನು ಲಕ್ಕಿಸದೆ ॥ ೪೬ ॥

ಪ್ರೇಮದಿಂದ ಬಹೂಪಚಾರ । ಸ್ತೋತ್ರಮಪೂರ್ವಕಮಾಗಿ ಮಹಿಮೋ । ದ್ದಾಮನೆನಿಸಿದ ಸಿದ್ಧರಾಮನ ಪೂಜೆಯಂ ಕೈಸಿ ॥ ಸ್ವಾಮಿಯೇ ಸುತರಂ ಕರುಣಿಸೆಂ । ದಾ ಮಹಿಳೆಯರ್ಥಿಸಿ ನೆರೆ ನಿಜ । ಗ್ರಾಮಕ್ಕೈತಂದಳ್ಪಳಗದೊಡಗೂಡಿ ಪತಿಯೊಡನೇ ॥ ೪೭ ॥

ಜನಿಸಲಿಲ್ಲಾತ್ಮಜರು ರೋಗಂ । ಜನಿಸಿ ಮುಂದಲ್ಪಾವಧಿಯೊಳವ । ಳಿನೆಯನಳಿದಂ ಬಳಿಕ ಸರಿದುದು ದೊರೆದ ಸಂಪದವು ॥ ಘನಶರಣಕರುಣೆಯನುಪೇಕ್ಷಿಸಿ । ದೆನಗೆ ಘಟಿಸಿದುದೀ ಬವಣಿಯೆಂ । ದೆನುತ ಹಲುಬಿದಳಾಕೆ ಬಗೆಬಗೆಯಿಂದ ನೆನೆನೆನೆದು ॥ ೪೮ ॥

ಮಕ್ಕಳಾಶೆಗೆ ಪೋಗಿ ಶರಣನ । ಮಿಕ್ಕ ಮುದದಿಂ ಸಿದ್ಧರಾಮಗೆ । ತಕ್ಕ ಹರಕೆಯನೆಸಗಿ ಮಕ್ಕಳ ಪಡೆಯದಾಣ್ಮನನು ॥ ಲಕ್ಕಕಿಂ ಮಿೂರಿರ್ದ ಪಣಮಂ । ಸೊಕ್ಕಿನಿಂ ಕಳಕೊಂಡು ಬಹುಕ । ಷ್ಟಕ್ಕೆ ತಾಂ ಪಕ್ಕಾದಳೆಂದಾಡಿದರು ಕಂಡವರು ॥ ೪೯ ॥

ಎಂದಿನಂದದೊಳೊಂದುದಿನಮಾ । ಕಂದುಗೊರಳನ ಶರಣನತ್ಯಾ । ನಂದದಿಂ ಕಾಯಕನಿಮಿತ್ತಂ ಪೋದೆಡೆಯೊಳಲ್ಲಿ ॥ ಒಂದು ಸಾಕಿದ ಜಿಂಕೆ ಸುಮ್ಮನೆ । ಬಂದು ಶಿವಶರಣಾರ್ಯನಂ ಮುಳಿ । ಸಿಂದಿರಿಯತೊಡಗಿದುದು ಮನಸಿಗೆ ಬಂದ ತೆರನಂತೆ ॥ ೫೦ ॥

ನೋಡಿದವರಾಕ್ಷಣದೆ ಕೋಲ್ಗೊಂ । ಡೋಡಿ ಬಂದಾ ಕೆಟ್ಟಮಿಗಮಂ । ಕೂಡಿ ತಾಡಿಸಲೊಡನೆ ತಿಳಿದೀ ಶರಣನಡ್ಡಾಗಿ ॥ ಬೇಡಿರೆಪ ಬಡಿಯದಿರಿ ಬಿನದವ । ಮಾಡುತಿಹುದದರುತ್ಸವವನೊಲಿ । ದಾಡುವಾಟವನೇಕೆ ಕೆಡಿಸುವಿರೆಂದು ಬಿಡಿಸಿದನು ॥ ೫೧ ॥

ಇರಿದಿರಿದು ಸಾಕಾಗಿ ತಾನೇ । ಸರಿದು ಸುಮ್ಮನೆ ನಿಂದುದು ಮಿಗಂ । ಶರಣನಂಗದೆ ತದ್ಧತಿಚಯಂ ಮೂಡಿ ವಸನಗಳು ॥ ಹರಿದರುಣಜಲಮುಣ್ಕಿ ಕಲೆಯಿಡಿ । ದಿರದೆ ತೋರುತ್ತಿರಲು ಶಾಂತಿಯ । ಕುರುಹಡಗದಾನಂದದಿಂ ಬಲು ಕನಿಕರಂಬೆತ್ತು ॥ ೫೨ ॥

ತಿಳಿಯದೆನ್ನಯಕರಿಣದೇಹವ । ನಳವಿನಿಂದಿರಿದಿರಿದು ದಣಿದುದು । ತಳುವದಿದನುಪಚರಿಸಬೇಕೆಂದೀತನಾ ಮೃಗದ ॥ ಚೆಲುವಮೈಯ್ಯಂ ತಿಕ್ಕಿ ಶೃಂಗಂ । ಗಳನು ಪದುಳದೊಳೊತ್ತಿ ಮೆಲ್ಲನೆ । ಕಳಕಳೆಯೊಳೊಳ್ಮೊಗದಡವಿ ನಡೆದಂ ದಮಾನ್ವಿತನು ॥ ೫೩ ॥

ಬಡಿಯಲ್ಕೆತರೆ ನಿಲದೆ ಹಿಂದ । ಕ್ಕೊಡನೆ ಸರಿವುದೆ ದೇಹದಗುಣಂ । ಬಡಿವುದಕ್ಕಡ್ಡಾಗುವದೆ ಕರಗಳಸ್ವಭಾವಮದು ॥ ಬಡಿದೊಡಳುಕುವದೇ ಮನೋಗುಣ । ವೆಡರಿಗಿಳಿವುದೆ ಮುಖದಗುಣವೀ । ಜಡವಿಕೃತಿಗಳ್ಪಟಸದೀತಂ ದೇಹಿ ತಾನೆಂತೊ ॥ ೫೪ ॥

ತನ್ನ ಹಿತಕನ್ಯರನು ಭಂಗಿಪ । ಕುನ್ನಿಯಂ ಸೈರಿಸಲಹುದು ಮದ । ದುನ್ನತಿಕೆಯಿಂ ಬರಿದೆ ಪರರಂ ಪೀಡಿಪಧಮನನು ॥ ಬನ್ನಬಡಿಸದೆ ಬಿಡುವುದಾಗದು । ನನ್ನಿಯೆನೆ ಬರಿದಿರಿವೆರಳೆಯುಂ । ಮನ್ನಿಸಿದ ಶರಣನ ಸಹನಶೀಲತೆಗೆ ಸರಿಯುಂಟೇ ॥ ೫೫ ॥

ತನಗೆ ಘಾತಂ ಸಂಧಿಸಿದೊಡುಂ । ಮನಕೆ ಬಂದಂತಿರಿವ ಚಿಗರಿಯು । ಬಿನದಮದು ಕೆಡಬಾರದೆಂದಿಚ್ಛೆಯಿಸಿ ಯತ್ನಿಸಿದ ॥ ಘನಶರಣನಸುವಳಿದೊಡುಂ ಮನು । ಜನ ಮನಸಿನುತ್ಸಾಹಮಂ ಕೆಡಿ । ಪನೆ ಮುಳಿವನೇ ಖಲರನೆಂದುತ್ತಮರು ನುತಿಸಿದರು ॥ ೫೬ ॥

ತಂದೆತಾಯಿಗಳೆಂದು ತನುಭವ । ರೆಂದು ನಂಟರ್ಮಿತ್ರಬಂಧುಗ । ಳೆಂದು ಮೋಹದೆ ರಕ್ತಸಂಬಂಧಿಗಳೊಳೊಡನಾಡಿ ॥ ಬೆಂದೆನೀ ಸಂಸಾರದುರಿಯೊಳು । ಹೊಂದಿದೆನು ನಿನ್ನಡಿಯನಿಂದಿಗೆ । ಕಂದನೆಂದೆನ್ನಂ ಸಲಹು ವೀರೇಶ ಶಿವ ಶರಣ ॥ ೫೭ ॥

ಅಂತು ಸಂಧಿ ೧೨ಕ್ಕೆ ಪದಗಳು ೭೩೯.

ಮಂಗಲಂ.



ಶ್ರೀಮತೇ ಕುಮಾರಾಯ ನಮಃ



## ಹದಿಮೂರನೆಯ ಸಂಧಿ ಪ್ರಾರಂಭ.

ಸೂಚನೆ ॥ ಬಡಿದ ಪಾತಕಿಯಳಿಯೆ ವಿಪ್ರಂ । ಕಡುವಿಚಾರಂದಳೆಯೆ ಗಣವರ । ನಿಡಿದ ಕಜ್ಜಿ ತೊಲಂಗೆ ಮೆರೆದಂ ಶರಣನನುನಯದೆ ॥ ಪಲ್ಲ ॥

ಪದ ॥ ಕರುಣಿಗಳ್ದುಃಖಿಗಳನೀಕ್ಷಿಸಿ । ಮರುಗಿ ತಾವೇ ಕರೆದು ದಯೆಯಿಂ । ಪೊರೆವುತಿರ್ಪರು ಪರಿಪರಿಯಸಂಸಾರಕಷ್ಟದೊಳು ॥ ಕೊರಗಲಾರದೆ ಪ್ರಾರ್ಥಿಸಿದೊಡುಂ । ತರುಳನೆನ್ನಂ ನೋಡಿ ಸಲಹದ । ತೆರನದೇಂ ಪರಿಪಾಲಿಸೈ ಶ್ರೀಪಾರ್ವತೀರಮಣ ॥ ೧ ॥

ಶರಣಪುಂಗವನೊರ್ಮೆ ಪುರದೊಳು । ತಿರಿದು ಮಗುಳ್ದು ನಿಜಾಲಯಕ್ಕಂ । ಬರುವದಾರಿಯೊಳೋರ್ವ ಗಾಂಜಿಯಸೇವಕಂ ತನ್ನ ॥ ಸರಿಗರೀಕ್ಷಿಸೆ ಚೇಷ್ಟೆಯಿಂದೀ । ಪರಮನಂ ಭಂಗಿಸಲುಬೇಕೆಂ । ದರಿದು ನಿಲ್ಲೆಲೆ ಶರಣ ನೀನೆನುತೆದುರಿನೊಳು ನಿಂದು ॥ ೨ ॥

ನಾನು ನ್ಯಾಯಾಧೀಶನಿರುವೆನು । ನಾನು ಬಹುಸತ್ಯಾತ್ಮನಿರುವೆನು । ನಾನತಿಸದಾಚಾರಿಯಿರುವೆನು ನಾಳೆಯೂಟಕ್ಕೆ ॥ ನೀನು ಬರುವೆಯೊ ನಿಮ್ಮ ಸದನ । ಕ್ಕಾನುಬರಲೋ ಪೇಳೆನುತ್ತನು । ಮಾನಿಸದೆ ಬಿರುವಾತಿನಿಂದಂ ಕೇಳಲದನರಿದು ॥ ೩ ॥

ನಾಳಿನೂಟದ ಸುದ್ದಿಯಿಂದೇ । ಕಾಲಿಸಲುಬೇಡಪ್ಪ ಎಂದೆನೆ । ಹೇಳಬೇಕೆಂದೇ ಎನುತ್ತವನಾಗ್ರಹಿಸಲಿವನು ॥ ಹೇಳದೋಕೆಗೆ ಹೋಗತೊಡಗಲು । ಕೇಳದತ್ತತ್ತಡ್ಡಗಡ್ಡುತ । ಮೇಲೆ ಬರುತಂ ಮುಟ್ಟಲೈತರುತೆಲವೊ ದಾಂಭಿಕನೆ ॥ ೪ ॥

ಶರಣವೇಷಂದಳೆದು ಜನರೊಳು । ವಿರತಿಯಂ ತೋರುತ್ತ ಮೋಸದೆ । ಪರಧನವನಪಹರಿಪ ನಿನ್ನಂ ಮೊದಲೆ ತಿಳಿದಿಹೆನು ॥ ಮರುಳುಮಾತುಗಳಂ ಬಿಡಿನ್ನೆ । ಚ್ಚರಿಕೆಯಿಂ ಬಾಳಿಲ್ಲದೊಡೆ ನಾಂ । ಪೊರಮಡಿಸಿದಪೆನೀ ಪುರದಿ ನೆಂದಾ ಖಲಂ ನುಡಿಯೆ ॥ ೫ ॥

ಏನುವಂ ಮಾರ್ನುಡಿಯದೆ ಸಮಾ । ಧಾನಮುದ್ರಾಕಲಿತಮುಖದಿಂ । ದೀ ನಿರುಪಮಂ ನಿಂದನಲ್ಲಿಯೆ ಕರಗಳಂ ಮುಗಿದು ॥ ಹೀನರು ಕ್ಷಮಾಶಸ್ತ್ರ ಹಸ್ತರ । ನೇನು ಮಾಳ್ಪರು ಗಜಕೆ ಬೊಗಳುವ । ಶ್ವಾನನಂತೀತಂಗೆ ಬೊಗು ಳ್ದಂ ತತ್ಖಲಂ ತಿಳಿಯೆ ॥ ೬ ॥

ಕೋಪಮಂ ಗೆಲ್ದಿಹರು ಸುಜನರು । ಕೋಪಕಂ ಸೋಲ್ದಿಹರು ಕುಜನರು । ಕೋಪಜೇಯಿಗಳಾಗಿ ಸುಜನರು ಶಾಂತಿವಡೆದಿಹರು ॥ ಕೋಪ ದಾಳುಗಳಾಗಿ ಕುಜನರು । ತಾಪದಿಂದಂ ಬೇವುತಿಹರಾ । ತಾಪಿಗಳೊಳೀ ಶಾಂತಿ ಯುಕ್ತರದೆಂತು ಸೆಣಸುವರು ॥ ೭ ॥

ನೀಲರತ್ನದ ಮೇಲೆ ಬಹುಪರಿ । ಧೂಳಿ ಕೂತೊಡೆ ಕುಂದುವದೆ ಬೆಲೆ । ಬಾಳದಿರ್ಪುದೆ ದುರ್ಜನನು ಮತ್ಸರಿಸಿ ತೆಗಳಿದೊಡೆ ॥ ಶೀಲನಂದಂ ಗೆಡುವನೇ ಬಲು । ಮೇಲೆನಿಪ ಜಸವಳಿವುದೇ ತೆಗೆ । ತಾಳುವನು ಮತ್ತ ನಿತು ಬೆಳಗಂ ತೊಳೆದ ಮಣಿಯಂತೆ ॥ ೮ ॥

ಧರಣಿಯೊಳ್ಪ್ರಖ್ಯಾತಿಯಂ ಪಡೆ । ದಿರುವ ತಮ್ಮಯ ಸದ್ಗುಣಗಳಂ । ಪರರ ದುರ್ಗುಣವಿತತಿಯಂ ನೆರೆ ಮುಚ್ಚಿಕೊಳ್ವಲ್ಲಿ ॥ ಪರಮಕೌಶಲ್ಯವನು ತೋರುವ । ನಿರಭಿಮಾನದ ಸುಜನರಿರವಂ । ದುರುಳರೇಂ ಬಲ್ಲರ್ವಿಚಾರವಿ ಹೀನಮತಿಯುತರು ॥ ೯ ॥.

ಮಂದಿ ತನ್ನಂ ಪೊಗಳುತಿರ್ಪುದ । ರಿಂದ ಸುಜನಂ ತನ್ನ ಸದ್ಗುಣ । ವೃಂದಮಂ ಪೇಳದಲೆ ನಿಚ್ಚಂ ಸುಮ್ಮನಿರುತಿಹನು ॥ ಮಂದಿ ತನ್ನಂ ನೆರೆ ನುತಿ ಪುದಿ । ಲ್ಲೆಂದು ಕುಜನಂ ತಾನೆ ತನ್ನಂ । ಚೆಂದದಿಂ ನಾಣ್ಚದೆ ಪೊಗಳಿಕೊಳ್ಳು ವನಿದಂತಿರಲಿ ॥ ೧೦ ॥

ಮೌನದಿಂ ನಿಂದಿರ್ದ ಶರಣನ । ನಾ ನರಾಧಮನೆಂದು ನಿರುಕಿಸಿ। ಮಾನಸದೆ ಮತ್ತನಿತುಕೋಪಂ ಪೆರ್ಚಿಯೆಲೆ ಕಳ್ಳ ॥ ನೀನಿನಿತು ಕಪಟವನು ಮಾಡಿದೊ । ಡೇನುದೊಡ್ಡವನೆನಿಸಿಕೊಂಬೆಯೊ । ನಾನರಿಯದನೆಯೆನುತಿವನ ಚಿತ್ತವನವಂ ಪಿಡಿದು ॥ ೧೧ ॥

ಶರಣನಿವನಾಗಿರ್ದೊಡಭ್ರದೆ । ಚರಿಸುತಿರ್ದಂ ಪಕ್ಕಿಯಂದದೆ । ಪೊರಗೆ ಬೀಳ್ವುದು ನೋಡಿರೀತನ ಪಿರಿಯತನವೆನುತ ॥ ನಿರುಕಿಸುವ ನಿಜಮಿತ್ರರೆದು ರೊಳು । ಕರುಣವಿಲ್ಲದೆ ಪೊಯ್ದು ಸುತ್ತಂ । ಗರಗರನೆತಿರುಗಿಸುತ ನೂಂಕಿ ದನಿವನನಾ ಖಲನು ॥ ೧೨ ॥

ಎರಡುಕಡೆಯೊಳ್ಮುಳ್ಳುಗಳ್ಳಿಯು । ತುರುಗಿ ಬೆಳೆದುದುರಿರ್ದಮುಳ್ಳಿನ । ಕಿರಿಯಪಥದೊಳು ನೂಂಕಿದುದರಿಂದೋಡುತಂ ಪೋಗಿ ॥ ಭರದಿನಳವಳಿ ದೇಳ್ದನಿಲ್ಲದೆ । ಪಿರಿಯಗೊನೆಮುಳ್ಳುಗಳು ಮೈಯೊಳು । ಮುರಿಯೆ ಬೀಳ್ದಂ ಮುಳ್ಳುಗಳ್ಳಿಯೊಳಾಲಿಸುವರಾರು ॥ ೧೩ ॥

ಆಕ್ಷಣದೊಳಾ ದುಷ್ಟಮಾನವ । ರೀಕ್ಷಿಸಿ ತೊಲಂಗಿದರು ನಗುತಂ । ಸಕ್ಷಮಮಹಾಶರಣನಂ ಪಿಡಿದೆತ್ತಿತೆಗೆಯದಲೆ ॥ ಅಕ್ಷಯಸಮಾಧಾನದಿಂ ಬಸ । ವಾಕ್ಷರತ್ರಯಮಂ ಜಪಿಸಿ ರು । ದ್ರಾಕ್ಷಮಣಿಗಳ್ಗಲ್ಕೆನೆ ಸಮುಂತೇಳ್ದು ನಿಜ ಗೃಹಕೆ ॥ ೧೪ ॥

ಬಂದು ಮುಳ್ಳಂ ಕೀಳ್ತುಕೊಳ್ಳದೆ । ಚಂದದಿಂದಂ ಮಿನಿವ ಸಮಯ ದೊ । ಳಿಂದುಮುಖಿಗುರುದೇವಿ ನಿರುಕಿಸಿ ಮುಳ್ಳುಡಿದ ಬಗೆಯ ॥ ಅಂದು ಬೆಸಗೊಳೆ ಶಿವನಲೀಲೆಯಿ । ದೆಂದೊರೆದನಾ ದ್ವಂದ್ವರಹಿತಂ । ಕುಂದದುಗು ರ್ಗೊನೆಯಿಂದವಳ್ಕೀಳ್ತೆಳ್ಪುಡುಕಿ ಬಿಡದೆ ॥ ೧೫ ॥

ಮರುದಿನಂ ಗಾಂಜೆಯನು ಸೇವಿಸಿ । ಪರವಶದೊಳಾ ಪಾತಕಾಂಧಂ । ಶರಣವರ್ಯಂ ಕೆಡೆದೆಡೆಯೊಳಾ ಪೊಳ್ತಿನೊಳು ಬೀಳ್ದು ॥ ಹರಣಮಂ ತೊರೆದಂ ಮಹಾತ್ಮನ । ಕರುಣಮಂ ಸಂಪಾದಿಸದೆ ದು । ರ್ಮರಣಕೀಡಾಗರೆ ನರರ್ಚೇ ಷ್ಟಿಸಿದೊಡವರೊಡನೆ ॥ ೧೬ ॥

ಓಡುವದು ಪಾಳ್ಬಾವಿಯೊಳು ಫಣಿ । ನೋಡಿ ಗರುಡಂಗಂಜಿ ದಂತಿಯು । ಬೇಡರೋರ್ಗಂ ಕಂಡು ಕಾಲ್ದೆಗೆಯುವುದು ಸ್ಕಂಧದೊಳು ॥ ಗೂಡ ಪೊಗುವದು ಬೆಕ್ಕಿಗಗಿದಿಲಿ । ರೂಢಿಯೊಳಗತಿಶೀಘ್ರಕರ್ವುದ । ಕೇಡಿಗೆ ಪೆಳದೋರ್ಡು ವದದೆತ್ತಂ ನರಂ ಮತ್ತೆ ॥ ೧೭ ॥

ಮಲ್ಲಿಕಾರ್ಜುನದೇವಮಂದಿರ । ದಲ್ಲಿ ಬಡಗಲನಾಡಪಾರ್ವಂ । ನಿಲ್ಲ ದೈತಂದೋರ್ವಗುರ್ಜರನುರುಸಹಾಯದೊಳು ॥ ಬಲ್ಲತನಮಂ ತೋರಿ ನೂರೆಂ । ಟೊಳ್ಳೆಪಾರ್ಥಿವಲಿಂಗಗಳನೊಲಿ । ದುಲ್ಲಸಿತಮೆನೆ ಸ್ಥಾಪಿಸಿ ಸಮುಸ್ತೋಪಚಾರ ದಲಿ ॥ ೧೮ ॥

ತೊರೆಯದಿಪ್ಪತ್ತೊಂದುದಿನಗಳ । ವರೆಗೆ ಪೂಜಿಸಲೆಂಬ ನಿಯಮುವ । ಧರಿಸಿ ಪ್ರತಿದಿನದಲ್ಲಿಯಕ್ಷತೆಗಾಗಿ ಚೆಲುವೆಸೆವ ॥ ಎರಡುಪಡಿಯಕ್ಕಿಯನು ಕಳೆವು । ತ್ತಿರುವದಂ ನಿರುಕಿಸಿ ಸಹಿಸದೀ । ಶರಣನತಿಗಂಭೀರನಾದದಿನಾತನಂ ಕೂರ್ತು ॥ ೧೯ ॥

ಬಿಡುಬಿಡೀ ಪದ್ಧತಿಯನೆಲೆ ನೀಂ । ಕೆಡಿಸಬಾರದು ತಂಡುಲವನೀ । ಪೊಡವಿಯೊಳು ವಸ್ತುತ್ರಯಕ್ಕೆ ನಿವೇದಿಪಕ್ಕಿಯನು ॥ ಬಿಡದೆ ಚೆಲ್ಲಿದೊಡೊ ಪ್ಪಿದಪನೇ । ಮೃಡನಿದಂ ಸೈರಿಪರೆ ಭಕ್ತರು । ನಡೆ ವಿಚಾರದಿನುಳಿಯೆನುತ್ತಂ ಪೇಳಲೊಡನವನು ॥ ೨೦ ॥

ಇಂದಿಗೇಣ್ಣೆನವಾದುದಿನ್ನುಂ । ಮುಂದೆ ಪದಿಮೂರ್ದಿನಗಳನಕಂ । ಚೆಂದಮೆನೆ ಮಾಳ್ಪೆನ್ನ ನಿಯಮುವದಿರಲುಮರ್ಚಿಸದೆ ॥ ಕುಂದಿ ನಡುವಾಂ ಬಿಡೆನು ಬಿಡಿಸುವೊ । ಡೊಂದುಸಾಸಿರಪಣವ ಕೊಡು ನೀ । ನೆಂದು ನಾಣ್ಚದೆ ನುಡಿದನರ್ಥಾಪೇಕ್ಷೆಯಿಂದವನು ॥ ೨೧ ॥

ಧನವಕೊಂಡರ್ಚನೆಯನುಳಿದೊಡೆ । ನಿನಗೆ ದೋಷಂ ಧನವನಿತ್ತ । ರ್ಚನೆಯನುಳಿಸಿದ ಮಾನವಗೆ ದೋಷಾಪವಾದಗಳು ॥ ಜನಿಕುಮದರಿಂದ ರ್ಚನೆಯನುಳಿ । ಯೆನುತ ಪೇಳುವದಿಲ್ಲ ಸದ್ವಿಧಿ । ಗನುಸರಿಸು ತಂಡುಲವ ಕೆಡಿಸದಿರೆಂದೊರೆವರಿವರು ॥ ೨೨ ॥

ವೇದವಿಧಿಗನುಸರಿಸಿಯರ್ಚನೆ । ಗೈದೊಡಪ್ಪುದು ಸಿದ್ಧಿ ನೀನಾ । ವೋದದಿಂ ಮಾಳ್ಪೀ ಯಜನದೊಳ್ತಪ್ಪಿಹುದು ಕೆಲವು ॥ ಮೇದಿನೀಸುರ ತಿದ್ದಿಕೊಳ್ಳೆನು । ತೋದುವೀ ಮಹಿಮನ ಮೃದೂಕ್ತಿಯ । ನಾದರಿಸದತಿಕೋಪದಿಂ ನಿಂದಿಸಿದನಾ ದ್ವಿಜನು ॥ ೨೩ ॥

ಮಾಡಬೇಕಿನ್ನೇನು ಛಲದೀ । ಬಾಡಬಗೆ ಪ್ರತಿದಿನದೆ ಸ್ಥಾಪಿಸಿ । ನಾಡೆ ಯಜಿಸಿದ ಲಿಂಗಗಳನಕ್ಷತೆಗಳಂ ತೆಗೆದು ॥ ಕೂಡಿ ಬರುಹೋಗುವ ಜನರ್ತುಳಿ । ದಾಡುವೆಡೆಯೊಳು ಚೆಲ್ಲುವನಿದಂ । ನೋಡಲಾಗದೆನುತ್ತವೊಂದೇ ಕಾಲಿನಿಂ ನಿಂದು ॥ ೨೪ ॥

ಭೋರನೇ ಸರಕಾರಸಾಕ್ಷೀ । ದಾರ ಮತ್ತಂ ಸಾವುಕಾರರೆ । ವೊರಿಹೆಚ್ಚಾದರೆ ಕೊಡಿರಿ ಬಲುಕೊರತೆಯೊದಗಿದೊಡೆ ॥ ಕೋರುತಂ ಕೊಳ್ಳಿರಿಯೆನುತ್ತ ಗ । ಭೀರವೆನಲುಚ್ಚರಿಸುತಂ ಘನ । ವೀರಗರ್ಜನೆಯುಣ್ಮೆ ಸತ್ಯಾಗ್ರಹವನೆಸಗಿದನು ॥ ೨೫ ॥

ಪುರದ ಜನರಿದನಾಲಿಸುತ್ತತಿ । ಭರದೆ ಬಂದವರಲ್ಲಿ ಕೆಲಬರು । ಶರಣಪಕ್ಷವನಾಂತರಾ ದ್ವಿಜಪಕ್ಷಮಂ ಕೆಲರು ॥ ದುರಭಿಮಾನದಿನಾಂತು ವಾದಿಸು । ತಿರೆ ವಿಚಾರಿಗಳನಿತರೊಳು ಭೂ । ಸುರಗೆ ಶಾಂತಿಯನೊರೆದು ಮಾಣಿಸಿದರ್ವಿವಾದವನು ॥ ೨೬ ॥

ಬಳಿಕ ತದ್ವಿಪ್ರಂ ಶರಣನ । ತ್ಯಲಘುಚರಿತೆಯನಖಿಲರಿಂದರಿ । ದಲಸದೈತಂದೆರಗಿ ಮಹಿಮನೆ ನಿನ್ನ ಮಾನಸಕೆ ॥ ತಿಳಿಯೆ ಮತ್ಕರ್ಮಗಳಿನಾದು । ಮ್ಮಳವ ಸೈರಿಸಿ ತಿಳುಹಿ ಕೃಪೆಯಿಂ । ಸಲಹು ಬೇಡುವೆನೆಂದು ಮರೆಹುಗಲಾಕ್ಷಣಂ ನೋಡಿ ॥ ೨೭ ॥

ಏನಿದೈ ನೀನೆಸಪ ಯಜನವಿ । ಧಾನವಿದು ಭಾಸುರವಿಚಾರಿವಿ । ತಾನದೊಳಗತ್ಯಪ್ರಶಸ್ತಂ ವಿಪುಲಧಾನ್ಯವನು ॥ ಹಾನಿಗೈವುದದೇಕೆ ನೆಲದೊಳು । ಮಾನವರದಂ ತುಳಿದೊಡೊಳಿತೇ । ನೂನಮಲ್ಲವೆ ಬ್ರಹ್ಮವರ್ತನಕೆಂದನೀ ಮಹಿಮಂ ॥ ೨೮ ॥

ಕಾಶಿಯೊಳಗಿದು ರೂಢಿಯುಂಟೈ । ಸೋಸಿದಕ್ಷತೆಯಂ ಧರಿಸಿ ಬಳಿ । ಕಾ ಸಮಸ್ತಾಕ್ಷತೆಯನತ್ತಂ ತೆಗೆದು ಚೆಲ್ಲುವರು ॥ ಈ ಸುಪಾರ್ಥಿವಲಿಂಗ ತತಿಯನು । ಪಾಸಿಸಿದವಂಗೊದಗುವವು ಧಾ । ತ್ರೀಶಶತಾದಿಸುಭೋಗಗಳ್ಬಿಡ ದೆಂದನಾ ದ್ವಿಜನು ॥ ೨೯ ॥

ಭೋಗಕಾಶಿಸಿ ಕಾಮ್ಯಕರ್ಮದೊ । ಳೀಗಳೊಂದು ಶರೀರಮಂ ದೃಢ । ಮಾಗಿ ಬಹುತರ ಕಷ್ಟದಿಂ ದಂಡಿಸಿ ಸುಕೃತವಡೆದು ॥ ರಾಗದಿಂ ಮತ್ತೊಂದು ದೇಹವ । ಭೋಗದೊಳು ಮುಂದಿರಿಸಿ ಬಳಿಕದು । ನೀಗೆ ಮೊದಲಂತಪ್ಪುದಿದು ಬಲುಮಂದಮತಿಯಲ್ತೆ ॥ ೩೦ ॥

ಕೆಡದ ಸುಖಮಂ ಕೊಡುವ ಪಥಮಂ । ಪಿಡಿಯಬೇಕಾರಾದೊಡಾ ಗಲಿ । ಕೆಡುವ ಭೋಗವ ಪಡೆಯಲೆಂದೀ ಪೊಡವಿಯೊಳು ಬರಿದೆ ॥ ದುಡಿ ದುಡಿದು ಸತ್ತೊಗೆದು ಬಳಲುವ । ಗೊಡವಿಯಂ ಬಿಡಲಾರರಾ ದು । ರ್ಜಡ ಮನುಷ್ಯರು ವರವಿವೇಕವನುಳಿದು ಭ್ರಮೆಯಿಂದ ॥ ೩೧ ॥

ಒಡಲು ತಾನೆಂದರಿದ ಪಾಮರ । ನೊಡಲನೆಂದುಂ ಕರ್ಮಕಷ್ಟದೆ । ದುಡಿಸನೊಡಲಾನಲ್ಲವೆಂದರಿದಿರ್ದ ಪಂಡಿತನು ॥ ಒಡಲಭೋಗಕ್ಕಾಗಿ ಕರ್ಮ ದೊ । ಳೊಡೆವೆರೆಯನೀ ಕಾಮ್ಯಕರ್ಮವ । ನೆಡೆವಿಡದೆ ಭೋಗಾಭಿಮಾನಿ ಯೊಡರ್ಚುವಂ ಬಿಡದೆ ॥ ೩೨ ॥

ಭೋಗಿಯಂ ಬೆಂಬತ್ತಿ ಕಾಡುವ । ದಾಗಳುಂ ಕಡುಕಷ್ಟವಾತಂ । ಭೋಗದುಬ್ಬಿನೊಳದನು ಲೆಕ್ಕಿಸದಿಹನು ಪುಣ್ಯಮದು ॥ ಭೋಗದಿಂ ತೀರು ವದದರಿನೀ । ಭೋಗಮಂ ಬಯಸದೆ ಪರಮಶಿವ । ಯೋಗಮಂ ಪಡೆವ ರ್ವಿದಗ್ಧರು ಶ್ರೇಷ್ಠರುರ್ವಿಯೊಳು ॥ ೩೩ ॥

ಜಗದೊಳಬಲಾದ್ಯಖಿಲಭೋಗದಿ । ನಗಣಿತಗುಣಾಧಿಕಸುಖಾನ್ವಿತ । ಮಗಸುತೇಶಶ್ರೇಯಮಿದನೊದಗಿಸದೆ ಮೋಹದೊಳು ॥ ಮಿಗೆ ತೊಳಪ ಮಣಿಗೆಳಸದಾ ಗಾ । ಜಿಗೆ ಮನಂಗುಡುವಂತೆ ಭೋಗದ । ಸೊಗಸಿಗೊಪ್ಪುವ ರಜ್ಞರೆಂದವಗಿವನೊರೆಯಲೊಡನೆ ॥ ೩೪ ॥

ಅಡವಿಯೊಳು ಕಲ್ಮುಳ್ಗಳಂ ತುಳಿ । ದೆಡಹುತಂ ತಿರುಗಾಡುವಾತಗೆ । ನಡೆ ಸುಪಥಮಂ ಪಿಡಿಸಿದಂದದೊಳಿವನ ಬೋಧವಿದು ॥ ಜಡಮೆನಿಪ ಕರ್ಮಾಭಿಲಾಷೆಯ । ಕೆಡಿಸಿ ನಿಷ್ಕಾಮ್ಯಕ್ರಿಯಾಧ್ವವ । ಪಿಡಿಸಿದುದು ಶರಣರ್ಕಳೊಡನಾಟವದು ಸವಿಯೂಟ ॥ ೩೫ ॥

ಎಲೆ ಶರಣ ಗುಣಮಣಿಪಯೋನಿಧಿ । ತಿಳಿಯದೀ ಜಡಕಾಮ್ಯಕರ್ಮದೊ । ಳಳಲುವೆನ್ನಂ ಪೊರೆದ ನಿನ್ನ ಮಹೋಪಕಾರವನು ॥ ನೆಲದೊಳಾ ನಿನ್ನೆಂತು ಮರೆದಪೆ । ನಲಘುಹಿತಗುರುನೀನೆ ನಿನ್ನಡಿ । ಗಳಿಗೆ ಪದೆದು ಸಮರ್ಪಿಸುವೆನು ಪ್ರಣಾಮಮಂ ದೇವಾ ॥ ೩೬ ॥

ಉತ್ತಮಸುಮಾವಳಿಯ ಕಂಪಂ । ಕತ್ತೆ ಬಲ್ಲುದೆ ಕಾಂತಿಯುಣ್ಮುವ । ಮುತ್ತುಗಳ ಬೆಲೆಯಂ ಪ್ಲವಂಗಂ ಬಲ್ಲುದೇ ಶುನಿಯು ॥ ಮತ್ತಗಜಶಕ್ತಿಯನು ಬಲ್ಲುದೆ । ಚಿತ್ತಶಾಂತಕಶರಣವೃತ್ತಿಯ । ನೆತ್ತಬಲ್ಲೆನು ವಿಷಯಮದಿರಾಮತ್ತಮಾನಸನು ॥ ೩೭ ॥

ನಾನು ವೇದಪುರಾಣಶಾಸ್ತ್ರವಿ । ತಾನಪಂಡಿತನೆಂದು ನಿತ್ಯ । ಸ್ನಾನ ಶಿವಪೂಜಾಪರಾಯಣನೆಂದು ಸೊಕ್ಕಿನಲಿ ॥ ಜ್ಞಾನನಿಧಿಯೇ ನಿನ್ನನರಿಯದೆ । ಹೀನತನದಿಂ ಜರಿದೆನತ್ಯಭಿ । ಮಾನಿಯುಂ ಕಡುದಾಂಭಿಕನುಮಾನಿರುವೆನ್ನೈ ಕ್ಷಮಿಸು ॥ ೩೮ ॥

ಕೆರೆಯಮುಂದರವಟ್ಟಿಗೆಯು ಬಲು । ಮುರುಕಮಂ ಮಾಳ್ಪಂತೆ ದಿನಪನ । ಕರಗಳೆದುರೊಳು ದೀವಟಿಗೆ ನರ್ತನವ ಮಾಳ್ಪಂತೆ ॥ ಮೆರೆದು ವ್ಯಜನಂ ಪವನನೆಡೆಯೊಳು । ಹಿರಿಯತನಮಂ ತೋರುವಂದದೆ । ಶರಣ ನಿನ್ನೊಳು ತೋರ್ದಡೆನ್ನಗ್ಗಳಿಕೆ ಮೆರೆದಪುದೆ ॥ ೩೯ ॥

ಆವ ಜನ್ಮದ ಸುಕೃತವೋ ಮೇ । ಣಾವ ದೇವಕೃಪಾಬಲವೊ ತ್ವ । ತ್ಪಾವನಾಂಘ್ರಿಯ ದರ್ಶನಂ ಭವದತುಲಸುಖಬೋಧೆ ॥ ಭಾವಶುದ್ಧಿಗಳೊದಗಿದವು ಕೊನೆ । ಗೀ ವಸುಂಧರೆಯಲ್ಲಿ ಸುವಿಚಾ । ರಾವಲಂಬನನಾದೆನೆಂದಿವನಂ ಪೊಗಳ್ದನವನು ॥ ೪೦ ॥

ಒರೆವೆನಿನ್ನೊಂದೀ ಮಹಾತ್ಮನ । ಚರಿತೆಯಂ ಪ್ರಾಥಮಿಕಶಾಲೆಯ । ಗುರುತನದೊಳಿಹ ಸಿದ್ಧರಾಮಾರ್ಯನೆನಿಪೋರ್ವನಿಗೆ ॥ ಹುರುಕುಹತ್ತಿ ದಿವಾನಿಶೆಯೊಳುಂ । ಕೆರೆಕೆರೆದು ಗೋಳಾಡುತಿರ್ದಂ । ಪರಿಪರಿಯ ಸಕಲೌಷಧಗಳಿಂದವು ತೊಲಗಲಿಲ್ಲ ॥ ೪೧ ॥

ಮೂರುಬರಿಸಗಳಾದೊಡುಂ ಮಿತಿ । ಮೀರಿ ಬೆಳೆವುತ್ತಿಹುದರಿಂದ ಶ । ರೀರಕಾಂತಿಯಡಂಗಿ ಕಟಿಯೊಳು ಪುಣ್ಣುಗಳು ಬೀಳ್ದು ॥ ಸೋರುತಿರ್ದವು ಕೀವುರಸಿಗೆಗ । ಳಾರು ಸೈರಿಸಲಹುದೆನುತ ಸೊಗ । ಮಾರಿ ವ್ಯಥೆಬಡುತಿರ್ದನಾತನಿಗೊರ್ಮೆ ಚಿದ್ಘನನು ॥ ೪೨ ॥

ವರಗಣೇಂದ್ರನೆ ಭೋಜನಕ್ಕೈ । ತರಲುಬೇಕ್ಕೆ ನೀನೆನುತ್ತಾ । ದರದೆ ಬಿನ್ನಪವೆಸಗಲದಕವನೊಪ್ಪಿದಂ ಬಳಿಕ ॥ ಶರಣಪುಂಗವನೆನ್ನನಿನ್ನುಂ । ಕರೆಯಬರುವದು ತಡವಹುದೆನು । ತ್ತರಿದು ನಿಜಮಂದಿರದೊಳಿನಿಸುಂಡೋರ್ವಸಖನೊಡನೆ ॥ ೪೩ ॥

ವೀರಭದ್ರನ ದೇಗುಲದೆ ಮೈ । ಯೂರಲೊಡನವರೀರ್ವರಿಗೆ ನಿ । ದ್ರಾರಮಾಲಿಂಗನಸುಖಂ ಕೈಗಣ್ಮಲನಿತರೊಳು ॥ ವೀರಶರಣಂ ಕರೆಯಬಂದೀ । ಭೂರಿನಿದ್ರಾನ್ವಿತರನೆಬ್ಬಿಸ । ಬಾರದೆಂದೋರೆಗೆ ಪೊರಗೆ ನಿಂದಂ ಮಹಾತಪದೆ ॥ ೪೪ ॥

ಸರಸಿಜಾಪ್ತನ ಪ್ರಖರಕರದಿಂ । ದುರಿವ ಹುಡಿಮಣ್ಣಿನೊಳು ಮಿದುವಿಹ । ಬರಿಯಪದಗಳನೂರಿ ನಿಂದಾ ಕಿಚ್ಚಿನಂದದೊಳು ॥ ಸುರಿವಬಿಸಿಲಿನ ತಾಪಮುಂ ಮೇ । ಲಿರುವದಂ ಲಕ್ಕಿಸದೆ ಶಾಂತಿಯ । ತೊರೆಯದಿರ್ದ ಮಹಾತ್ಮನ ತಿತಿಕ್ಷಾಬಲಮದೆನಿತೋ ॥ ೪೫ ॥

ತನುವೆ ಬಲುಕಂಗೆಟ್ಟೊಡುಂ ಮೃದು । ಮನವು ಕಂಗೆಡಲಿಲ್ಲವೀತನು । ಮನಗಳಿಗೆ ಸಂಬಂಧಮೆಂಬುದು ಪುಸಿದುದೀತನೊಳು ॥ ತನಗೆ ಕಷ್ಟಗಳಾದೊಡುಂ ಸ । ಜ್ಜನರ ಸೌಖ್ಯವ ಕೆಡಿಪುದನುಚಿತ । ಮೆನುತ ವರ್ತಿಪ ಶರಣನಧಿಕಂ ಸುರಮುನಿಗಳಿಂದ ॥ ೪೬ ॥

ಎರಡುಗಳಿಗೆಯು ಕಳೆದುಭಯರೆ । ಚ್ಚರಿಕೆಯಿಂ ಕಣ್ತೆರೆದು ಶರಣಂ । ಕರೆಯುಬರಲಿಲ್ಲಿನ್ನುಮೂಟಕ್ಕೆಂದು ತವ್ಮೊಳಗೆ ॥ ಒರಗಿದಲ್ಲಿಯೆ ಮಾತನಾಡು। ತ್ತಿರುವದಂ ಕೇಳ್ದೊಡನೆದುರ್ಗೆ ಬಂ। ದೆರಗಿ ಬಿನ್ನಯಿಸಿದನು ಬರಬೇಕೆಂದಿವಂ ನಿಂದು ॥ ೪೭ ॥

ಕರೆಯಲೆಂದೈತಂದು ಬಿಸಿಲೊಳು । ಪೊರಗಿವಂ ನಿಂದೇಸುಪೊತ್ತದು । ಸರಿದುದೋ ಕಾಯ್ದುವನಿಯೊಳು ಬರಿಪಾದದಿಂ ನಾನು ॥ ಶರಣನಂ ನಿಲಿಸಿದೆಸು ಘಟಿಸಿದ । ದುರಿತಮಂ ಪರಿಹರಿಸಿಕೊಂಬುವ । ತೆರನದಾವುದೊ ಶಿವಶಿವಾ ಎಂದಾತ್ಮದೊಳು ಮರುಗಿ ॥ ೪೮ ॥

ಬಳಲಿಸಿದೆನೆಲೆ ಮಹಿಮ ನಿನ್ನಂ । ತಳುವದೆನ್ನಪರಾಧಮಂ ಮರೆ। ಮಲಗಿದೆನು ನೀಂ ಬರುವದಂ ತಿಳಿದುಂ ಪ್ರಮದದಿಂದ ॥ ಎಳೆಯನೆಂದಂಗೀಕರಿಸಿ ಸಲೆ । ಸಲಹದೊಡಮಾನೆಂತು ಬದುಕುವೆ । ನಲಸನತಿಮೂಢಾತ್ಮನಿಹೆ ನಾನೆಂದವಂ ನುಡಿಯೆ ॥ ೪೯ ॥

ಸುತನೊಳುಂಟಪರಾಧವಲ್ಲದೆ । ಪಿತನೊಳುಂಟೆಂದಾರು ಪೇಳ್ವರು । ಪಿತಹಿತವನನುಸರಿಸುವದೆ ಸುತಧರ್ಮವಾಗಿರಲು ॥ ಸುತನೊಳಿಂತು ಕ್ಷಮಾಪಣೆಯನಾ । ಪಿತನು ಬೇಡುವದೆಂತು ತಕ್ಕುದು । ಮತಿಯೊಳಿದನು ವಿಚಾರಿಸೈ ನೀಂ ಶಿವಗಣೋತ್ತಂಸ ॥ ೫೦ ॥

ತ್ರಿವಿಧವಸ್ತುವಿಗಲ್ಲದೀ ತನು । ಸವೆಯಬೇಕಿನ್ನಾರ್ಗೆ ಶಿವಗಣ । ನಿವಹಸೇವೆಯೊಳೊದಗದಿಹ ತನುವಿರ್ದು ಫಲವೇನು ॥ ಶಿವನ ತನು ಶಿವಗಾಗಿ ದುಡಿಯುವ । ದಿವರದೇನಭಿಮಾನವೆಂದಿವ । ನವನನೊಪ್ಪಿಸಿ ಮನೆಗೆ ಕರೆದೊಯ್ದುಣಿಸಿದಂ ಮುದದೆ ॥ ೫೧ ॥

ಶಿವಶರಣನುದ್ಯತ್ಪ್ರಸಾದವ । ಸವಿದ ಕಾರಣದಿಂದ ಮರುದಿನ । ಮವನ ಹುರುಕೊಂದುಳಿಯದಂತುದುರಿದವು ಚೆಲ್ವಾಗೆ ॥ ತವೆ ಶರೀರದ್ಯೋತಿಯುಣ್ಮಿದು । ದವಿಕಲತಪೋನಿಷ್ಠರಂ ಪೊ । ರ್ದುವರ ಕಷ್ಟಗಳಳಿಯದುಳಿವವೆ ತ್ರಿಭುವನಂಗಳೊಳು ॥ ೫೨ ॥

ಮದನಪಿತವಿಧಿಗಳ್ಗೆ ಗೋಚರಿ । ಸದ ಪರಮಚಿಲ್ಲಿಂಗಮಂ ಸ । ಮ್ಮದ ದಿನಂಗೇಂದ್ರಿಯಗಳೊಳ್ತಾಳ್ದದುವೆ ತಾನಾಗಿ ॥ ಸದಮಲಾಚಾರವನು ಜನರಿಗೆ । ಪದೆದು ತೋರಿದ ವೀರಶರಣನ । ಪದಪಯೋರುಹಮೆನ್ನಶೀರ್ಷದೊಳಿರಲಿ ಪಗಲಿರುಳು ॥ ೫೩ ॥

ಅಂತು ಸಂಧಿ ೧೩ಕ್ಕೆ ಪದಗಳು ೭೯೨.

ಶಿವಂ.



## ಶ್ರೀ ನಂದೀಶಾಯ ನಮಃ



# ಹದಿನಾಲ್ಕನೆಯ ಸಂಧಿ ಪ್ರಾರಂಭ.

ಸೂಚನೆ ॥ ದೊರೆಗಳೆಸಗಿದ ಕಟ್ಟಳೆಯನನು । ಸರಿಸಿ ರೋಗಿಣಿಯಂ ಪೊರೆದು ಮೇ । ಲ್ತಿರುಣಿಯಿಪ್ಪವನಿತ್ತು ಮೆರೆದನು ಶರಣಚಂದ್ರಮನು ॥ ಪಲ್ಲ ॥

ಪದ ॥ ಶ್ವೇತಸುಕುಮಾರಾದಿನಿಸ್ತುಲ । ಪಾತಕಿಗಳಂ ಪೊರೆದು ದುರ್ಭವ । ಭೀತಿಯಿಂ ನಿನ್ನಂಘ್ರಿಗವಿದಿಟ್ಟೆನ್ನನೋವದಲೇ ॥ ಈ ತೆರದೆ ಕಾಡುವದು ತ್ವದ್ವಿ । ಖ್ಯಾತಪಾವನಮೆನಿಪ ಬಿರುದಿಗೆ । ಭೂತಲದೆ ಕುಂದಲ್ಲವೇ ಪೊರೆ ದೀನಜನಬಂಧು ॥ ೧ ॥

ಒರೆವೆನಾನಿನ್ನೊಂದುಭಾವುಕ ॥ ಚರಿತೆಯಂ ಪದಪಿಂದ ಸೊನ್ನಲ । ಪುರಕೆ ಗುರುಳೆಯಬೇನೆ ಮೊದಲಡಸಿದ ಸಮಯದಲ್ಲಿ ॥ ನರರ ಮರಣದ ಗಣನೆ ಹೆಚ್ಚು । ತ್ತಿರುವ ನೆವದಿಂ ಪತ್ತುದಿನಗಳ । ವರೆಗೆ ಪುರಮಂ ಬಿಟ್ಟು ಪೊರಗಿರಬೇಕೆನುತ್ತೊರೆದು ॥ ೨ ॥

ಬಲುಹಿನಿಂ ಸರಕಾರದವರು । ಪೊಳಲಿಗರನೆಲ್ಲರನು ವಿಪಿನಕೆ । ಕಳುಹುತಂ ನೀವುಂ ತೊಲಗಿರೆಂದೀ ಶರಣಗೊರೆಯೆ ॥ ತಳರ್ದೊಡಡವಿಯೊಳಿವರ ವ್ರತಮದು । ಸಲೆನಡೆಯದದರಿಂದ ಪುರದೊಳು ॥ ನೆಲಸಲಪ್ಪಣೆಗೊಡಿರೆನುತ್ತೊರೆದರ್ಕೆಲಬರವರ್ಗೆ ॥ ೩ ॥

ಶರಣವರ್ಯನ ಕೃಶಶರೀರವ । ನಿರುಕಿಸಿ ರುಜಾಯುಕ್ತನಿಹನೆಂ । ದರಿದು ಪೋಗಲಿ ಶರಣನೋರ್ವನೆ ಪೊರಗೆ ಮನೆಯುವರು ॥ ಪುರದೊಳಾದೊಡಮಿರಲಿಯೆನುತಾ । ದರದಿನಾ ಸರಕಾರದವರಂ । ದೊರೆಯುಲದನಾಲಿಸಿದೊಡನೆ ಮನಸಿನೊಳು ಸ್ಥೈರಿಸದೆ ॥ ೪ ॥

ಅಡವಿಗೋರ್ವರೆ ಪೋದೊಡಿವರಂ । ಬಿಡದಲುಪಚರಿಸುವರದಾರೆಂ । ದೊಡನೆ ಶ್ರೀಗುರುದೇವಿ ಬೆಸಗೊಳೆ ನೀವುಮಿವರೊಡನೆ ॥ ನಡಿಯಿರೆಂದಧಿಕಾರಿಗಳು ನೆರೆ । ನುಡಿದರಾದೊಡೆ ಕೂಸನೊಂದನೆ । ಬಿಡುವದಿದನೆಂತೆಂದು ಮುಗುಳ್ದವಳವರ್ಗಳಂ ಕೇಳೆ ॥ ೫ ॥

ಕೂಸನುಂ ಕರೆದೊಯ್ಯಿರೆನಲಾ । ವಾಸಮಂ ಬಿಟ್ಟಡವಿಗೈತಂ । ದಾ ಸಕಲಲಿಂಗಿಗಳ ನೆರೆಯೊಳು ಹುಲ್ಲಗುಡಿಸಿಲೊಳು ॥ ವಾಸಿಸಿದರವರೆಲ್ಲರಿಸ್ನಾ । ನೇಸುಹೇಳಲಿ ನಿರಶನದೆ ವೀ । ರಾಸನವನೇ ಬಲಿದು ಕುಳಿತನು ಶರಣಪುಂಗವನು ॥ ೬ ॥

ಮಿಸುಕದೇನೊಂದುಸುರದಾಲಿಸ । ದಸಮಶಿವಲಿಂಗಾರ್ಚನಾಮೃತ । ರಸವನಾಸ್ವಾದಿಸಲುಬೇಕಾನೆಂದು ಯೋಚಿಸದೆ ॥ ಉಸುರುಗರೆವುತ ಕೋಪಮುದ್ರೆಯ । ಮುಸುಡಿನಿಂ ಕೆಂಗಣ್ಗಳಿಂದಂ । ಪೊಸ ಬಗೆಯ ಭೈರವನವೊಲ್ಕಂಗೆಸೆದನಿವನರರೇ ॥ ೭ ॥

ಇಂದು ಪ್ರಮಥಾರಾಧನೆಯು ತಾಂ । ನಿಂದುದೆಂದುದಿಸಿರ್ದ ಮುನಿಸುಂ । ಪೊಂದಿದೀ ಕೋಪಾಗ್ನಿಯಂ ನೊಂದಿಪ ಶಮಾಜಲವು ॥ ಕುಂದದೀಡೇರಿರ್ದ ಕಾರಣ । ದಿಂದಮೆರಡುಂ ಕಾರ್ಯಶೂನ್ಯ । ತ್ವಂದಳೆದವಿವನವೊಲು ನಿಷ್ಕ್ರಿಯರಾರಿದಂತಿರಲಿ ॥ ೮ ॥

ನಿರಶನವ್ರತಮಂ ಪಿಡಿದರೀ । ಶರಣನೊಡನಾ ಸತಿಸುತೆಯರುಂ । ಮರುದಿನಂಗುರುದೇವಿ ಪತಿಯಡಿಗೆರಗಿ ನೀವಿಲ್ಲಿ ॥ ನಿರಶನವ್ರತರಾದೊಡಾಗಲಿ । ಪರಮಶಿವಪೂಜಾನಿಯಮಮಂ । ತೊರೆವುದೆತ್ತಣನೀತಿಯದರಪರಾಧವೇನೆನಲು ॥ ೯ ॥

ಕಡುರದದ್ಯುತಿಯುಸ್ಮೆಯಂತಾ । ದೊಡೆ ಶಿವಾರ್ಚನೆಯದನು ನೀವೇ । ಬಿಡದೆ ಮಾಡಿಸಿರೆಂದಿವಂ ಪೇಳಲ್ಮಹಾಸತಿಯು ॥ ಕಡುಹಿನಿಂದಂ ಮೊದಲು ಕುಳ್ಳಿ । ರ್ದಡೆಯೊಳೆಬ್ಬಿಸದಂತೆ ಪತಿಯಂ । ಮುಡಿಯನೀರಿಂ ಮಿನಿಸಿ ಭಸಿತವಧರಿಸಿ ವಿಧಿವಿಡಿದು ॥ ೧೦ ॥

ಲಿಂಗಪೂಜೆಯನಂದು ನಲವಿಂ । ಸಾಂಗಮೆನೆ ಮಾಡಿಸಿದಳಾ ಶೋ । ಭಾಂಗಿಯಿಂತಾಚರಿಸುತಿರೆ ಕಟ್ಟಳೆಯನನುಸರಿಸಿ ॥ ಪಿಂಗದಾಂಗ್ಲಸುವೈದ್ಯರೆಲ್ಲ ಜ । ನಂಗಳಂ ಪರಿಕಿಸುತೆ ಬಂದೀ । ತುಂಗಶರಣಕೃಶಾಂಗಮಂ ನಿರುಕಿಸಿ ಬೆರಗುವಡೆದು ॥ ೧೧ ॥

ಇನಿತು ಕೃಶನಾಗಿರುವ ತೆರನೇ । ನೆನುತ ಬೆಸಗೊಳಲೀ ಮಹಾತ್ಮರ । ತನುವೆ ಹೀಗಿಹುದಾಗಳೆಂದಾ ಸತಿಯೊರೆಯಲದಕೆ ॥ ಮನವೊಡಂಬಡದಿವಗೆ ರೋಗಂ । ಜನಿಸಿರುವದೆಂದೌಷಧವ ಗಾ । ಜಿನ ಮಡಕಿಯೊಳು ತುಂಬಿ ಕೊಳ್ಳಿರಿ ಎಂದು ಕೊಡಬರಲು ॥ ೧೨ ॥

ಬೇಡವಿದನೆಂದಾಡಲಾರದೆ । ಮಾಡಿದೊತ್ತಾಯಕೆ ತದಗದಕೆ । ನೀಡಿದಾ ಪತ್ನಿಯ ಕರಾಬ್ಜವ ಚೆತ್ತದಿಂ ಪೊಯ್ಯೆ ॥ ನೋಡಿ ಮುಳಿದಿಂತೇತಕೀತಂ । ತಾಡಿಸಿದನೆಂದಾಂಗ್ಲವೈದ್ಯರು । ನಾಡೆ ಬೆಸಗೊಳೆ ಮೋಸವಿಲ್ಲದೆ ವಿನಯಭಾವದೊಳು ॥ ೧೩ ॥

ನೀರಿನೊಳು ಬೆರೆದೌಷಧವನಾ । ಚಾರಯುತರಿವರೊಪ್ಪರೆಂದಾ । ತೋರಮುಡಿಯಳ್ಪೇಳಲದನರಿದೌಷಧದ ಪುಡಿಯ ॥ ಗೌರವಿಸಿ ಗುರುದೇವಿಯು ಕರಾಂ । ಭೋರುಹದೆ ಕೊಟ್ಟದರೊಳಿನಿತುರೆ । ನೀರ ಕೂಡಿಸಿ ಕುಡಿಸಿರೆಂದವರೊರೆದು ಗಮಿಸಿದರು ॥ ೧೪ ॥

ಗದಕೆ ಪತಿ ಭೇಷಜವ ಕೊಳದಿ । ರ್ಪುದನು ತಾನರಿದಿರ್ದೊಡುಂತ । ತ್ಸದತಿ ವೈದ್ಯರ ಚಿತ್ತಕೆ ಸಮಾಧಾನಮಕ್ಕೆಂದು ॥ ತದಗದವಕೊಂಡಂದು ಚೇಲದೆ । ಮುದುಡಿ ಕಟಯೊಳು ಮಡುಗಿಕೊಂಡಿರ । ಲದು ಚರಿಸುವೆಡೆಯಲ್ಲಿ ಬೀಳ್ವದು ಪೊರಗೆ ಮರವೆಯೊಳು ॥ ೧೫ ॥

ಮರುದಿನಂ ತದ್ವೈದ್ಯರಲ್ಲಿಗೆ । ಭರದೆ ತಮ್ಮಯ ನಿಯಮದಂ । ತೆಲ್ಲರನು ಪರಿಕಿಸುತ್ತೈದುತಿರಲಾಕಸ್ಮಿಕಂ ಪಥದೆ ॥ ಪಿರಿಯವೈದ್ಯನ ಕೈಯೊಳಾ ಪುಡಿ । ಯಿರುವ ಪೊಟ್ಟಣಮದು ಸಿಗಲು ತ । ತ್ಸರಸಿಜಾಕ್ಷಿಯು ಕಂಡು ತಿಳಿಯದನಂತವಂ ನಯದೆ ॥ ೧೬ ॥

ನಿನ್ನೆ ಕೊಟ್ಟೌಷಧವನೀ ಸುಗು । ಣೋನ್ನತಗೆ ನೀವಿತ್ತಿರೇನೌ । ವೆನ್ನುತಂ ಬೆಸಗೊಳ್ಳಲದಕವಳಹುದೆನಲ್ಕೇಳಿ ॥ ನನ್ನಿಯನು ನುಡಿಯದಲೆ ನೀವಿಂ । ತೆನ್ನೊಳೇತಕೆ ಸುಳ್ಳನೊರೆವಿರಿ । ಮನ್ನಣೆಯಪೊಂದಿರುವ ನಿಮಗಿದು ಯೋಗ್ಯವೇ ನೋಡಿ ॥ ೧೭ ॥

ರೋಗಪರಿಹಾರಾರ್ಥಮಾವನು । ರಾಗದಿಂದಿತ್ತೌಷಧವನೀ । ವೀಗಳ ವರಿಗೆ ಕೊಡದೆ ಬಿಸುಡಿ ವೃಥಾವೃಷೆಯನೊರೆದು ॥ ಭೋಗದಾಯಕಪತಿಯ ಸೇವಾ । ಯೋಗಮಂ ಸಾಧಿಸದೆ ಪಳಿಗೀ । ಡಾಗುವದಿದಾವೆಳ್ಗೆಯೌವೆಂದಾ ಪುಡಿಯ ತೋರೆ ॥ ೧೮ ॥

ಏನು ಹೇಳುವದಪ್ಪಗಳಿರಾ । ಜ್ಞಾನಮಯರಾದೀ ಧರಿತ್ರೀ । ಮಾನ ನೀಯರಿಗಿಲ್ಲರೋಗಂ ರೋಗಕೌಷಧವ ॥ ಏನುಮೆಂದುಂ ಕೊಳ್ಳದಿರ್ಪರು । ಕಾನನದೊಳಿನ್ನೆವರಮನ್ನಂ । ಪಾನಮಿಲ್ಲಂ ಮಿಸುಕದಂತಿಹರೆಂದವಳು ಬೆಸಸೆ ॥ ೧೯ ॥

ಮೇಲೆನಿಪ ಪಾಶ್ಚಾತ್ಯವೈದ್ಯಂ । ಕೇಳಿ ಘನಕಾರುಣ್ಯಭಾವಂ । ದಾಳಿ ಪುರದೊಳು ಪೋಗಲಪ್ಪಣೆಯಿೞಯಲದಕಿವನು ॥ ಏಳುದಿನದೊಳಗೆಲ್ಲರಂ ಬಿ । ಟ್ಟೇಳುವದು ಸರಿಯಲ್ಲಮೆನಗೆನು । ತೋಳಿಯಿಂದಂ ಪತ್ತುದಿನಮಿರ್ದಾಂ ಗುಡಿಸಿಲಲ್ಲಿ ॥ ೨೦ ॥

ಪತ್ತುದಿನವಾದೊಡನೆ ಜನರೊಡ । ನುತ್ತಮಶ್ರೀಶರಣನತಿಮುದ । ವೆತ್ತುನಡೆದಂ ಚಿಗರೆಯೆಂದದೆ ಪುರಕೆ ಪಾರುತ್ತ ॥ ಎತ್ತಣಿಂ ಬಲಪೊದಗಿ ದತ್ತೋ । ಬಿತ್ತರಿಸಲಳವಲ್ಲಮಿವನಾ । ಹೊತ್ತು ಮನೆಗೈತಂದ ಸಂಭ್ರಮಮಂ ಬುಧವ್ರಜಕೆ ॥ ೨೧ ॥

ಮನೆಯೊಳಿನಿಸುಂ ಧಾನ್ಯಮಿಲ್ಲಂ । ಧನಮದಿಲ್ಲಂ ಪತ್ತುದಿವಸಂ । ವಿನುತಕಾಯಕಮಿಲ್ಲ ಕಾಯಕಕಂದು ಪೊಳ್ತಿಲ್ಲ ॥ ಘನವೆನಿಪ ದಾಸೋಹ ವನದಾ । ದಿನವೆಸಪುದೆಂತದನು ಮಾಡದೆ । ಮನೆಯೊಳೆಲ್ಲರಿಗಪ್ಪ ತಣಿವೆಂತೆಂತಿ ರಲುಮಿವನು ॥ ೨೨ ॥

ಚಿಂತೆಯಂ ಮಾಡದಲೆ ಘನಸ । ಚ್ಚಿಂತನದೆ ಕುಳ್ಳಿರ್ದು ಮರುದಿನ । ವಂತರಿಸದುದಯದೊಳು ಸ್ನಾನಾರ್ಚನಗಳಂ ತೀರ್ಚಿ ॥ ಸಂತಸದೆ ಪೊರಮಟ್ಟು ಪುರದೊಳು । ತಾಂ ತಳುವದಾ ಕಾಯಕದಿನ । ತ್ಯಂತಪಾವನತರಪದಾರ್ಥ ವನೆಲ್ಲಮಂ ತರಲು ॥ ೨೩ ॥

ಕುಂದದಭವಧ್ಯಾನವಿಭವಾ । ನಂದದಿಂದಂ ಷಡ್ರಸಂಮಿಗೆ । ಯಂದು ಪಾಕವನೆಸಗಿದಳ್ಗುರುದೇವಿಯನಿತರೊಳು ॥ ಇಂದುಧರಶರಣಾಗ್ರಗಣ್ಯನ । ಮಂದಿರವುದಾವುದೆನುತರಸುತ । ಬಂದನೋರ್ವಗಣೇಂದ್ರನವನಾಕಸ್ಮಿಕಂ ಪುರದೆ ॥ ೨೪ ॥

ಆರು ನೀನೆಲ್ಲಿಂದ ಬಂದೈ । ವೀರಮಾಹೇಶ್ವರನೆ ನಿಮ್ಮಾ । ಗಾರವಲ್ಲಿ ಹುದೇಸುಜನರಿರುತಿರ್ಪಿರ್ರೈ ನೀವು ॥ ವೀರಶರಣನ ಪರಿಚಯುವ ನಿನ । ಗಾರು ಪೇಳಿದರೆಂದು ಕೇಳ್ದನು । ದಾರನಹ ಚಪ್ಪಲಿಗೆಯಾ ಶಾಂತಪ್ಪನೆಂಬವನು ॥ ೨೫ ॥

ಎಲವೊ ಕೇಳಾನೋರ್ವಗಣವರ । ನಲಸದಲೆ ಕಲ್ಯಾಣದಿಂ ಬಂ । ದುಳಿವಿರುವೆವಾ ಸಿದ್ಧರಾಮೇಶ್ವರನ ಗುಡಿಯುಲ್ಲಿ ॥ ಅಲಘುತರದ ತ್ರಿಷಷ್ಠಿಗಣ ಪರು । ಮಿಳಿತರಾಗಿರ್ಪೆವು ಶರಣನಿಂ । ದೊಲಿದೆಮಗೆ ಬಿನ್ನಪವ ಮಾಡಿಹ ನೆಂದವಂಗೊರೆದು ॥ ೨೬ ॥

ನಿಲ್ಲದಾ ಗಣಪುಂಗವಂ ಶ್ರೀ । ಸಲ್ಲಲಿತಶರಣಾಲಯಕೆ ನಡೆ । ದಲ್ಲಿ ನೆರೆದರುವತ್ತುಮೂರು ಗಣೇಂದ್ರರೊಡಗೂಡಿ ॥ ಸಲ್ಲಿದ ಪ್ರಸಾದವನು ಮುದದಿಂ । ಮೆಲ್ಲುತನುಭವಸಿದ್ಧಮಾಗಿಹ । ಮೆಲ್ಲುಲಿಗಳಂ ನುಡಿವುತಂ ತಣಿದರ್ಮಹೋತ್ಸವದೆ ॥ ೨೭ ॥

ಬಳಿಕವರ್ಶರಣಗೆ ಪ್ರಸಾದವ । ನೊಲೆದು ಕರುಣಿಸಿ ಪೋದರಿತ್ತಲು । ತಳುವದಾ ಶಾಂತಪ್ಪನಾಲೋಚಿಸಿದನವಸರಕೆ । ಸಲೆ ಗಣಂಗಳ್ಪೊರೆಯು ದುದರಿಂ । ಚೆಲುವ ಗರ್ದುಗೆಯಿಕ್ಕಿಯುದಕಾ । ನೊಲೆದವರ ಪೆಸರಿಂ ನಿವೇದಿಸಿ ಭುಂಜಿಸುತಲಿಹೆನು ॥ ೨೮ ॥

ಇಂದು ಮಾಹೇಶ್ವರರಸಂದಣಿ । ಬಂದಿರುವವದದನಾಂ ನಿಲಯಕಾ । ನಂದದಿಂ ಕರತಂದು ತಣಿಸಲೆನುತ್ತ ಮನದಂದು । ಸುಂದರಶ್ರೀಸಿದ್ಧರಾಮನ । ಮಂದವಹ ದೇಗುಲಕೆ ನಡೆತಂ । ದಂದು ಪುಡುಕಿದನೆಲ್ಲಕಡೆಯೊಳ್ಕಾಣಲಿಲ್ಲಾರುಂ ॥ ೨೯ ॥

ಮೃಡಗಣಗಳಾರಾದೊಡುಮದೀ । ಗುಡಿಯೊಳ್ಳೈತಂದಿರ್ದರೇನಿಂ । ದೊಡೆಯನೆನಿಸಿದ ಶರಣಪುಂಗವನವರಿಗೌತಣವ ॥ ಕೊಡಲುನಡೆತಂದಿರ್ದನೇನೆಂ । ದೊಡನೆ ಬೆಸಗೊಳಲಾರುಮಿಾ ಗುಡಿ । ಯೆಡೆಗೆ ಬಂದಿಲ್ಲೆಂದು ಪೂಜಾರಿಗಳೊರೆದರವಗೆ ॥ ೩೦ ॥

ಏನಿದಚ್ಚರಿ ಗಣವರೇಣ್ಯನ । ನೂನರೂಪವ ತೋರಿ ದಿಟವೆನೆ । ತಾನು ಪೇಳಿದ ವಚನಮಂ ಕೇಳ್ದಿಲ್ಲಿಗೈತಂದು ॥ ನಾನು ನೋಡಿ ವಿಚಾರಿಸಲು ಮಹಿ । ಮಾನುಭಾವಿಗಳಾರುಮಿಲ್ಲನು । ಮಾನಮಾಯ್ತುವನೇ ಶಿವಪ್ರಮಥೇಂದ್ರನಿರಲಹುದು ॥ ೩೧ ॥

ಅರಿಯದಾದೆನು ತತ್ಸ್ವರೂಪವ । ನೆರಗದಾದೆನು ತತ್ಪದಾಬ್ಜಕೆ । ಕರೆಯದಾದೆನು ಮನೆಗೆ ಪೂಜಿಸದಾದೆನಾತನನು ॥ ಮರುಳನಾದೆನು ಹರನ ಗುರುತದು । ಹರನವರಿಗಲ್ಲದೆ ಪೆರರ್ಗೆ ಗೋ । ಚರಿಸದೆಂದು ಮರುಂಗಿದನು ಶಾಂತಾಹ್ವಯಂ ಮತ್ತೆ ॥ ೩೨ ॥

ಸೊನ್ನಲಿಗೆಯೊಳು ಪ್ರಾಥಮಿಕಶಾ । ಲೋನ್ನತಾಧ್ಯಾಪಕತೆಯಿಂದಿಹ । ಚೆನ್ನಮಲ್ಲಾರ್ಯನೆನಿಪೋರ್ವಗಣಾಧಿಪನ ಸತಿಗೆ ॥ ಬನ್ನಬಡಿಸುವ ರುಜೆಯಡಸಿದುದ । ರಿಂ ನವೆದು ಕಾಯದ ಮರವೆಯೊಗೆ । ದುನ್ನಿಸಲ್ಕರಿದಾದಪಾಯದೊಳಿರ್ದಳವಳೊಮ್ಮೆ ॥ ೩೩ ॥

ಎನಿತುಪಾಯಂಗೈದೊಡುಂ ಮಗು । ಳ್ದನಿತಪಾಯಂ ಪೆರ್ಚುತಿರೆ ಕಂ । ಡಿನಿಯಳಾಶೆಯನುಳಿದನನಿಯಂ ಬದುಕಳಿವಳೆಂದು ॥ ಮನೆಯವರು ತಜ್ಜೀವಶವಮಂ । ಜನದ ಹರಲಿಗೆ ಬೆದರಿ ಸುಮ್ಮನೆ । ಕನಿಕರವ ಬಿಟ್ಟುಪಚರಿಸಲಾದ ಪ್ರಯಾಸದೊಳು ॥ ೩೪ ॥

ಮಡಿವಳಿವಳಿದು ನಿಶ್ಚಯಂ ಮೇ । ಣ್ಕುಡುಚೆಲುವ ಕನ್ನಿಕೆಯೆನಿಸಿದಾ । ಮೃಡಶರಣಪುತ್ರಿಕೆಯನೀಯಯ್ಯಂಗೆ ಸಂಭ್ರಮದೆ ॥ ಕೊಡಿಸಿ ಮದುವೆಯ ಮಾಡಬೇಕೆಂ । ದೊಡನೆ ಯೋಚಿಸಿ ಶರಣನಿಲಯಕೆ । ನಡೆದರಾ ಗಣವರನ ಪ್ರೇಮದ ಮಿತ್ರರೊಳ್ಕೆಲರು ॥ ೩೫ ॥

ಆ ಸಮಯದೊಳು ಶರಣನು ನಿಜಾ । ವಾಸದೊಳಗಿಲ್ಲದುದರಿಂ ನಿ । ರ್ವಾಸನದ ಗುರುದೇವಿಯಂ ಕಂಡವ್ವ ನಾವಿಂದು ॥ ಲೇಸುಮಿಗೆ ನಿಮ್ಮಯ ತನುಜೆಯಂ । ಭಾಸುರಗಣಾಧೀಶಗೋರ್ವ್ವಂ । ಗಾಶೆಯಿಂದಂ ಬೇಡಬಂದಿಹೆ ವೆಂದರವರಂದು ॥ ೩೬ ॥

ಆವ ಪ್ರಮಥನಿಗಾಗಿ ಕನ್ಯೆಯ । ನೀವು ಬೇಡಲುಬಂದಿರುವಿರಾ । ದೇವನೆಡೆಗೀ ಮಾತನಾಡಲು ಶರಣರೈದಿಹರು ॥ ಈ ವಿಚಾರಮಸಾಧ್ಯಮಿ ವರ್ಗೆಂ । ದೀ ವಿಮಲೆ ನುಡಿದೊಳಗೆಪೋದಳು । ತಾವೆ ಮರುಳ್ದಸುರ್ಗಮ್ಮನೇ ಬೆರಗಾಗಿ ಪೋದವರು ॥ ೩೭ ॥

ನಟ್ಟಡವಿಯೊಳು ಕೋಪದೃಕ್ಕಿಂ । ನಿಟ್ಟಿಸಿ ಜಿತಾಕ್ಷನು ವಿಹಗಮಂ । ಸುಟ್ಟುದಂ ನಿಜಗೃಹದೆ ಕಂಡಾ ಮೊದಲ ಹದಿಬದೆಯ ॥ ದಿಟ್ಟಗಿಂ ಮುಂದಪ್ಪ ಬಗೆಯಂ । ನೆಟ್ಟನರಿದೀ ಶರಣಸತಿಗಳ । ವಟ್ಟ ಚಿದ್ದೃಷ್ಟಿಯದಧಿಕಮೆಂದಾ ರೊಡಂಬಡರು ॥ ೩೮ ॥

ಪುರದೆ ಕಾಯಕವೆಸಗುತಂ ಸಂ । ಚರಿಪೆಡೆಯೊಳೀ ಶರಣನಾ ಪಾ । ಮರರಬಗೆಯಂ ತನ್ನದಿವ್ಯಜ್ಞಾನದಿಂದರಿದು ॥ ಭರದೊಳಾ ಗಣವರನ ಶಾಲೆಗೆ । ಪರಿದು ಬಂದವನೆದುರಿನೊಳು ನಿಜ । ಕರಗಳಂ ಮುಗಿದೊಂದೆ ಕಾಲಿಂ ನಿಂದನಲುಗದಲೆ ॥ ೩೯ ॥

ತನಗಿದೇನುಂ ಗುರುತಿರದ ತ । ದ್ವಿನಯಪರಮಾಹೇಶ್ವರಂ ಕಂ । ಡನಘಶರಣನೆ ಪೇಳಿದೇನೇಕೆಂದು ತತ್ಕ್ಷಣದೆ ॥ ಮನಸಿನೊಳು ಬೆರಗಾಗಿ ಬೆಸಗೊಳೆ । ಜನಕ ನಿನಗಿದು ಗುರುತು ನಿಮ್ಮಯ । ತನಯನಾದಿವನೊರೆವು ದೇಕೆನಲದನರಿಯದವನು ॥ ೪೦ ॥

ಜನಕನಾನಹುದಾದೊಡೇನಾ । ಯ್ತೆನಗೆ ತನುಭವನಾದ ನೀನದ । ನನುನಯದೆ ತಿಳಿಸದೊಡೆ ತಿಳಿವುದದೆಂತು ಪೇಳೆಂದು ॥ ಘನಗಭೀರತೆಯಿಂದ ಕೇಳ । ಲ್ಕಿನುಪ ರದನದ್ಯೋತಿ ಕೌಮುದಿ । ಯನು ತೆಗಳುವಂತುಣ್ಮೆ ಶರಣಂ ಮೃದುಲವಚನದೊಳು ॥ ೪೧ ॥

ಜನನಿಗಡಸಿದ ಬೇನೆಯದು ನೆ । ಟ್ಟನೆ ತೊಲಂಗುವದಿಂದು ಸಂಶಯ । ಮಿನಿಸುಮಿಲ್ಲಂ ಮತ್ತೆ ಮದುವೆಯ ಮಾಡಬೇಕೆಂದು ॥ ತನಯನಾದೀ ಮೂಳನಾತ್ಮಜೆ । ಯನು ಬಯಸಿ ಬೇಡುವದದೇಕೆಪ । ಎನುತ ನುಡಿಯ ಲ್ಕೇಳ್ದು ತಚ್ಛಿಕ್ಷಕನು ಧೃತಿಗುಂದಿ ॥ ೪೨ ॥

ಬೇರೆ ಮದುವೆಯ ಮಾಡಿಕೊಳಲೆಂ । ದಾರು ಬಯಸಿಹರೀ ಪ್ರಸಂಗೋ । ದ್ಗಾರವೆಲ್ಲಿಂದೊಗೆದುದೆಂದು ವಿಚಾರಮಂ ಮಾಡಿ ॥ ಆರಯಿದು ನಿಜ ಮಿತ್ರರಂ ಪರಿ । ಚಾರರಿಂ ಕರತರಿಸಿ ಜರುಗಿ । ರ್ದಾ ರಹಸ್ಯವ ಕೇಳಿ ತಿಳಿದತಿಕು ಪಿತಮನನಾಗಿ ॥ ೪೩ ॥

ಎಲವೊ ನಿಮಗಿಂತೆಸಗಿರೆಂದಾ । ರ್ತಿಳಿಸಿದರು ಮತಿಗೇಡಿಗಳೆ ಮ । ಲ್ಲಲನೆಯಿನ್ನುಂ ಜೀವದಿಂದಿರ್ದಿಂತು ಯತ್ನಿಪರೆ ॥ ಅಳಿವಳೀ ಹಿತಪತ್ನಿ ಯೆಂಬೀ । ಕಳವಳವೆ ಸೈರಿಸದನಿತು ಮನ । ದೊಳಗೆ ಬಾಧಿಸುವೆಡೆಯೊಳಿದ ನೊಂದೆಸಗಿದಿರಿ ಸಖರೆ ॥ ೪೪ ॥

ಹೊಲಬನರಿಯದೆ ಶರಣಸುತೆಯಂ । ತಿಳಿಯದೆನಗರ್ಥಿಸಿ ಮಹಾತ್ಮನ । ಮುಳಿಸಿಗೆನ್ನಂ ಗುರಿಯಮಾಡಿದಿರಕಟಖೋಡಿಗಳೇ ॥ ನೆಲದೊಳಿದು ಮುಂದಾವ ದುಸ್ತರ । ಫಲವನುಣಿಪುದೊ ಶಿವಶಿವಾ ಎಂ । ದಳುಕಿ ಭಂಗಿಸುತಿರಲವರು ನಾಣ್ಣಳೆದು ತಲೆವಾಗೆ ॥ ೪೫ ॥

ಅನಿತರೊಳು ಸಹಿಸುವದುಚಿತವೆಪ । ಮನಕೆ ತಾಪಂ ಪೊಲ್ಲವೆಪ ದುಗು । ಡನು ತಮಗಿವಂ ಕೊಟ್ಟುದತ್ಯಪರಾಧವೆಪ ಎನುತಾ ॥ ವಿನತನಾಗಿ ತದಾಲಯಕೆ ನಡೆ । ದನು ನಯದೊಳಾ ರೋಗಪೀಡಿತ । ವನಿತೆಗೌತಣವಿತ್ತು ಶರಣಂ ಪೋದನಲ್ಲಿಯೊಳು ॥ ೪೬ ॥

ಘೋರವಮೃತ್ಯುವಿನುಗ್ರಮುಖದೊಳು । ಸೇರಿ ಕರಣಗಳಾಟವಡಗಿ ಶ । ರೀರದೆಚ್ಚರ್ಸರಿದು ಬೀಳ್ವೀ ಪೆಣಕೆ ಬಿನ್ನಪವ ॥ ವೀರಶರಣಂ ಕೈದನಿವನವಿ । ಚಾರಿಯಲ್ಲವೆ ಶರಣನಾನೆಂ । ಬೇರಿಕೆಯ ಬಿಂಕದೊಳು ಮೈಮರೆದಿಹನು ನಗರದೊಳು ॥ ೪೭ ॥

ಎಂತು ಕರೆದೊಯ್ವಂ ನಿಜಾಲಯ । ಕೆಂತಿವಳನುಣಿಸುವನು ನೋಳ್ಪೊಡೆ । ಭ್ರಾಂತನಿಹನಿವನೆಗ್ಗನೆಂಬುದು ಪರ್ಬಿದುದು ನೆಲದೆ ॥ ಇಂತು ಗೊಡ್ಡಾಟಗಳು ತನಗೇ । ಕಂತೆ ಸುಮ್ಮನೆನುತ್ತ ಮನೆಯುವ । ರಂತರಿಸದೇಳಿಸಿದರಾ ಸಮಯದೊಳು ಶಿಕ್ಷಕನು ॥ ೪೮ ॥

ಸಾಲೆಯಿಂದೈತಂದಿದೆಲ್ಲವ । ಕೇಳಿ ಶರಣೋತ್ತಂಸನಂ ನೀ । ವೇಳಿಸುವದೊಳಿತಲ್ಲ ಪಾಪಂ ಬರ್ಪುದೌತಣವ ॥ ಪೇಳಿದಾತಂ ಕರೆದುಕೊಂಡು ನಿ । ಜಾಲಯಕೆ ತಾಂ ಪೋಗಲರಿಯನೆ । ಹಾಳುನುಡಿನಿಮಗೇಕೆನುತ್ತವರಂ ಮುನಿದನವನು ॥ ೪೯ ॥

ಅಂದು ಮಧ್ಯಾಹ್ನದೊಳು ಭೋಜನ । ಕೆಂದು ತದ್ರೋಗಿಣಿಯಕರೆಯಲು । ಬಂದನೊಂದೆತ್ತಿನಶಕಟಮಂ ಬೇಡಿ ತಕ್ಕೊಂಡು ॥ ಕುಂದದಾಕೆಯ ರಟ್ಟೆಯಂ ಪಿಡಿ । ದಂದವೆನೆ ತಾಯಂತೆ ಬಿಡದಾ । ನಂದದಿಂ ಬಂಡಿಯೊಳು ಮಲಗಿಸಿ ಮನೆಗೆ ಕರೆತಂದು ॥ ೫೦ ॥

ಕುತ್ತಿಗೆಯೊಳರೆಗುಟುಗುನೊರೆವಾ । ಉತ್ತರಿಸಲಸದಳವೆನಿಸಿ ಬಳ । ಲುತ್ತಿರುವ ತನ್ಮಹಿಳೆಯೊಪ್ಪಿಡಿಮುದ್ದಿಯನು ತಾನೆ ॥ ತುತ್ತುಮಾಡುತ್ತಿಂಪು ಮಿಗೆ ಸವಿ । ದೊತ್ತರದೊಳಾರೋಗ್ಯಭಾವಂ । ಬೆತ್ತ ಕುತ್ತಂ ಗೆಲ್ವೆನೆಂದಳು ಚಿತ್ತಮುತ್ಸವಿಸಿ ॥ ೫೧ ॥

ಮರುಳೆ ನಡೆದಾಂ ಮನೆಗೆ ಪೋಪೆನು । ಕರುಣಿಸಾಜ್ಞೆಯನೆಂದವಳ್ಸಾ । ದರದೆ ಬೇಡಲ್ಕೇಳಿ ಬೇಡೌ ತಾಯೆ ನಿನ್ನನ್ನು ॥ ಕರುಣವಿಲ್ಲದೆ ನಡಿಸಿಕಳಿಸಿದೊ । ಡರಿದು ಮತ್ಪಿತನಾದ ಮಾಹೇ । ಶ್ವರವರಶ್ರೀಚನ್ನಮಲ್ಲಾರ್ಯಂ ಮುನಿಯದಿಹನೇ ॥ ೫೨ ॥

ಬಂಡಿಯೊಳು ಕರೆತಂದು ಮುಗುಳ್ದೀ । ಕೆಂಡದಂತಹ ಬಿಸಿಲಿನೊಳು ಪದೆ । ದುಂಡ ತಾಯುಂ ನಡಿಸಿ ಕಳಿಸಿದನೆಂದು ಜನರೆನ್ನ ॥ ಬಂಡುಮಾಡದ ಲಿರರೆನುತ್ತಾ । ಬಂಡಿಯೊಳು ಕುಳ್ಳಿರಿಸಿಕೊಂಡುರೆ । ಗಂಡನುತ್ಸವವಾಳೆ ಕಳು ಹಿದನವಳನಾಲಯಕೆ ॥ ೫೩ ॥

ಒಣಗುವೊಳ್ವಳ್ಳಿಗೆ ಪೊಡರ್ಪಿಂ । ದಣಿಯುರಂ ನೀರೆರೆದ ಬಗೆಯಿಂ । ಪ್ರಣುತಶರಣನ ಸುಪ್ರಸಾದಾರ್ಪಣದನೆವದಿಂದ ॥ ತಣಿದು ಕಳೆ ಬಲಮುತ್ಸವಂ ತ । ದ್ಗಣಸತಿಯ ತನುವಿನೊಳು ಬೆಳೆದವ । ಳೆಣಿಸಲಿಪ್ಪತ್ತೊಂದುಮಕ್ಕಳ ಪೆತ್ತು ಸುಖಮಿಹಳು ॥ ೫೪ ॥

ವೀರಶರಣಂ ಭಾಸುರನಿಜಾ । ಗಾರದ ಪುರೋಭಾಗದೊಳು ವಿ । ಸ್ತಾರ ಮೆನೆ ಚಳ್ಳುವರಿಯುಂ ಬೆಳಸಿರ್ದನದು ಪರ್ಬಿ ॥ ತೋರಕಾಯ್ಗೊಂಚಲುಗಳಿಂ ಮಿತಿ । ಮೀರಿ ಕಣ್ಗೋಲಮುನವುರ್ಚಲು । ನಾರಿಯೋರ್ವಳದಂ ನಿರೀಕ್ಷಿಸಿ ಬೆರಗುವಡೆದೆಳಸಿ ॥ ೫೫ ॥

ಚಳ್ಳುವರಿಕಾಯ್ಪಲ್ಯೆಯುಂ ಬಿಳಿ । ಯೆಳ್ಳುಹಚ್ಚಿ ನೆಗಳ್ದ ಸೆಜ್ಜೆಯ । ತೆಳ್ಳಗಿಹ ರೊಟ್ಟಿಗಳು ತಿನ್ನಲಿಕತಿರುಚಿಯುವೆನಗೆ ॥ ಎಲ್ಲಿ ಸಿಗಬೇಕೆಂದು ಮಾನಸ । ದಲ್ಲಿ ಬಯುಸುತ ತನ್ನತಾಣಕೆ । ನಿಲ್ಲದೈತಂದದನು ಮರೆಯುದ ಲಿರ್ದಳವಳಂದು ॥ ೫೬ ॥

ಮರುದಿನಂ ಮುಂಜಾವಿನೊಳು ಶಿವ । ಶರಣನೆಳ್ಳುಂ ಸೆಜ್ಜೆಯಂ ಮೇ । ಳ್ವಿರಸಮೆನಿಸಿದ ಚಳ್ಳುವರಿಕಾಯ್ಗಳನು ಸಾಕನಿತು ॥ ಶರಗಿನೊಳು ತಾಂ ಕಟ್ಟಿಕೊಂಡಾ । ತರುಣಿಯಾಲಯುಕ್ಕೈದಿ ಹಿಡಿಯೌ । ತರುಳೆ ನೀಂ ಬಯುಸಿ ದುದನೆನುತಂ ಕೊಟ್ಟನೊಲವಿಂದ ॥ ೫೭ ॥

ಬೊಪ್ಪ ಕೇಳಿವುಗಳನು ಮನದೊಳ । ಗೊಪ್ಪಿ ಬಯುಸಿರ್ದುದು ನಿಜಂ ನಿನ । ಗಿಪ್ಪರಿವು ಕಕ್ಕುಲತೆಯುತ್ಯಾದಾರ್ಯುಗಳನರಿಯೆ ॥ ಕಪ್ಪುಗೊರಳಂ ನೀನೆ ಸಹಜಂ । ತಪ್ಪದೆ ಭವತ್ಪಾದಕಾನತ । ಳಪ್ಪೆನೆನ್ನಂ ಕ್ಷಮಿಸು ರುಣಿಯಾ ದೆನ್ನನೆಂದೆನಲು ॥ ೫೮ ॥

ಎಲೆ ಮಗಳೆ ಕೇಳೌ ಧರಿತ್ರೀ । ತಲದೊಳಭವಂ ನಿಖಿಲಜೀವರಿ । ಗೊಲವಿನಿಂದವರವರ ಭೋಗ್ಯಪದಾರ್ಥಗಳಸರಿದು ॥ ಅಲಸದಿನಿಸುಂ ಮರೆ ಯದೀವುತ । ಸಲಪಿದಪನನವರತಮಿದರೊಳ । ಗುಳಿದ ಜನರುಪಕಾರವಿನ್ನೇ ನೆಂದೊರೆದು ಮಗುಳ್ದಂ ॥ ೫೯ ॥

ಆವತರದ ಫಲಾಭಿಸಂಧಿಯ । ದಾವಕಾಲದೊಳಂಕುರಿಸದತಿ । ಸಾವ ಧಾನದೆ ಸಹಜಮಾಗಿ ಪರೋಪಕಾರವನು ॥ ಭೂವಲಯದೊಳು ಮಾಳ್ಪದೇ ಶಿವ । ಭಾವಮಿಂತಾಚರಿಪ ಮಹಿಮನು । ದೇವರಲ್ಲದೆ ಜೀವಿಯೆಂಬರದಾರು ಪರಿಕಿಸಲು ॥ ೬೦ ॥

ಹರಗೆ ಸರ್ವಜ್ಞತ್ವಮುಂಟೇ । ನರಗೆ ಕಿಂಚಿಜ್ಞತ್ವಮಿರುವದು । ತರುಣಿ ತನ್ನಯ ಮನದೆ ಬಯಸಿದ ಬಯಕೆಯನು ತಿಳಿದ ॥ ಶರಣನೊಳು ಸರ್ವಜ್ಞತೆ ವಲಂ । ಮೆರೆವುತಿರ್ದತ್ತೆಂದು ಪಂಡಿತ । ಪರಿಷದನಿಶಂ ಕೀರ್ತಿ ಸುತ್ತಿಹುದೆಂದೊಡತಿಶಯವೇ ॥ ೬೧ ॥

ಕಾಲಕರ್ಮಾತೀತವರ್ತನ । ಶೀಲ ನಿರ್ಧೂತೋರ್ಮಿಜಾಲ ಕೃ । ಪಾಲವಾಲ ಪರಾಸ್ತಕಾಮ ಚರೇಂದ್ರಗಣಲೋಲ ॥ ವ್ಯಾಲಭವಿಕುಲಸಂಗದೂರ ವಿ । ಶಾಲಮಾಯಾಮೋಹವಿರಹಿತ । ಪಾಲಿಸೈ ವೀರೇಶ್ವರಾರ್ಯ ವಿರಾಗತೆಯನಿತ್ತು ॥ ೬೨ ॥

ಅಂತು ಸಂಧಿ ೧೪ಕ್ಕೆ ಪದಗಳು ೮೫೪.

ಶಿವಂ.





ಶರಣನು ಅಗ್ನಿಪ್ರವೇಶ ಮಾಡಿದ್ದು. ಕೈ. ವಾರದ ಮಲ್ಲಪ್ಪನವರೂ ಅವರ ಪತ್ನಿಯರೂ.

ಶ್ರೀ ವೀರೇಶ್ವರಾಯ ನಮಃ



## ಹದಿನೈದನೆಯ ಸಂಧಿ ಪ್ರಾರಂಭ.

ಸೂಚನೆ ॥ ಘೋರಹೋಮಾಗ್ನಿಯೊಳ್ ನೆಗೆದೀ । ವೀರ ವಿಭು ತಣ್ಪಂಬಡೆದು ಶ್ರೀ । ವಾರದಪ್ಪನಭೀಪ್ಸಮಂ ಕರುಣಿಸಿದನೊಲವಿಂದ ॥ ಪಲ್ಲ ॥

ಪದ ॥ ವಾಸನಾತ್ರಯಮಂ ತೊಲಂಗಿಸಿ । ಪಾಶಪಂಚಕಮಂ ಕೆಡಿಸಿ ಸುಖ । ರಾಶಿಯೆನಿಸಿದ ಮುಕ್ತಿಗೊಡುವಾಚಾರ್ಯರೂಪವನು ॥ ಲೇಸುಮಿಗೆ ನೀಂ ಧರಿಸಿ ಬಂದುಪ । ದೇಶಮಂ ನೆರೆ ಮಾಡಿ ಪೊರೆಯೆಂ । ದಾಶಿಪೆನ್ನನುಪೇಕ್ಷಿಸದಿರೈ ದಕ್ಷಿಣಾಮೂರ್ತಿ ॥ ೧ ॥

ವೀರಶೈವಾಚಾರನಿಷ್ಠಂ । ಮಾರಸಂಹರಭಕ್ತಿಸಾಂದ್ರಂ । ಸಾರಧರ್ಮೋದ್ಧಾರಕಾರ್ಯಧುರಂಧರಂ ಕರುಣಿ ॥ ಧೀರವಾರಸಹಾಯನತುಲವಿ । ಚಾರಶೀಲಂ ಶಾಸ್ತ್ರಲೌಕಿಕ । ಪಾರಗಂ ವಿದ್ಯಾಭಿಮಾನಿ ಸುದಾನಿ ಸನ್ಮಾನಿ ॥ ೨ ॥

ಚಾರುಕಾಯಂ ಸುಗುಣಗಣಗಂ । ಭೀರನತಿ ವಿಶದೋಜ್ವಲಯಶಃ । ಪೂರಿತದಿಗಂತಂ ಜಿತಾಸೂಯಂ ಮಹಾಭೋಗಿ ॥ ಧಾರುಣೀಪತಿದತ್ತ ಘನತರ । ಗೌರವಾಂಕವಿರಾಜಮಾನಂ । ವಾರದನ್ವಯ ಶರಧಿಶಶಿ ಮಲ್ಲಪ್ಪ ನಾಮಕನು ॥ ೩ ॥

ನೆಲದೆ ಕೃಷಿವಾಣಿಜ್ಯವೈಭವ । ಗಳೊಳು ಬಲು ಮುಂದೆನಿಸಿ ಪೇಳೆಯು । ಹೊಲಬನರಿದಾಚರಿಸಿ ಶ್ರೀಯುತನಾಗಿ ನಿತ್ಯದೊಳು ॥ ಒಲೆದು ಗುರುಶಿವಲಿಂಗಚರರಂ । ಸಲೆ ಸಮರ್ಚಿಸುತನ್ಯನಾರೀ । ಕುಲಸಹೋದರನೆಂದು ವಿಖ್ಯಾತಿಯನು ಪೊಂದಿದನು ॥ ೪ ॥

ಪದೆದು ಸಂಸ್ಕೃತಶಾಲೆಯಂ ನಿಜ । ಸದನದೊಳಗಿಟ್ಟೋದಲೆಂದ್ಯೈ । ವಿದ ಸಕಲಮಾಹೇಶ್ವರಕುಮಾರರಿಗೆ ಪುಸ್ತಕವ ॥ ಹೊದಿಕೆಯಂ ಮೇಣ ನ್ನಮಂ ಸ । ಮ್ಮದದೆ ದೀಪಸ್ಥಲಗಳೆಲ್ಲವ । ನೊದವೆ ಕೊಟ್ಟಭ್ಯಾಸಕನು ಕೂಲಮೆನೆ ಮಾಡಿದನು ॥ ೫ ॥

ಕಲಿವ ತದ್ವಿದ್ಯಾರ್ಥಿಗಳಿಗತಿ । ಸುಲಭಮೆನೆ ನಾಪಿತರಜಕರಂ । ತಿಳಿದ ವೈದ್ಯರ್ಕಳನು ನೇಮಿಸಿ ಕೊರತೆಯಿಲ್ಲದಲೆ । ಬಲುಕನಿಕರಂಬೆತ್ತು ಪಿತನಂ । ತೊಲೆದು ಸಲಪಿದನೀತನಾಶ್ರಯ । ದೊಳಗೆ ಸಿಗದ ವಿದಗ್ಧರಿಲ್ಲೆಂದೊಡಮುದ ತಿಶಯುವೆ ॥ ೬ ॥

ಹುಳದ ಬಾಯ್ಗೊಡಾಗುತಿಪ್ಪಾ । ಹಳೆಯಧರ್ಮಗ್ರಂಥಗಳನ । ರ್ಗಳ ಮನೀಷಿಗಳಿಂದ ಶೋಧಂಗೈಸುತಲ್ಲಲ್ಲಿ ॥ ಹಲವು ಬಗೆಯಿಂ ಸಂಗ್ರಹಿಸುತಂ । ಲಲಿತಮೆನೆ ಮುದ್ರಿಸಿ ಪ್ರಸಿದ್ಧಿಸಿ । ನೆಲದೊಳಧಿಕೃತನಂತೆ ಮತಹಿತ ವೆಸ ಗಿದಂ ಬಿಡದೆ ॥ ೭ ॥

ಆ ಮಹಾತ್ಮನಿಗೊಮ್ಮೆ ಘನಘೋ । ರಾಮಯಂ ಸಂಘಟಿಸಿ ವೈದ್ಯ । ಸ್ತೋಮಮಂ ಸೋಲಿಸಿದುದದರಿಂ ಲಿಂಗಗಳಿಗೆಲ್ಲ । ನೇಮದಿಂದಭಿಷೇಕಮಂ ನಿಜ । ಧಾಮದೊಳು ಮೃತ್ಯುಂಜಯಮನೂ । ದ್ದಾಮಜಪಮಂ ಮಾಡಿಸಲ್ಗದ ಮದು ತೊಲಂಗಿದುದು ॥ ೮ ॥

ಬಳಿಕತಜ್ಜಪತರ್ಪಣಾರ್ಥಂ । ನಿಲದೆ ಹೋಮವನೆಸಗಲೇವೇ । ಳ್ಕೆಳೆಯರುಂ ಪುಟ್ಟುವರು ಮೇಲದರಿಂದಮೆಂದೆನುತ ॥ ನಲಿದು ಸ್ವಾರ್ಥಿಗಳ ಲ್ಪವಿದುಗಳ್ । ಸಲೆ ಬುಧಂಮನ್ಯರ್ಕಳೈತಂ । ದುಲಿದ ಮಾತಂ ನಂಬಿ ಹೋಮವನವನು ನಿಶ್ಚಯಿಸಿ ॥ ೯ ॥

ಶೈವಕರ್ಮಕ್ರಮುಗಳೊಳು ಘನ । ಕೋವಿದನೆನಿಪ್ಪೋರ್ವ ಧರಣೀ । ದೇವನಂ ಪುಣ್ಯಾಖ್ಯಪುರದಿಂದಂ ಬರಿಸಿಕೊಂಡು ॥ ಆ ವಿದಗ್ಧಂ ಪೇಳಿದಂತೆ ಮ । ಹಾವಿಶಾಲನಿಜಾಲಯುದೊಳತಿ । ಭಾವುಕಮಿದೆನೆ ಮಾಡಿಸಿದನಾ ಹೋಮಶಾಲೆಯನು ॥ ೧೦ ॥

ಅದರೊಳಿಪ್ಪಿಕೆಯಿಂದ ಬಲು ಚೆ । ಲ್ವೊದಗೆ ವಿಸ್ತೃತವಾಳಮುಂ ಮಿಗೆ । ಪದೆದು ಸುರುಚಿರಹೋಮಕುಂಡವನಾಗಿಸಿದನಾಗ ॥ ಚೆದುರೆನಲ್ಮೇಲ್ಕಟ್ಟನಿಂದಂ । ಮೃದುಲಕಿಸಲಯತೋರಣಗಳಿಂ । ಸದಮಲಪತಾಕೆಗಳಿನೆಸೆದುದು ಹೋಮಮಂಟಪವು ॥ ೧೧ ॥

ಬಾಳೆಗಂಬಗಳೊಗ್ಗಿನಿಂದಿನಿ । ಗೋಲುಗಳಲಂಪಿಂದಿಡಿದ ಪೂ । ಮಾಲೆಗಳಪೆಂಪಿಂದ ಬಹುಚಿತ್ರಗಳಸೊಬಗಿಂದ ॥ ಜೋಲುಗಟ್ಟದ ಪಣ್ಗೊನೆಗಳಿಂ । ಕೀಲಿಸಿದ ಕನ್ನಡಿಗಳಿಂ ಕ । ಣ್ಗೋಲಮುನಮರ್ಚಿದುದು ಪಿರಿದೆನೆ ಹೋಮಮಂಟಪವು ॥ ೧೨ ॥

ನೆರೆದರಾಗಮವೇದಿಗಳ್ಸ । ತ್ಪುರುಷರಾರ್ಯರ್ಪಂಡಿತರ್ಸುಂ । ದರಸುಮಂಗಲೆಯರ್ಕಳುತ್ತಮವೇದಪಾಠಕರು ॥ ಗುರುಕುಲಾಗ್ರಣಿಗಳ್ವಿತಾಕ್ಷರ್ । ಸರಸವಾಙ್ಮಯಶೀಲರೀಶ್ವರ । ಚರಣಸೇವಾನಿರತರಾ ವರಹೋಮಶಾಲೆಯೊಳು ॥ ೧೩ ॥

ಬಿಡದೆ ವಿಧ್ಯುಕ್ತಪ್ರಕಾರಂ । ನಡಿಸಿದರು ಋತ್ವಿಜರು ಹೋಮವ । ಸಡಗರದೆ ಮಲ್ಲಪ್ಪನಿಗೆ ತದ್ದೀಕ್ಷೆಯಂ ಕಟ್ಟ ॥ ಮೃಡಶರಣವೀರೇಶನಿದನರಿ । ದೊಡನೆ ತದ್ಯಜಮಾನನೆಡೆಗೀ । ಜಡತಮಕ್ರಿಯೆಗುಮ್ಮಳಿಸಿ ಬಂದಾತನಂ ಕೂರ್ತು ॥ ೧೪ ॥

ಎಲವೊ ಕೇಳ್ ಶ್ರೀಮಂತ ನೀನಿಂ । ದೊಲೆದೆಸಗುವೀ ಹೋಮಕಾರ್ಯಂ । ತಿಳಿಯೆ ಜಡತಮವಿದನು ಲಿಂಗಿಗಳೆಸಗುವದು ಹೊಲ್ಲ ॥ ಘೃತಕ್ಷೀರಗಳನಿಂಧನ । ದೊಳಗೆ ಚೆಲ್ಲಿದೊಡೇಂ ಪ್ರಯೋಜನ । ಮಲಘು ಜಂಗಮಮುಖದೆ ಬೀಳ್ದೊಡೆ ಯೋಗ್ಯಮೆನಿಸುವದು ॥ ೧೫ ॥

ನಿಮಗಿದಂ ಪೇಳ್ದವರದಾರೆಪ । ವಿಮಲಚಿತ್ತರೆನಿಪ್ಪ ನೀವೀ । ಕ್ರಮವ ಕೈಕೊಂಡುದು ವಿಚಿತ್ರಂ ಘನಶಿವಾರ್ಚನೆಯೆ ॥ ಪ್ರಮಥರೊಪ್ಪುವ ಶಂಭುಯಜ್ಞಂ । ಸುಮತಿಯಿಂದರಿದಿದನು ಬಿಡುವುದು । ಕ್ಷಮೆಯೊಳುಚಿತಮಿದೆಂದೊರೆಯಲುಲದನವನು ಲಕ್ಕಿಸದೆ ॥ ೧೬ ॥

ತಿಳಿಯೆ ಸಂಸಾರಿಗಳಿಗಿಳೆಯೊಳು । ಹಲವು ಫಲಸಿದ್ಧಿಗಳು ಬೇಕೀ । ಮಲಹರನ ಶರಣಂಗಿವೇತಕೆ ಬೇಕು ತನ್ನಂತೆ ॥ ತಿಳಿದೆಮಗೆ ಪೇಳುವನು ಸುಮ್ಮನೆ । ಬೆಳಿಸಲೇಕುತ್ತರವ ಸವಿನುಡಿ । ಗಳಲಿ ಸಂತೈಸುವದೆನುತ್ತಂ ಚಿತ್ತ ದೊಳುನೆನೆದು ॥ ೧೭ ॥

ಬಳಗದವರುಂ ಕೋವಿದರ್ಕ । ಳ್ಗೆಳೆಯರೆಸಗಿರ್ದಾಗ್ರಹಕ್ಕಂ । ತಳು ವದಿದು ನಡೆದಿಹುದು ನಡೆಯಲಿ ದೋಷವೇನಿಲ್ಲಿ ॥ ಸಲೆ ಪ್ರಮಥಸಂತೃ ಪ್ತಿಯುಂ ಸಂ । ಗಳಿಸಿ ಸಾಗಿಹುದಿದನುಪೇಕ್ಷಿಸು । ತುಳಿವುದೇಕೆಂದೊರೆದನ ವನೀ ಶರಣಪುಂಗವಗೆ ॥ ೧೮ ॥

ಮತಕೆ ಸಲ್ಲದ ಹೋಮಮುಂ ಸ । ಮ್ಮತಿಸಿ ಮಾಡುವನಿವನೊರೆ ದೊಡುಂ । ಮತಿಯೊಳರಿಯನಿದಂ ಬಿಡನು ಸ್ವೈರಿಸುವದೆಂತೆನುತ ॥ ಖತಿ ಗೊಳುತ ನಿಜಗೃಹಕೆ ತೆರಳ್ದಂ । ದತುಲಶರಣಂ ಮರುದಿನಂ ಮುಗು । ಳ್ದತಿಭರ ದೊಳೈತಂದನಾ ಘನಹೋಮಮುಂಟಪಕೆ ॥ ೧೯ ॥

ಸಂದಣಿಸಿ ನೆರೆದಿರ್ದರಾ ಮುಖ । ಮಂದಿರದೆ ಬಹುಜನರು ಕರ್ಣಾ । ನಂದಮೆನೆ ಶ್ರುತಿಘೋಷಮಿಡಿದತ್ತೊಸೆದು ಋತ್ವಿಜರು ॥ ಚಂದನದ ಪೇರ್ಗೊ ರಡುಗಳನುಂ । ಕುಂದದೆ ಘೃತಕ್ಷೀರಫಲಗಳ । ನಂದದಲಿ ಹಾಕುತ್ತಲಿರ್ದರು ಹೋಮಕುಂಡದೊಳು ॥ ೨೦ ॥

ಆಳಮಾದಾ ಕುಂಡದೊಳಗಿಂ । ಜ್ವಾಲೆ ಭುಗಿಭುಗಿಸುತ್ತ ಕುಂದದೆ । ಮೇಲಕೇಳ್ದುರಿವುತ್ತಲಿರ್ದತ್ತದು ಮಹೋಗ್ರದೊಳು ॥ ಪೇಳಲೇನಾನದರ ಜಳಮುಂ । ತಾಳಲಾರದೆ ವೈದಿಕರ ಸ । ಮ್ಮೇಳಮದು ಕುಳ್ಳಿರ್ದುದೊದ್ದೆಯ ಪೊದ್ದು ದೂರದೊಳು ॥ ೨೧ ॥

ಕೆಂಡದಂದದೆ ಕಾಯ್ದು ಸುಡುವಾ । ಕುಂಡತಟದಗ್ರದೊಳು ಸುಮ್ಮನೆ । ಖಂಡಶಶಿಧರಶರಣವೀರಂ ಬಳಸಿ ಪರಿತಂದು ॥ ಚಂಡವೀರಾವೇಶದಿಂ ಮುಂ । ಗೊಂಡು ಬಸವಾ ಎಂದು ತಟ್ಟನೆ । ಕುಂಡಶಿಖಿಯೊಳು ಪಾರಿಕುಳಿತಂ ಕಾಲುಗಳನೂರಿ ॥ ೨೨ ॥

ಅರರೆ ಹಾಹಾ ಪಾರ್ದರಯ್ಯೋ । ಶರಣರುರಿಯೊಳು ಬೆಯ್ವರಯ್ಯೋ ।
ಭರದೊಳುರಿಯಿಂದೆತ್ತಿರಕಟಾ ಸಾಯ್ವರಯ್ಯಯ್ಯೋ ॥ ಉರಿಯೊಳಗೆ ನೀಂ ಪೊಕ್ಕು ತೆಗೆ ನಡೆ । ಕರವ ಪಿಡಿದೆಳೆ ಕಡೆಗೆ ಬಾ ಪೊಗು । ತರಿ ಜಲವ ಪೊಯ್ವಗ್ನಿಯಂ ನಂದಿಸಿರಿ ನಂದಿಸಿರಿ ॥ ೨೩ ॥

ಕರೆಯಿರಯ್ಯೋ ಗಟ್ಟಿಗರನೀ । ಪರಿಯೊಳಿಲ್ಲರು ಹೋಮಶಾಲೆಯೊ ।
ಳರಚುತಿಹ ಬರಿ ಸಿರಿಯ ಕೋಲಾಹಲವೆ ದಿಕ್ತಟದೆ ॥ ಪರಿದು ತೀವಿದು ದಲ್ಲದೇ ಶಿವ । ಶರಣನಂ ಪಿಡಿದೆತ್ತುವಾರ್ತರು । ದೊರೆಯಲಿಲ್ಲಾವನುಮುವನ ನುರಿ ಬಳಸಿ ಮೇಲ್ಮೂಡಿ ॥ ೨೪ ॥

ಸುತ್ತುವರಿದುರಿ ನಾಲಿಗೆಯ ಚಾ । ಚುತ್ತಲಿರ್ದತ್ತಾರನುಂ ಬಲು ।
ಹತ್ತರಕೆ ಬರಗೊಡಿಸದಂದದೊಳೀ ಮಹಾತ್ಮನನು ॥ ಉತ್ತರಿಸಲಸದಳವಿದೆಮ ಗೆನು । ತೆತ್ತಲುಂ ಬಾಯ್ಬಿಡುತ ವೀರರ । ಮೊತ್ತಮುದು ಮುಂಬರಿದು ಮರುಳು ತ್ತಿರ್ದರುರಿಗಂಜಿ ॥ ೨೫ ॥

ದಕ್ಷಮುಖದೊಳು ಕೂಡಿದಾ ಕಮ । ಲಾಕ್ಷಮುಖ್ಯಾಮರರಿಗಡಸಿದ ।
ಶಿಕ್ಷೆಯೊ ವೀರೇಶನಿಂದೆಮಗಾದಪುದೊ ಎನುತ ॥ ದಕ್ಷಿಣಾಶನಭಕ್ಷಣಮಹಾ । ಪೇಕ್ಷೆಯಿಂ ಕುಳ್ಳಿರ್ದ ವೈದಿಕ । ಪಕ್ಷದವರೆಲೆ ಹಾರುತಿರ್ದತ್ತಂಜಿ ಮೈ ಮರೆದು ॥ ೨೬ ॥

ದೂರದೊಳು ಕುಳ್ಳಿರ್ದು ನೋಳ್ಪ । ಹಾರುವನು ಹೌಹಾರಿ ನಿಲ್ಲದೆ !
ಹಾರುತಾರುತ ಚಂಡಿಕೆಯ ಹಾರಿಸುತ ದೆಶೆಗೆಟ್ಟು ॥ ಸೈರಿಸದೆ ಹಿಂದಕ್ಕೆ ನೋಡದೆ । ಜಾರಿದಂ ತಚ್ಛಾಲೆಯಿಂ ಮಿತಿ । ಮೀರಿ ಭಯದಿಂ ತಾಲಿ ತಂಬಿಗೆ ಪಂಚೆಗಳನುಳಿದು ॥ ೨೭ ॥

ಆವನಿಂ ಪುಟ್ಟಿರುವೆವಾವಾ । ದೇವದೇವೊತ್ತಮನಿಗಂಜದ । ಪಾವನ ಶ್ರೀಶರಣನೀ ಹೋಮುವನು ಮೆಟ್ಟಿದನು ॥ ಈ ವಿಗಡನೆಮ್ಮಂ ಕಿನಿಸಿನೇ । ಗೈವನೋ ಎಂದಗಿದು ಶ್ರುತಿಮಂ । ತ್ರಾವಳಿಯುಡಂಗಿರ್ದುದಾ ಋತ್ವಿಜರ ಬಾಯ್ಗಳೊಳು ॥ ೨೮ ॥

ಹೋಮಕುಂಡದೊಳಗ್ನಿದೇವಂ । ಪ್ರೇಮದಿಂ ಮೈದೋರಿ ನೆರೆದಿ । ರ್ದಾ ಮಹಾಜನಕಚ್ಚರಿಯ ಬೀರಿದನೊ ಎಂಬಂತೆ ॥ ಧೂಮವಿಲ್ಲದ ದಳ್ಳುರಿಯೊಳಿರೆ । ರೋಮಮುಂ ಬೆಯ್ಯದಲೆ ಸುಮ್ಮನೆ । ರಾಮಣೀಯಕನಾಗಿ ಕುಳ್ಳಿರ್ದಂ ಮಹಿಮನರರೇ ॥ ೨೯ ॥

ಉರುಪಿದುದು ದಾಕ್ಷಾಯಣಿಯ ಸುಂ । ದರತನುವನಾ ದಕ್ಷನಧ್ವರ । ಮುರಗತತಿಯಂ ದಹಿಸಿದುದು ಜನಮೇಜಯನ ಮಖವು ॥ ಹರಶರಣನಂ ಚುರ್ಚಲಾರದೆ । ಭರದೆ ಸೋಲ್ವುದು ವಾರದಪ್ಪನ । ಪರಮಯಜ್ಞಂ ನೆರೆದ ಭಕ್ತರು ನೋಡಿ ಬೆರಗಾಗೆ ॥ ೩೦ ॥

ವಾರಿಜಭವಾಂಡಾವಳಿಯನುಂ । ಘೋರದೈತ್ಯಾಮರರನುರುಪುವ । ಸಾರಬಲವುಳ್ಳಭವಪಾವಕನಯನದಿಂದೊಗೆದ ॥ ವೀರನೇ ಈ ವೀರನೆಂದು ಪ । ಚಾರಮೆನೆ ಪಿತೃಭಾವದಿಂ ಮಿತಿ । ಮೀರಿ ತನ್ಮಖವನ್ನಿಯುಪ್ಪಿದುದೀ ಮಹಾತ್ಮನನು ॥ ೩೧ ॥

ದೇವತೆಗಳಂ ಪಾಲಿಸುವ ಮಾ । ದೇವನಣುಗನ ಪೆಸರನಾಂತೀ । ದೇವ ಮಾನ್ಯನೆನಿಪ್ಪ ವೀರನನುರುಪದೊಳ್ಪಿಂದ ॥ ಸೇವಿಪುದೆ ಸುರವಕ್ತ್ರನಾದೆನ । ಗೀ ವಸುಧೆಯೊಳ್ತಕ್ಕುದೆಂದಾ । ಪಾವಕಂ ಬೀರಿದನು ತಣ್ಪಂ ಶರಣಗನಿತರೊಳು ॥ ೩೨ ॥

ಕೆಟ್ಟನೀಗಳೆ ಶಂಭುಶರಣಂ । ಸುಟ್ಟು ಪೋದಪನೆಂದು ಭಯಮಂ । ಬಿಟ್ಟು ಮಾಹೇಶ್ವರವಟೂತ್ತಮರೀರ್ವರೇಳ್ತಂದು ॥ ತಟ್ಟನಾರ್ಪಿಂದೀ ಮಹಾತ್ಮನ । ರಟ್ಟೆಯಂ ಪಿಡಿದೆತ್ತಿ ತೆಗೆದರು । ನೆಟ್ಟನಾ ಮಲ್ಲಪ್ಪನ ಮಹಾಪತ್ನಿ ಬಸವಾಂಬೆ ॥ ೩೩ ॥

ಒಡನೆ ಶರಣನನೆಳೆಯನಂದದೆ । ಕಡು ಮರುಕದಿಂ ಬಿಡದೆ ತನ್ನಯ । ತೊಡೆಯಮೇಲ್ವಕ್ಕೊಂಡು ಪರಿಕಿಸಿ ನೋಡಿ ಮೈದಡವಿ ॥ ಅಡಿವಿಡಿದು ತದ್ವಟುಗಳಿವನುಂ । ಸುಡದಿರುವದಂ ತಿಳಿದು ಸೋಜಿಗ । ವಡೆದು ತಲೆದೂಗಿದಳು ಪ್ರಮಥಮಹತ್ವಮಿದುವೆನುತ ॥ ೩೪ ॥

ದೀನಕರುಣಾದುಃಖುವ್ಯುದುಸಂ । ತಾನಭಾವವುಯೋಕ್ತಿಯಿಂದಾ । ಮಾನಿನೀಮಣಿಯುಪಯುಪಾ ಇಂತೆಂದು ನೆರೆ ನುಡಿಸೆ ॥ ಮೌನದಿಂದಿವ ನಿರ್ದನಂದುರು । ಚೀನವಸನಾಂಚಲಗಳಿಂದಂ । ತಾನುಮಾತ್ಮಾಧೀಶನುಂ ಗಾಳಿಯನು ಬೀಸಿದರು ॥ ೩೫ ॥

ಇನಿತು ಪೊಳ್ತಿನ ಮೇಲೆ ಕರುಣಾ । ಘನಶರಣಪುಂಗವನು ನಿಜಲೋ । ಚನಗಳಂ ತೆರೆದವ್ವ ಅವ್ವಾ ನಿಮ್ಮ ನಿಂದಿವರು ॥ ಜನದೆ ನೊಯಿಸಿದರಲ್ಲವೇ ಇಂ । ತೆನಲು ಶ್ರೀಬಸವಾಂಬೆ ಮೆಲ್ಲನೆ । ವಿನಯವಚನದಿನಪ್ಪ ನೀವೇ ನೊಂದಿರೆಮಗಾಗಿ ॥ ೩೬ ॥

ಇದುಮಿರಲಿ ನೀವೇತಕಿಂತೆಸ । ಗಿದಿರಿ ಅಪ್ಪಾ ಎನುತ ಬೆಸಗೊಳೆ । ಸದರಮಲ್ಲದ ಹೋಮುಮಂ ಕಂಡೊಗ್ಗದಿಂತಾಯ್ತು ॥ ಸದಮಲಾಂಗಿಯೆ ತಾಯೆ ನಿಮಗೀ । ಹದುಳನಿರಲುಂ ಬೇರೆ ತನುಭವ । ರುದಿಸಲೆಂದೀ ಹೋಮುಮಂ ಮಾಡುವದು ತಪ್ಪಲ್ತೇ ॥ ೩೭ ॥

ಇವರು ಸುತನಾಗಿರಲು ಹೋಮಂ । ಕುವರರಂ ಬೇರೀವುದೆಂತಾ । ತವೆ ಸಮನಿಸದೆ ತುಷ್ಟಿ ನಿಮಗೀ ಪುತ್ರನಿಂದೆಂದು ॥ ಶಿವನ ಶರಣಂ ನೆರೆ ನುಡಿಯಲಾ । ಕುವಲಯದಳಾಯತನಯನೆ ನಿಜ । ಧವನು ಹರ್ಷಂದಾಳೆ ನಯಭಯಭಕ್ತಿಭಾವದೊಳು ॥ ೩೮ ॥

ನೀವು ಸುತರಾಗಿರ್ಪಿರಾದೊಡು । ಮೀ ವಸುಧೆಯೊಳಗೆಮ್ಮೊಳುದಿಸಿದ । ಪಾವನಕುಮಾರರನು ನೀವೀಕ್ಷಿಸಲು ಬೇಕೆಂದು ॥ ಭಾವದೊಳು ಬಯ ಸಿರ್ಪೆವೈ ಕೃಪೆ । ಗೈವುದೆಂದರ್ಥಿಸಲದಕೆ ಶರ । ಣಾವತಂಸಂ ಮನದೆ ಸಂತಸ ವಾಂತೊಡಂಬಟ್ಟು ॥ ೩೯ ॥

ಮಾತೆ ನಿಮ್ಮುದರದೊಳೊಗೆದ ತನು । ಜಾತರಂ ಬಿಡದೀ ಕುಮಾರಕ । ನೋತು ನಿರುಕಿಸಲೆಂಬ ನಿಮ್ಮಯ ಬಯಕೆಯಂತಕ್ಕೆ ॥ ಭೂತನಾಥಪ್ರಮಥ ವರಸಂ । ಘಾತಮನುಕೂಲಿಸದಿರದೆನು । ತ್ತಾತುರದೊಳೇಳ್ದಾ ಪತಿವ್ರತೆ ಗೊರೆದು ನಿಜಗೃಹಕೆ ॥ ೪೦ ॥

---

೧. ನಿಮಗೆ ನಾನೇ ಮಗನಾಗಿ.

ಪೊರಮಡುವ ಸಮಯದೊಳು ನಯದಿಂ । ದೆರಗಿದಾ ಯಜಮಾನ ಗೀತಂ । ಕರುಣದಿಂದಾಶೀರ್ವದಿಸಿ ಚಿಂತಿಸದಿರೆಪ ನೀನು ॥ ಜರುಗಿದೀ ಕಾರ್ಯದಿನಿನಿತಕಾ । ಗಿರಿಸುತೇಶನು ಶಾಂತನಾಗಿಹ । ನರೆಯಿದಾಯ್ತೆಂದಳು ಕದಿರು ಮಾನಸದೊಳಿಂತೆಂದ ॥ ೪೧ ॥

ಎನ್ನೊಳೈದುದಿನಂಬರಮವಿ । ಚ್ಛಿನ್ನಮಿದನಾಚರಿಸಲೆಂಬೊಂ । ದುನ್ನತ ಪ್ರೇರಣೆಯನೆಸಗಿದ ಪಾರ್ವತೀಪತಿಯು ॥ ಇನ್ನೆರಡುದಿನಮವಧಿಯಿರಲುಂ । ಭಿನ್ನಮೆನೆ ಮೂರೇದಿನಕದೆಂ । ತುನ್ನಿಸಲ್ತವೆ ಶಾಂತನಾದನೆನುತ್ತವಂ ನುಡಿಯೆ ॥ ೪೨ ॥

ಎಲವೊ ಕೇಳಂತಾದೊಡೀಗ । ಳ್ತಿಳಿದು ಹತ್ತರೊಳೊಂದುಕೂಡಿಸಿ । ನಲಿದು ಹನ್ನೊಂದಾಗೆ ನೀನಿದನೆಸಗಲಹುದತ್ತು ॥ ಉಳಿದೆಯೇಕಿನ್ನೊಂದನೀ ಪರಿ । ಯೊಳು ನೆಗಳ್ದಪೂರ್ಣತ್ವಕಿಂದೆಂ । ತಳುಕದಲೆ ಸೈರಿಸಿದೆ ಪೇಳೆಂದೀ ಶರಣನಾಡೆ ॥ ೪೩ ॥

ಇದರಮರ್ಮಂ ತಿಳಿಯದಾಗಿ । ರ್ಪುದು ತಿಳಿಸಿರ್ದೈ ತಪ್ಪಿಗಾನೊ । ಪ್ಪಿದಪೆನೆಮ್ಮಂ ತಿದ್ದುವಧಿಕಾರಮದು ನಿಮಗುಂಟು ॥ ಮೊದಲೆ ನಿಮ್ಮನು ಮತಿವಡೆದು ಮಾ । ಡದುದಕಿಂತಾಯ್ತೆಂದು ಸದ್ಭಾ । ವದೊಳು ಬಿನ್ನೈಸಿದನು ಮಲ್ಲಪ್ಪಾಖ್ಯನೀತನಿಗೆ ॥ ೪೪ ॥

ಈ ಸಮಾರಂಭದೊಳು ನಿನ್ನೀ । ವಾಸಕೊಳ್ಪಿಂ ಭೋಜನಾರ್ಥಮು । ಮಾ ಸಮಸ್ತಪ್ರಮಥರೈತಂದಿಹರು ಮೇಣಿಲ್ಲಿ ॥ ಲೇಸುವಿಗೆ ಕುಂಟೋಜಿ ಮಠದ ಚ । ರೇಶನೈತಂದಿರ್ಪನೀತನ । ದೇಶಿಕಂ ಬಂದಿಲ್ಲ ಕೊರತೆಯಿದಲ್ಲವೇ ಎನಲು ॥ ೪೫ ॥

ಎರಡುಬಾರಾ ದೇಶಿಕನನಾಂ । ಕರೆಯಕಳಿಸಿದೆನಾದೊಡಾತಂ । ಗುರುವಿಗುಂ ತನಗುಂ ಕಲಹಮುಂಟಾ ಗುರೂತ್ತಮನು ॥ ತೊರೆಯದಿಲ್ಲಿಗೆ ಬಂದಿಹುದರಿಂ । ದರಿದು ತಾನುಕ್ಕಲಿಸಿ ಬಾರದ । ಲಿರುವನೆನ್ನೊಳು ದೋಷಮೇನೆಂದಾ ಧನಿಕನೊರೆಯೆ ॥ ೪೬ ॥

ಎಲೆ ಸುಕೃತಿ ಕೇಳೀ ಮಹೋತ್ಸವ । ದೊಳಗೆ ತದ್ಗುರುಶಿಷ್ಯರೀರ್ವರು । ಮಿಳಿತರಾಗಿ ಪ್ರಸಾದಮಂ ಸ್ವೀಕರಿಸಿದೊಡಮಿನ್ನು ॥ ಉಳಿದೆರಡು ದಿನಮೆಸಗಿ ಮುಗಿಸುವ । ದೊಳಿತದಿಂತಾಗದೊಡೆ ಬಲುಹಿಂ । ದಲಸದೀ ಮಗುವಳಿವನಲ್ಲದೆ ತಿಳಿಯುಳಿಯನೆನುತ ॥ ೪೭ ॥

ಪ್ರಮಥಪರ್ಯಪ್ರಾಣಿಯಾದೀ । ಪ್ರಮಥಪತಿಶರಣಾಗ್ರಗಣ್ಯಂ । ವಿಮಲ ವಚನದಿನಿಂತವಂಗೊರೆದೊಯ್ಯನೇ ಪೋಗೆ ॥ ಸಮನಿಸಿದ ಹೋಮವನುಳಿದೊಡುಂ । ಭ್ರಮವಿಭಂಜನಶರಣಕೃಪೆಯಿಂ । ದೆಮಗಭೀಷ್ಟಂ ಸಿದ್ಧಿಸುಗುಮಿದು ನಿಶ್ಚಯಂ ನೋಡೆ ॥ ೪೮ ॥

ನಡುವೆ ಹೋಮವನುಳಿದೊಡೆನಗಿ । ನ್ನಡಸದಿರದಪಹಾಸ್ಯಮಿಳೆಯೊಳು । ಸಡಗರದೊಳಖಿಲಪ್ರಮಥಸಂತೃಪ್ತಿಪೂರ್ವಕವೇ ॥ ಬಿಡದೆಸಗಿ ಕಡೆಗಾಣಿಸುವದಿದು । ಕಡುಜಸಕೆ ಸೈಪಿಂಗೆ ಕಾರಣ । ವೊಡೆಯರಪ್ಪಣೆಯಾದುದೆಂದಾತ್ಮದೊಳು ನಿಶ್ಚಯಿಸಿ ॥ ೪೯ ॥

ಶಾಂತಗುಣದಾರ್ಯರನು ಕಳುಪಿ ಸ । ಮಂತರುಪಿ ತದ್ದೇಶಿಕೇಂದ್ರನ । ನಂತರಿಸದಲೆ ಕರಿಸಿ ತದ್ಗುರುಶಿಷ್ಯರಂ ತಣಿಸಿ ॥ ಪಿಂತೆ ನೇಮಿಸಿದಂತೆ ಹೋಮವ । ಮುಂತುಳಿದೆರಳ್ದಿನಮೆಸಗಿ ಬಲು । ಸಂತಸದೆ ಮುಗಿಸಿದನು ಮಲ್ಲಪ್ಪಾಖ್ಯನೊಲವಿಂದ ॥ ೫೦ ॥

ಉದಿಸಿದರು ಮುಂದಲ್ಪಕಾಲದೆ । ಹದುಳರವನ ಸತಿದ್ವಯರ ಲಸ । ದುದರದೊಳು ಚೆಲುವೆಸೆದು ಲೋಕಾಲ್ಹಾದವಿಂಬಾಗೆ ॥ ಮದನಮರ್ದನ ಶರಣನವರಂ । ಪದುಳದಿಂದಂ ನೋಡಿದಂ ಪುಸಿ । ವುದೆ ಮಹಾತ್ಮರ ದಿವ್ಯವಚನಂ ಮೇದಿನೀತಲದೆ ॥ ೫೧ ॥

ವೀರಶೈವಾಚಾರಕಲ್ಲದೆ । ಬೇರೆ ಕರ್ಮಕ್ಕೊಲ್ವನಲ್ಲಂ । ಮಾರವೈರಿಪ್ರಮಥನಿಚಯಕ್ಕಲ್ಲದೆಂದೆಂದು ॥ ಬೇರೆ ದೈವಕೆ ಸೋಲ್ವನಲ್ಲಂ । ಘೋರಕರ್ಮವ ಕಂಡು ಬಿಡಿಸದೆ । ಜಾರುವವನಲ್ಲಸುವಳಿದೊಡುಂ ವೀರಶರಣೇಂದ್ರಂ ॥ ೫೨ ॥

ಶಶಿಯನೀಕ್ಷಿಸಿ ತಸ್ಕರಂ ಕಸ | ವಿಸಿಗೊಳುತ್ತಿಹನತ್ಯುದಾರನ | ಜಸವ ನಾಲಿಸಿ ಲೋಭಿ ತಲ್ಲಣಿಸುವನು ಪಂಡಿತನ || ರಸಿಕತನಮಂ ಮೂರ್ಖನವ ಲೋ | ಕಿಸಿ ಮನಸಿನೊಳ್ಕುದಿವರೀತನ | ಕುಶಲತೆಗೆ ಜಸಕೊಳ್ವೆಳಗಿಗಾರುಂ ಕುದಿಯಲಿಲ್ಲ || ೫೩ ||

ಶುನಕನಾರ್ಭಟಕಾನೆ ತುಂತು | ರ್ವನಿಗಳೊರ್ಗಿಗೆ ಬಡಬದಹನಂ | ವನಧಿಕಲ್ಲೋಲವ್ರಜಧ್ವಾನಕ್ಕೆ ಕುಂಭಜನು || ಮುನಿದ ಮಂದೇಹರರ ಶೌರ್ಯಕೆ | ದಿನಪನುರಗಾಡಂಬರಕೆ ಗರು | ಡನನುಪಮಶರಣಾಗ್ರಗಣ್ಯರ್ಕಾಲಗಗಿದಪರೆ || ೫೪ ||

ಪ್ರಮಥರೊಲವಂ ಪಡೆದವನು ನೀಂ | ಪ್ರಮದೆಯರನೊಲಿಸುವ ಪ್ರಯತ್ನದೆ | ಭ್ರಮಣೆಗೊಂಡಿಹ ಮೂಢನಾನಭವಾನುಭವಿ ನೀನು || ಮಮಕರದ ಕಡುದುಃಖಿಯಾನ್ನೈ | ವಿಮಲಗುಣಿ ನೀಂ ದುಷ್ಟನಾನೀ | ಕ್ಷಮೆಯೊಳೆನ್ನಂ ಕ್ಷಮಿಸಿ ಪೊರೆ ಕೃಪೆಯಿಂದ ವೀರೇಶ || ೫೫ ||

ಸನ್ನುತ ನಿರಾಭಾರಿದೇಶಿಕ | ನೆನ್ನಿಸಿದ ಗುರುಸಿದ್ಧಬಸವನ | ಪನ್ನಳಿನ ಕಾರುಣ್ಯಬಲಮಂ ಭಕ್ತಿಯಿಂ ಪಡೆದು || ಚೆನ್ನಕವಿವರ್ಯಂ ಬರೆದ ಮಹಿ | ಮೋನ್ನತಶ್ರೀಶರಣಕುಲಸಂ | ಪನ್ನವೀರೇಶ್ವರಪುರಾಣದೊಳೆರಡನೆಯಕಾಂಡಂ || ೫೬ ||

ಅಂತು ಸಂಧಿ ೧೫ಕ್ಕೆ ಪದಗಳು ೯೧೦.

## ದ್ವಿತೀಯ ಕಾಂಡ.

ಮಂಗಲಂ.






ಶಾಂತಾಶ್ರಮ (ಶ್ರೀ ವೀರೇಶ್ವರನ ಮನೆ)  ಶ್ರೀ ಮಲ್ಲಿಕಾರ್ಜುನ ದೇವಾಲಯ.

ಶ್ರೀಮತೇ ಗುರವೇ ನಮಃ



## ಹದಿನಾರನೆಯ ಸಂಧಿ ಪ್ರಾರಂಭ.

ಸೂಚನೆ ॥ ವೀರಶರಣನ ವರ್ತನವನುಮ । ನಾರತಂ ಭಕ್ತರ್ಗೆ ಪೇಳಿದ । ಸಾರತರದುಪದೇಶವಾಕ್ಯಾದಿಗಳನು ಸುರುವೆನು ॥ ಪಲ್ಲ ॥

ಪದ ॥ ಭಕ್ತವತ್ಸಲ ಭಕ್ತಬಾಂಧವ । ಭಕ್ತಸುಖಜಲನಿಧಿಸುಧಾಕರ । ಭಕ್ತಜನ ವಿಪದಚಲಕುಲಪವಿ ಭಕ್ತಹೃನ್ನಿಲಯ ॥ ಭಕ್ತಪರಮುಕ್ತಿದ ನಿರಾಕುಲ । ಭಕ್ತ ನಿವಹಕುಟುಂಬಿ ನಿಸ್ತುಲ । ಭಕ್ತಕಲ್ಪದ್ರುಮನಿರಂತಂ ಪೊರೆ ಜಗತ್ತ್ರಯವ ॥ ೧ ॥

ದಿನದಿನಂ ಬ್ರಾಹ್ಮೀಮುಹೂರ್ತದೆ । ವಿನುತಮಧ್ಯಾಹ್ನದೊಳು ಸಂಜೆಯೊ । ಳನಘಶರಣಂ ಶರಣನಂಗನೆ ಸುತೆಯರುಂ ಮಿಂದು ॥ ಘನಶಿವಾರ್ಚನೆಗೈವು ತಿರ್ದಾರು । ಮನದೆ ಪಗಲಿರುಳೊಪ್ಪಿ ಶಿವಚಿಂ । ತನದೊಳಿರುತಿರ್ದರ್ವಲಂ ಬೇರೆಣಿಸದೇನುವನು ॥ ೨ ॥

ಪರರ ಮನೆಯೊಳಗುಣ್ಣಲಿಲ್ಲಂ । ಪರರೆಸಗಿದನ್ನವನಿವರು ಸ್ವೀ । ಕರಿಸ ಲಿಲ್ಲಂ ಕಾಯಕದಿನಲ್ಲದೆ ಬಯಿಸಿ ತಾವೇ ॥ ಪರರು ಕೊಡಬರಲೊಪ್ಪಲಿಲ್ಲಂ । ಪರರನೆಂದುಂ ಬೇಡಲಿಲ್ಲಂ । ಪರರ ಹಂಗಿನೊಳಾಗಲಿಲ್ಲಂ ಶರಣದಿನಕರನು ॥ ೩ ॥

ಮಿಸುಪ ನಿಜಕಾಯಕಮುಖದೊಳಾ । ಪಶುಪಭಕ್ತವ್ರಜದಿನೊದಗಿದ । ಲಶುನಮುಳ್ಳೆಯುಗಡ್ಡೆ ಕುಂಬಳಕಾಯಿ ಮೊದಲಾದ ॥ ರಸಜಡಪದಾರ್ಥಂಗಳಂ ಸೊಗ । ಡಿಸದೆ ಪಾವನಮೆಂದು ನಂಬು । ತ್ತೊಸೆದು ಬಿಡದುಪಯೋಗಿಸು ತ್ತಿರ್ದಂ ಸರಾಗದಲಿ ॥ ೪ ॥

ಪರಮುಸತ್ವಾಹಾರಮಮಂ ಮಾ । ಳ್ಪುರುತರದ ಶಿವಯೋಗಿವರರೀ । ಶರಣಹಸ್ತದಿನೊದಗಿದುಳ್ಳೆಯುಗಡ್ಡೆ ಮೊದಲಾದ ॥ ಪರಿಪರಿಯ ಬಹುಜಡ ಪದಾರ್ಥವ । ತೊರೆಯದುಪಭೋಗಿಸುತಲಿರ್ದರು । ಹರುಷಮುಂಮಿಗೆ ಸುಪ್ರಸಾದಮಿದೆಂದು ನೆರೆ ನಂಬಿ ॥ ೫ ॥

ಪುದಿದ ಕಾಯಕದಲ್ಲಿ ಭಕ್ತರಿ । ನೊದಗಿದ ವಿಭೂತಿಯನು ತನ್ನಯ । ಸದನದೊಳು ಶುದ್ಧಾಂಬುವಿಂ ಘುಟಿಕೆಯನು ಮಗುಳ್ದೆಸಗಿ ॥ ಪದೆದು ಗಜದಂ ಡಾಖ್ಯಗುರುವಿನ । ಪದಸಲಿಲದಿಂ ಸಂಸ್ಕರಿಸಿ ಬಳಿ । ಕದನು ಧರಿಸುತ್ತಿರ್ದರ ತುಲಪವಿತ್ರಭಾವದೊಳು ॥ ೬ ॥

ಧರಿಸುತಿರ್ದರ್ಮೂರ್ವರುಂ ಮಡಿ । ಯರುವೆಗಳನೇ ಪ್ರತಿದಿನಂ ಮೇ । ಲ್ಪರಿದ ತನ್ನಂಬರಕೆ ಶರಣಂ ತ್ಯಾಪಿಗಳನಿಕ್ಕಿ ॥ ನೆರೆ ಹೊಲಿದುಕೊಳುತಿರ್ದ ನಾಗಳ್ । ಸರಿಯೆನಿಪತನ್ನರುವೆ ತ್ಯಾಪಿಗೆ । ಯಿರದೊಡಿಕ್ಕುತ್ತಿರ್ದನಿನಿಯಳ ಬಿಳಿಯರುವೆಗಳನು ॥ ೭ ॥

ಬಿಡದೆ ತ್ಯಾಪಿಯನಿಕ್ಕುತಿಕ್ಕು । ತ್ತೊಡೆಯನಂಗಿಯು ಗಡುತರಮುದಾ । ದೊಡೆ ತನುಜೆ ರುದ್ರಾಂಬೆಯುಯ್ಯಗೆ ಭಾರಮಹುದೆಂದು ॥ ಉಡಲುಹೆಚ್ಚಾಗಿರ್ದ ಮಾತೆಯ । ಮಡಿಯೆನಿಪ ಬಿಳಿಸೀರೆಯನು ಪರಿ । ದೊಡನೆ ಚೆಲುವಾದಂಗಿ ಯಂ ತಾನೇ ಮುದದೆ ಪೊಲಿದು ॥ ೮ ॥

ಪಿತನು ಮನಿಯೊಲ್ಕೊಳಗೆ ಪೋಗಲು । ಸುತೆ ಮೊದಲಿನಂಗಿಯನು ತೆಗೆದತಿ । ಹಿತದಿನಾ ತಾಣದೊಳು ಪೊಸತಾದಂಗಿಯಂ ಮಡುಗೆ ॥ ಪಿತನದಂ ಕಂಡವ್ವನೆಸಗಿದ । ವಿತತಸುಪ್ರೇಮದ ಗುರುತಿದೆ । ನ್ನುತೆ ಮೃದೂಕ್ತಿಯನಾಡಿ ತೊಡುತಿರ್ದಂ ಗುಣೋನ್ನತನು ॥ ೯ ॥

ತೊಡದೆ ಬಿಟ್ಟು ತ್ಯಾಪಿಯಂಗಿಯ । ನಡುವೆ ಹರಿದುರೆತೊಳೆದೊಣಂ ಗಿಸಿ । ಸಡಗರದೆ ಪ್ರಮಥರನು ಕರೆಯಲ್ಪೋಪೆಡೆಯೊಳದನು ॥ ಬಿಡದೆ ಪೊದಿಯುತ್ತಿರ್ದನೀತನ । ಬಡತನವನೇಳಿಸುವರಾರೀ । ಪೊಡವಿಯೊಳು ಸಂ ಸಾರಿಗಳ ಬಡತನವಮಾನ್ಯಮುದು ॥ ೧೦ ॥

ಧರೆಯೊಳತಿಧಿಕ್ಕಾರಮಂ ಪೊಂ । ದಿರುವ ದಾರಿದ್ರ್ಯಮದು ವೀರೇ । ಶ್ವರ ಶರಣನೊಳು ನಿಂದು ಶ್ರೀಯುತರಿಂದ ಬುಧರಿಂದ ॥ ಪಿರಿಯರಿಂ ಕಿರಿಯರ್ಕಳಿಂ ಜಗ । ವರಿಯೆ ಬಲುಮನ್ನಣೆವಡೆದುದೀ । ಶರಣನಾಶ್ರಯದಲ್ಲಿ ಸ್ತುತ್ಯರದಾಗ ದವರಾರು ॥ ೧೧ ॥

ತರುಲತಾವಳಿಯಿಂದ ತಾವೇ । ಧರೆಗುದುರ್ದ ಸುಮಪತ್ರಗಳನಾ । ದರದಿನಾಯ್ದೊಳಹೊಕ್ಕಣದೊಳಳವಡಿಸಿಕೊಂಡೈದಿ ॥ ಪರಮಲಿಂಗಕೆ ಧರಿಸು ತಿರ್ದಂ । ತೊರೆವುತಿರ್ದಿಲ್ಲಂ ಪರಿದ ಮೇ । ಣೆರಡುದಳದೊಂದೇದಳದ ಬಿಲ್ವ ಗಳನಿವನರಿದು ॥ ೧೨ ॥

ಇವನು ಬಿಲ್ವಕೆ ಬರುವನೆಂದರಿ । ದವರು ಕೆಲಬರು ಮೊದಲೆ ಗಿಡದಿಂ । ತವೆಯುದುರಿಸಿದೊಡದನು ತಿಳಿದಾ ಗಿಡವನೇ ಬಿಟ್ಟು ॥ ಜವದೆ ನಡೆವುತ್ತಿರ್ದ ನಿನ್ನೊಂ । ದವನಿಜಕ್ಕದನರಿದವರು ಕ್ಷಮಿ । ಸುವದೆನುತ್ತೆರಗಿದೊಡೆ ಪೋಗು ತ್ತಿರ್ದನಾ ಗಿಡಕೆ ॥ ೧೩ ॥

ಅಂಗಡಿಗೆ ನಡೆತಂದು ತನಗೆ ನಿ । ಜಾಂಗನೆಗೆ ಸುತೆಗುಡುತೊಡುವ ವಸ । ನಂಗಳಂ ತಾನೊಯ್ಯುತಿರ್ದಂ ತತ್ಕ್ರಯಕ್ಕಾಗಿ ॥ ಪಿಂಗದಲೆ ಪೆರ್ಚಿರಲಿ ಕುಂದಿರ । ಲಂಗಡಿಯುವಂಗೀವುತಿರ್ದಂ । ಪೊಂಗಿ ಬಲಗೈ ಮುಚ್ಚಿ ರೊಕ್ಕವ ನೀತನೊಮ್ಮೊಮ್ಮೆ ॥ ೧೪ ॥

ತನಗೆ ಬೇಕಾದೊಡವೆಯಂ ಸು । ಮ್ಮನೆ ಬೆರಳಿನಿಂ ತೋರ್ದು ನಿಂದೀ । ಘನಮಹಿಮನಂಗಡಿಯುವಂ ಪೇಳ್ದನಿತು ಬೆಲೆಯಿತ್ತು ॥ ಮನೆಗೆ ತರುತಿರ್ದಂ ಮನದೊಳೊಂ । ದಿನಿಸನೆಣಿಸದೆ ಪೊಸತಿದೆನುತಂ । ಮನದೆ ಹಿಗ್ಗದೆ ಜನಕದಂ ತೋರಿಸದಲೊಮ್ಮೊಮ್ಮೆ ॥ ೧೫ ॥

ಮೂರುಕಾಸಿನ ವಸ್ತುವಿಗೆ ಪದಿ । ನಾರುಕಾಸಂ ಪೇಳಲಿಪ್ಪ । ತ್ತಾರು ಕಾಸಿನ ವಸ್ತುವಿಗೆರಳ್ಕಾಸು ಬೆಲೆವೇಳೆ ॥ ವೀರಶರಣಂ ಶಂಕೆಗೊಳ್ಳದೆ । ಸೈರಣೆ ಯೊಳದನೊಯ್ಯುತಿರ್ದನ । ದಾರಿವಂಗೆ ಸಮಾನರಾ ನಿಷ್ಚಪಲಮಾನಸರು ॥ ೧೬ ॥

ಮೂರುವರಹದ ವಸ್ತ್ರಮಂ ವ್ಯಾ । ಪಾರಿಯೋರ್ವನು ಭಕ್ತಿಯಿಂದೀ । ವೀರಗಾರಾಣಕದ ವಸ್ತ್ರಮಿದೆಂದು ಬೆಲೆವೇಳ್ದು ॥ ಮೂರದಿತ್ತನದಂ ನೆರೆ ನಿಜಾ । ಗಾರದೊಳು ತಂದಂದಮಿಹುದೆಂ । ದಾರಯಿದು ತಾನೋರ್ವಪ್ರಮಥಗೆ ಕೊಟ್ಟು ನಮಿಸಿದನು ॥ ೧೭ ॥

ಒಂದು ದೀಪದಕಡ್ಡಿಯಿಲ್ಲದೊ । ಡಂದು ಪತ್ನಿತನೂಭವೆಯರಾ। ನಂದದಿಂ ಕತ್ತಲಮನೆಯೊಳೀತಂ ಬರುವತನಕ ॥ ಎಂದಿನಂತಿರುತಿರ್ದರಲ್ಲದೆ । ಚೆಂದದಿಂದಂ ನೀವದಂ ತರಿ । ಯೆಂದಿವಂಗವರೊರೆಯಲಿಲ್ಲಂ ಕೇಳಲಿಲ್ಲೆನಿತು ॥ ೧೮ ॥

ಮನೆಯೊಳಿಲ್ಲದ ವಸ್ತುವಂ ತರಿ । ಯೆನುತೊರೆಯದುಳ್ಳನಿತರಿಂ ಸು । ಮ್ಮನೆ ಮುದದೆ ತಾಂ ನಡಿಸುತಿರ್ದಳು ಶಿವನ ಸೇವೆಯನು ॥ ಇನೆಯನೊದಗಿಸಿ ತಂದ ಪಾಕದ । ದಿನಸುಗಳನೀಕ್ಷಿಸಿ ಮಹೇಶ್ವರ । ಗಣಕುಚಿತಹಿತಪಾಕವೆಸಗುತ್ತಿರ್ದಳಾ ಭಾರ್ಯೆ ॥ ೧೯ ॥

ಒಂದಡಕೆಯಿರಲದನು ಮನೆಗೈ । ತಂದ ಸರ್ವಪ್ರಮಥವರ್ಯರೊ । ಳಂದು ಸರಿಯೆನೆ ಹಂಚುತಿರ್ದನು ಶುದ್ಧಮನದಿಂದ ॥ ಎಂದಿಗುಂ ದೊಡ್ಡವರು ಸಣ್ಣವ । ರೆಂದು ಪ್ರಮಥರೊಳೆಣಿಸಲಿಲ್ಲಮ । ವಂದಿರಂ ತಿಳಿದಿರ್ದನಭವಸಮಾನರೆಂದಿವನು ॥ ೨೦ ॥

ಒಲೆದು ತನಗರ್ಪಿಸಿದ ನರುದಂ । ಬುಲವ ಮರೆದೀಶರಣನಿಲಯದೊ । ಳುಳಿದು ಪೋದಗಣೇಂದ್ರನಂ ಪುಡುಕುತ್ತ ನಡೆತಂದು ॥ ಸಲಿಸಿದನವಂಗೀ ಮಹಾತ್ಮಂ । ತಳುವದಾ ನರುದಂಬುವನಿಂ । ತಿಳಿಯೊಳಾರೊಳರೀಶ್ವರಪ್ರಮಥೇಂದ್ರಮೋಹಿಗಳು ॥ ೨೧ ॥

ಮಂದಿ ತನ್ನಂ ಬೈವುದಂ ಮೇ । ಣ್ನಿಂದಿಸುವದಂ ಸಹಿಸಿ ಶಾಂತಿಯ । ಪೊಂದುವದೆ ದೇವತ್ವಮೆನಿಪುದು ಸೈರಣೆಯನುಳಿದು ॥ ಒಂದಕೆಂಟಂ ಬೈದು ಭಂಗಿಸ । ಲಂದದು ಪಿಶಾಚತ್ವಮೆನಿಸುವ । ದೆಂದು ಬೋಧಿಸುತಿರ್ದನೀತಂ ಭಕ್ತಸಮಿತಿಯೊಳು ॥ ೨೨ ॥

ಮುನಿದು ಬೈವವರೆಮ್ಮವರವ । ರ್ವಿನುತಹಿತಕಾರಿಗಳವರನುರೆ । ನೆನೆಯದೆ ಮುಗುಳ್ದುರಿದು ಬೈದೊಡೆ ತನಗೆ ಕೇಡಹುದು ॥ ವಿನಯದಲಿ ಸ್ತುತಿ ಗೈವರನ್ಯರು । ಘನತರಾಹಿತಕರ್ತರವರಂ । ಮನವೊಸೆದು ಮನ್ನಿಸಿದೊಡೆ ನಿಸುವದಾತ್ಮಹಿಂಸೆಯದು ॥ ೨೩ ॥

ತನ್ನಮಂದಿಯು ಬೈವರಲ್ಲದೆ । ಭಿನ್ನಮನದನ್ಯರನು ಬೈವರೆ । ತನ್ನವ ರೊಳನ್ಯಾಯಮಿರ್ದೊಡೆ ಬೈದು ತಿದ್ದುವರು ॥ ಮುನ್ನು ತಪ್ಪಿರದಿರ್ದೊಡುಂ ಮುಂ । ದಿನ್ನುಕೆಡದಂತೆಚ್ಚರಿಸಲೆಂ । ದುನ್ನಿಸುತ ಬೈವರ್ನರರ್ದಯೆಯಿಂದೆನುತ ಲಿರ್ದಂ ॥ ೨೪ ॥

ಬಡಿವ ಬೈವಂಗೀಶನೋಳ್ಪಂ । ಕೊಡಲಿಯೆಂದಾ ದುಷ್ಟರಂ ನ । ಲ್ನುಡಿ ಗಳಿಂದೀ ತೆರದೆ ಪರಸುತ್ತಿರ್ದನೆಳ್ಳನಿತು ॥ ಕೆಡುಕರವರೆಂದಾಡದರಿಯದೆ । ಪೊಡವಿಯೊಳು ಸಹಜಸ್ವಭಾವದ । ಬೆಡಗುಬೆಳಗುತ್ತಿರೆ ಮೆರೆದನೀ ಶರಣ ಚಂದ್ರಮನು ॥ ೨೫ ॥

ಧನಿಕನಾಶೆಯು ಕಾರ್ಯಕಭಿಮುಖ । ವೆನೆ ನೆಗಳ್ಚುವದಾಕ್ಷಣಂ ಬಡ । ವನ ಮನೋರಥವವನ ಮನದೊಳ್ಪುಟ್ಟೆ ಕಾರ್ಯವನು ॥ ಎನಿತು ಮೆಸಗದಲಳಿವುದಲ್ಲಿಯೆ । ಮನುಜಗದರಿಂದಾವಗಂ ಬಡ । ತನವೆ ಲೇಸು ವಿರಕ್ತಿಪುಟ್ಟಲೆನುತ್ತ ಬೋಧಿಪನು ॥ ೨೬ ॥

ಗಳಿಸಬೇಕು ಗೃಹಸ್ಥನರ್ಥವ । ಸಲೆ ಸದುದ್ಯೋಗದಿನವಿರತಂ । ತಿಳಿದು ಯೋಗ್ಯವ್ಯಯಮಿದೆನೆ ವಿನಿಯೋಗಿಸಲುಬೇಕು ॥ ಬಳಸಿದನಿತುಗು ತರುವೊರಂತಿಯು । ಜಲದವೊಲ್ಸದ್ವ್ಯಯದನಿತು ಸ । ಮ್ಮಿಳಿತಮುಪ್ಪದು ಧನವ ಬಚ್ಚಿಡಲೇಂ ಪ್ರಯೋಜನವು ॥ ೨೭ ॥

ಧನವನುರೆ ಸಂಪಾದಿಸುವದ । ಕ್ಕೆನಿತು ಜಾಣ್ಮೆಯವಶ್ಯಮನಿತಾ । ಧನವ ಬಳಿಸಲು ಜಾಣ್ಮೆತಕ್ಕುದು ಕಷ್ಟದಿಂ ದುಡಿದ ॥ ಧನವ ಬರಿಬಿನದಿನೊಳು ದುಂದಿನೊ । ಳನುವಿರದ ಕಲಹಾದಿದುಸ್ಸಾ । ಧನದೊಳುಪಯೋಗಿಸಿದೊಡಾತ್ಮ ದ್ರೋಹಮಾಗುವದು ॥ ೨೮ ॥

ತಾರತಮ್ಯವನರಿದ ಪರಮವಿ । ಚಾರಿಯಂ ಸಂಗ್ರಹಿಸಿ ನೆರೆ ಸಂ । ಸಾರ ದೊಳು ಶ್ರೀಯುತನು ಕಾರ್ಯಂಗೈವುದಿಲ್ಲದೊಡೆ ॥ ಭೂರಿದ್ರವ್ಯಂ ನಿಷ್ಪ್ರಯೋಜನ । ಕಾರಣಮದೆನೆ ಸುಜನರೊಪ್ಪದ । ದಾರಿಯಿಂ ಜಾರುವದೆನುತಿವಂ ಬೋಧಿಸುತ್ತಿರ್ದ೦ ॥ ೨೯ ॥

ಗಳಿಸಿದರ್ಥವ ಗುರುಚರಾರ್ಪಣ । ದೊಳುಪಯೋಗಿಪುದುತ್ತಮಂ ಸಂ । ಗಳಿಸಿ ಭೂತದಯಾರ್ಥಮುಪಯೋಗಿಪುದು ಮಧ್ಯಮವು ॥ ಎಳಸಿ ನಿಜತನುಭೋಗತತಿಯೊಳು । ಬಳಿಪುದಧಮಂ ಪೂಳಿಡುವದಿದು । ತಿಳಿಯಲಧಮಾಧಮವೆನಿಪ್ಪುದು ಮೇದಿನೀತಲದೆ ॥ ೩೦ ॥

ಸಾಲಮಂ ತಾಂ ಕೊಡುವದಾದೊಡೆ । ಶೀಲಗುರುಚರಪೂಜಕರಿಗೆ ವಿ । ಶಾಲಧರ್ಮಾತ್ಮಕರಿಗೀಯಲುಬೇಕು ತದ್ಧನವು ॥ ಕಾಲವಶದಿಂ ಬಾರದಿರ್ದೊಡೆ । ಕಾಲಕಂಠಗೆ ಸಲ್ಲುವದು ದುಃ । ಶೀಲರಿಗೆ ಕೊಡಹೊಲ್ಲವೆನುತಿರ್ದ೦ ದಯಾಪರನು ॥ ೩೧ ॥

ಗುರುಚರಪರಾರ್ಪಣಕೆ ತನ್ನಯ । ಪರಮಕಾಯಕದರ್ಥಮುತ್ತಮ । ವರಿಯೆ ಪಿತ್ರಾರ್ಜಿತವೆ ಮಧ್ಯಮವನ್ಯವಿತ್ತಮದು ॥ ಧರೆಯೊಳಧಮಂ ದುರಿತಕರ್ಮಾ । ತುರರ ಧನಮಧಮಾಧಮವೆನು ! ತ್ತರಿದು ಬೋಧಿಸುತಿರ್ದನೀ ಶಿವಧರ್ಮರಮನೈದೆ ॥ ೩೨ ॥

ತಮ್ಮ ಗುರುಗಳ ವಚನಮಂ ತಾವ್ । ನೆಮ್ಮಿ ಕೇಳಲುಬೇಕಿವರು ಪದೆ । ದೊಮ್ಮನದೆ ನಿಜಗುರುವಚನಮಂ ಕೇಳಿರುವರವರು ॥ ತಮ್ಮ ಗುರುವಂ ಕೇಳ್ದಿರುವರಿಂ । ತೊಮ್ಮೆಯುಂ ಬಿಡದಂತೆ ಬಂದಿಹು । ದುಮ್ಮಳಂದೊಲಗಿಪ ಗುರೂಕ್ತಿಯುದಾದಿಗುರುವಚನಂ ॥ ೩೩ ॥

ಅಂದಿನಿಂದೆಂದೆಂದು ಕೆಡದಂ । ತಿಂದಿಗುಂ ಪಸರಿಸಿದ ಜ್ಞಾನಮ । ಮಂದ ಗುರುಬೋಧಾಪರಂಪರೆಯಿಂದ ಬಂದಿಹುದು ॥ ಮಂದಬುದ್ಧಿಯೊಳೀ ಗುರೂಕ್ತಿಗೆ । ಕುಂದನಿತ್ತೊಡೆ ಮುಕ್ತಿವಧುವೊ । ಳ್ಪೊಂದುವದದೆಂತೆಂದು ಪೇಳುತ್ತಿರ್ದನಿವನರಿದು ॥ ೩೪ ॥

ರೋಗಿ ತನಗಪ್ಪಖಿಲಸಂಕಟ । ಪೂಗಮಂ ಮಾಜದಲೆ ನಿಚ್ಚಳ । ಮಾಗಿ ಪೇಳದೊಡೆಂತು ತದ್ರೋಗಂ ತೊಲಗದಂತು ॥ ಶ್ರೀಗುರೂತ್ತಮನಡಿಗಳಿಗೆ ತಲೆ । ವಾಗಿ ನಿಜಸಂಶಯುವನರುಹದೊ । ಡಾಗದೈ ಭವನಾಶಮೆಂದೀ ಶರಣ ನಾಡಿದನು ॥ ೩೫ ॥

ತನ್ನ ಗುರುನಾಥಂ ಮುನಿದೊಡದು । ಸನ್ನುತಾಶೀರ್ವಾದವೆಂದೇ । ಭಿನ್ನವಿಲ್ಲದೆ ನಂಬಬೇಕಲ್ಲದೆ ತದಾಶ್ರಯುವ ॥ ಸನ್ನಿಗೊಂಡುಳಿದನ್ಯಗುರುವಿನ । ಸನ್ನಿಧಿಯನಾಶ್ರಯಿಸುವವನ ಸು । ಖೋನ್ನತಿಗೆ ಬಹುಹಾನಿಯೆಂದುಸಿರಿದನು ಚಿನ್ಮೂರ್ತಿ ॥ ೩೬ ॥

ಕುಸುಮಸಂಗದಿನೆಣ್ಣೆಯೆಳ್ಳುಂ । ವಸನಮುದಕಂ ಪರಿಮಳಂದಳೆ । ದೆಸೆವವೊಲ್ಸಜ್ಜನಸಮಾಗಮದಿಂದ ಮಾನವನು ॥ ಕುಶಲರೊಪ್ಪುವ ತೆರದೆ ಸದ್ಗುಣ । ವಿಸರಮಂ ತಳೆದೀಣ್ಸೆಸೆಯೊಳುರೆ । ಜಸವನುತ್ತಮಸುಖವ ಪಡೆವಂ ಸುಜನನೆಂದೆನಿಸಿ ॥ ೩೭ ॥

ದುರಿತಕರ್ಮವ ಮಾಡಗೊಡನಾ । ದರದೆ ಹಿತಕಾರ್ಯದೊಳು ಮನಮಂ । ತಿರುಗಿಸುವನಾಪತ್ತಿನೊಳು ಮಾಳ್ಪಂ ಸಹಾಯವನು ॥ ತೊರೆಯನೆಂದುಂ ನಂಬುಗೆಯನುರು । ತರಗುಣಗಳಂ ಪ್ರಕಟಪಂ ಜನ । ಕರುಹದಿರ್ಪಂ ಗೌಪ್ಯಮಂ ಸನ್ಮಿತ್ರನನುದಿನದೆ ॥ ೩೮ ॥

ಲಿಂಗಪೂಜಕರಾದ ಮಹಿಮರ । ಸಂಗಸುಖಮೊದಗಿದೊಡೆ ಸಾಲ್ಗುವು । ಡಂಗುವದು ಭವವೆಂದು ಬೋಧಿಸುತಿರ್ದನಿವನೊಲ್ದು ॥ ಪಿಂಗದಾಗಳ್ತಾನುಮಾಶಿವ । ಲಿಂಗಪೂಜಾನಿಷ್ಠ ಸಮುದಯ । ಸಂಗದೊಳು ಪರಿಣಮಿಸುತಿರ್ದಂ ಮಂಗಲಮಿದೆಂದು ॥ ೩೯ ॥

ಕಲಿಯ ಶೌರ್ಯಂ ಸಮರದೊಳು ನಿಜ । ಲಲನೆಯೊಲುಮೆಯು ಬಡತನದೊಳುಂ । ಗೆಳೆಯನ ಗುಣಂ ಘಟಿಸಿದಾಪತ್ತಿನೊಳು ಧನಯುತನು ॥ ಒಲಿದು ಕೊಟ್ಟಹ ಋಣವ ಕೇಳ್ವೆಡೆ । ಯೊಳು ಮಣಿಯ ಚಿತ್ತಂ ಪ್ರಮಥಸಂ । ಕುಲದ ಕಾಟದೊಳಭವಭಕ್ತರ ಭಕ್ತಿ ತಿಳಿಯುವದು ॥ ೪೦ ॥

ಭಕ್ತವೇಷವ ಧರಿಸಿದೊಡೆ ಶಿವ । ಭಕ್ತನೆನಿಸನು ಪ್ರಮಥಪದದೊಳು । ಭಕ್ತಿಯುಳ್ಳೊಡೆ ಭಕ್ತನಪ್ಪನು ಶ್ರೀಮದಲ್ಲಮನು ॥ ಭಕ್ತಿಯಂ ಪರಿಕಿಸಿ ಬಸವನಿಗೆ । ಭಕ್ತನಹುದೆಂದೊಪ್ಪಿದನು ಬರಿ । ವ್ಯಕ್ತವೇಷಕ್ಕೊಪ್ಪಲಿಲ್ಲೆಂದೊರೆದನಿವನೊಲಿದು ॥ ೪೧ ॥

ಧುರದೊಳರಸಂ ಶತ್ರುವಿನ ಕೈ । ಶರೆಯದಾಗಲು ಜೀವದಾಶಾ । ಪರ ಕಲಿಗಳಿರದೋಡುವಂದದೆ ದಾಂಭಿಕರ ವ್ರತವು ॥ ಸರಿದು ಪೋಪುದು ವಿಷಮ ಕಾಲದೊ । ಳರುಣನಸ್ತಾದ್ರಿಯೊಳೊಗೆದೊಡುಂ । ಶರಣರ ವ್ರತಂ ಕಳೆಗೆಡದೆ ಬೆಳಗುವದು ತಾನೆಂದ ॥ ೪೨ ॥

ಹೊಂದಿದಾ ವಿಷಯಗಳ ಭೋಗದಿ । ನೆಂದಿಗುಂ ಸಂತೃಪ್ತಿಯಿಲ್ಲದ । ರಿಂದ ಕರಣತ್ರಯಪುರಸ್ಸರಮಾಗಿ ಮಾನವನು ॥ ಕುಂದದಲೆ ವಿಷಯಪ್ರಕರ ದೊಳ । ಮಂದವೈರಾಗ್ಯವನು ಪಡೆವುದೆ । ಚಂದವಿೂ ವಿಷಯಭ್ರಮೆಯೆ ಬಹು ಘಾತಕರಮೆಂದ ॥ ೪೩ ॥

ಹವಿಯನೆರೆದಿಹ ವನ್ಹಿಯಂದದೆ । ವಿವಿಧವಿಷಯಗಳೊದವಿನಿಂ ಮಾ । ನವನ ಕಾಮಂ ಬೆಳೆವುದಲ್ಲದೆ ಕುಂದದದರಿಂದ ॥ ತವೆ ವಿಷಯಗಳ ಕೊರತೆಯಂ ಬ । ಲ್ಲವರವಿರತಂ ಬೇಡುವರುಮಾ । ಧವನ ನೆನಹಿಗೆ ಸಾಧನಮದೆಂದರಿದು ಮನವೊಪ್ಪಿ ॥ ೪೪ ॥

ವಿಷಯಚಿಂತನೆಯಿಂದ ಮನುಜಗೆ । ವಿಷಯಸಂಗಂ ಪ್ರಾಪ್ತಿಯಪ್ಪುದು । ವಿಷಯಸಂಗದಿನಹುದು ಕಾಮೋತ್ಪತ್ತಿ ಕಾಮಕ್ಕೆ ॥ ವಿಷಯತೃಪ್ತಿಯದಾಗದಿರ್ದೊಡೆ । ವಿಷತರಕ್ರೋಧಮದು ಜನಿಪುದು । ವಿಷಮತತ್ಕ್ರೋಧ ಪ್ರಬಲದಿಂ ಮೋಹಮುದಿಸುವದು ॥ ೪೫ ॥

ವಿತತಮೋಹದಿನಳಿವುದುರೆ ಸ್ಮೃತಿ । ಸ್ಮೃತಿಯುಳಿವಿನಿಂ ಮತಿ ಕೆಡುವದಾ । ಮತಿವಿಭಂಗದಿನಾಗುವದು ನಾಶತ್ವವಿೂ ತೆರದೆ ॥ ಅತುಲಹಾನಿಪರಂಪರೆಗಳೀ । ಕ್ಷಿತಿಯೊಳಕ್ಕುಂ ವಿಷಯದಿಂದಂ । ಸತತಮಿದನರಿಯದಲೆ ಕೆಡುವರು ಜಗದ ಜೀವಿಗಳು ॥ ೪೬ ॥

ತಿಳಿಯೆ ದುರ್ಧರವಿಷಕೆ ವಿಷಯಾ । ವಳಿಗೆ ಮಹದಂತರವುದುಂಟೇ । ನೆಲದೊಳೊಂದೇ ಜನ್ಮಮಂ ವಿಷವುಪಹರಿಸುತಿಹುದು ॥ ಪಲವು ರೂಪದನೇಕ ಜನ್ಮಂ । ಗಳನು ವಿಷಯವುಮದಪಹರಿಪುದೀ । ಮಲಿನವಿಷಯದ ಸಲುಗೆಯಂ ಬಿಟ್ಟವನೆ ಮೋಕ್ಷಾರ್ಥಿ ॥ ೪೭ ॥

ರಾಗಮೆಂಬಾ ನೇಣಿನಿಂ ಬಿಗಿ । ದಾಗಳುಂ ನೆರೆವಿಷಯರಥದೊಳು । ತೂಗಿ ಕರ್ಮವೆನಿಪ್ಪ ದೂತಂ ಕೆಳಗೆ ಮೇಲಕ್ಕೆ ॥ ಸಾಗುವಂದದೆ ಜೀವರಂ ಸೊಗ । ಸಾಗಿ ಜಗ್ಗಾಡುತ್ತ ಬಿನದಿಪ । ನಾಗುತಿರ್ಪೀ ಕಷ್ಟಮಂ ಜಗವರಿಯದಕಟಕಟಾ ॥ ೪೮ ॥

ಸಿರಿಯು ಕನಸಿನವಾಳ್ಕೆಯಿಂ ತೋ । ರ್ದಿರದಡಗುವದು ಚೆಲುವ ಹೂವಿನ । ತೆರದೆ ಜವ್ವನಮುದುರ್ದು ಪೋಪುದು ಕ್ಷಣಿಕಮಾಯುವಿದು ॥ ನರನೆ ನೆಚ್ಚುಗೆಯೇನುಮಿಲ್ಲಂ । ಬರಿದೆ ಕೆಡಬೇಡೆಚ್ಚರಿಕೆಯೆ । ಚ್ಚರಿಕೆಯೆಂದಿರುವಾರ್ಯವಚನವನರಿಯಿರೆನುತಿರ್ದ ॥ ೪೯ ॥

ತೈಲವುಂಡೋಲೆಯೊಳಗಕ್ಷರ । ಜಾಲವದು ಮೂಡದವೊಲಾ ವಿಷ । ಯಾಳಿಮಗ್ನಮನಸ್ಸಿನೊಳು ಶಿವಭಕ್ತಿ ನೆಲೆಗೊಳದು ॥ ಮೇಲುತರಸುಖಸಾಧನಕ್ಕಂ । ದಾಳಿಯಿಡಲಾತುರಿಪ ಮನಸಿಗೆ । ಶೀಲದಿಂ ನಿರ್ಮಲತೆಗೊಡುವನೆ ಜಾಣನಿಂತೆಂದ ॥ ೫೦ ॥

ಸುರುಚಿರಾಷ್ಟಾವರಣಮಂಗಂ । ಪರಮಪಂಚಾಚಾರಮಸುವಾ । ಗಿರುವವೀ ಶ್ರೀವೀರಶೈವರ್ಗಾವರಣಮಿರ್ದು ॥ ಪರತರಾಚಾರಂಗಳಿರದೊಡೆ । ಹರಣಮಿಲ್ಲದ ಕಾಯದಂತುರೆ । ಮೆರೆಯನಾತಂ ಭೋಗಮೋಕ್ಷಂಗಳಿಗೆ ಹೊರತಾಗಿ ॥ ೫೧ ॥

ಚಳಿಯ ಬಲುಬಾಧೆಯನು ಹೊದಿಕೆಯು । ಕಳೆಯುವಂತಜ್ಞಾನಜೀವಿಯ । ಹಲವು ಭವಬಾಧೆಗಳನಷ್ಟಾವರಣಗಳು ಬಿಡದೆ ॥ ತೊಲಗಿಪವು ಸುಜ್ಞಾನಮಯುದವಿ । ರಳಸುಖಂಗುಡುತಿರ್ಕುಮಿವುಗಳ್ । ತಿಳಿಯಲಿಂದುಧರಸ್ವರೂಪಂ ಚಿತ್ಕ್ರಿಯಾನ್ವಿತವು ॥ ೫೨ ॥

ಗುರುವು ಲಿಂಗಂ ಜಂಗಮಂ ಮೇ । ಣ್ಚರಣಪಾನೀಯಂ ಪ್ರಸಾದಂ । ವರಭಸಿತಮುಭವಾಕ್ಷಿಮಂತ್ರಮಿವಾವರಣಮೆಂಟು ॥ ಕರಮಿವು ಜಗದ್ಧಿತನಿಮಿತ್ತಂ । ಪರಶಿವನ ಸಲ್ಲೀಲೆಯಿಂದಾ । ಗಿರುವವಿವರೊಳ್ಮೆರೆವವಿತ್ತೆರಮಾಗಿ ವಿವರಿಸಲು ॥ ೫೩ ॥

ಭೂತಿಪಾದಜಲಪ್ರಸಾದ । ಖ್ಯಾತಮಂತ್ರಗಳಿಂತು ನಾಲ್ಕುಂ । ಭೂತಳದೊಳೆನಿಪವು ಕ್ರಿಯಾರೂಪಾವರಣಮೆಂದು ॥ ಪೂತಗುರುಲಿಂಗಪ್ರಜಂಗಮ । ಭೂತನಾಥಾಕ್ಷಂಗಳಿವು ನಾ । ಲ್ಕೋತು ಚಿದ್ರೂಪಾವರಣಮಾಗಿರ್ಕುಮಿವುಗಳೊಳು ॥ ೫೪ ॥

ಕ್ಷಾರ[೧]ರುದ್ರಾಕ್ಷಗಳೆರಡುಮಧಿ । ಕಾರಸಾಧನಮೆನಿಸುವವು ಶ್ರುತಿ । ಸಾರಮಂತ್ರಂ ಧ್ಯೇಯಸಾಧನಮಾಗಿಹುದು ಮತ್ತೆ ॥ ಧೀರಸದ್ಗುರುಲಿಂಗಚರರೇ । ಮೀರಿದಧಿದೈವಂಗಳೆನಿಕುಂ । ತೋರುವ ಪದಾಂಬುಪ್ರಸಾದಗಳೇ ಫಲಗಳಿಹವು ॥ ೫೫ ॥

ಬಂದು ತನ್ನಂಘ್ರಿದ್ವಯಕ್ಕಂ । ವಂದಿಸಿದ ಶಿಷ್ಯನ ಶಿರದೊಳಾ । ನಂದದಿಂ ಕರವಿಟ್ಟು ಲಿಂಗವನಿತ್ತು ಬೋಧಿಸುತ ॥ ಮುಂದೆ ಲಿಂಗಾಂಗೈಕ್ಯಮಂ ತೋ । ರ್ದಂದಮೆನೆ ತನ್ನಂತೆ ಮಾಳ್ಪ ಬ । ಲಂದಳೆದ ಗುರುವರ್ಯನೊಂದಾವರಣಮೆನಿಸುವನು ॥ ೫೬ ॥

ಏಕದಳಕಂಜಾತದಿಂ ಬಂ । ದೀ ಕರಾಬ್ಜದೆ ನಿಂದು ಮುದದಿಂ । ದಾಕರಣನಿವಹದೊಳು ಸರ್ವಾಂಗದೊಳು ನೆರೆ ತುಂಬಿ ॥ ಕಾಕುತನದೊಂದಂಗಭಾವವ । ನೇ ಕಳೆದು ನಿಜಭಾವಮಂ ಮಾ । ಳ್ಪೀ ಕಲಾತ್ಮಕಲಿಂಗವೆರಡನೆಯಾವರಣಮಿಹುದು ॥ ೫೭ ॥

ಆರು ಸ್ಥಲದೊಳು ಮೆರೆವ ಚಕ್ರದೊ । ಳಾರು ಪ್ರಣವಂಗಳೊಳು ಶೋಭಿಸು । ವಾರು ಲಿಂಗವನಾರು ಮುಖಗಳನಾರು ಹಸ್ತಗಳ ॥ ಆರು ಶಕ್ತಿಯನಾರು ಭಕ್ತಿಯ । ನಾರು ಸುಪದಾರ್ಥಪ್ರಸಾದವ । ತೋರಿ ಲಿಂಗದ ನೆನಹಿನೊಳಗಿರಿಸುವನೆ ಜಂಗಮನು ॥ ೫೮ ॥

೧ ಕ್ಷಾರ = ವಿಭೂತಿ.

ದಶಮರುದ್ವರ್ತನವನಿಂಗಿಸಿ । ದಶವಿಧಾಂಘ್ರಿಜಲಾಚರಣೆಯೊಳ । ಗೆಸೆವ ಸವಿಯಂ ತೋರಿ ವಿಷಯಸುಖವನು ಹಸಗೆಡಿಸಿ ॥ ಮುಸುಗಿದೀ ದುರ್ಭಾವ ಮರಣದು । ಬ್ಬಸದ ಬೆದರಿಕೆಯಿಲ್ಲದೆ ನಿರಂ । ಕುಶಮಹಾವೃತ್ತಿಯನು ಮಾಳ್ಪುದೆ ಪಾದಸಲಿಲಮಿದು ॥ ೫೯ ॥

ಪೊಂಗಿ ಪನ್ನೊಂದಿಂದ್ರಿಯಗಳೊಳು । ಲಿಂಗಗಳ ಸಂಗವನು ಮಾಡಿಸಿ । ಪಿಂಗದೇಕಾದಶಮಹಾದಿವ್ಯಪ್ರಸಾದವನು ॥ ಭಂಗಮಿಲ್ಲದೆ ಸಂತತಂ ತ । ಲ್ಲಿಂಗಮುಖದಿಂ ಸೇವಿಪುದೆ ಭ । ಕ್ತಂಗೆ ಮಂಗಲದಪ್ರಸಾದಾವರಣ ಮಾಗಿಹುದು ॥ ೬೦ ॥

ಇನಿಸು ನೆಲದೊಳು ಸೂಸದಂದದೆ । ದಿನದಿನಂ ಸರ್ವಾಂಗದೊಳು ಬಿಡ । ದನುನಯದೆ ಧರಿಸಿದೊಡೆ ಭಸಿತಂ ಕಳೆವುದಾಮಯವ ॥ ವನಜ ಸಂಭೂತಂ ಬರೆದ ಲೇ । ಖನವ ತೊಡೆವುದು ಹಮ್ಮನುಳಿಪುದು । ವಿನು ತಪಟ್ಸ್ಥಲವಾಂಛೆಗೊಡುವುದು ಶ್ರೀವಿಭೂತಿಯದು ॥ ೬೧ ॥

ಪ್ರೇತಭೂತಗ್ರಹಸಮೂಹದ । ಭೀತಿಯಂ ದೂರದೆ ತೊಲಂಗಿಸಿ । ಪಾತಕಾಂಬುದಜಾತಝುಂಝಾವಾತಮೆಂದೆನಿಸಿ ॥ ಸಾತಿಶಯಮೆನೆ ಸುಕೃತಮಂ ಪರಿ । ಪೂತಪರಶಿವಕರುಣಮಂ ಕೊ । ಟ್ಟೋತು ರಕ್ಷಿಪುದೀ ಶಿವಾಕ್ಷಾ ವರಣಮನವರತಂ ॥ ೬೨ ॥

ಪಾಪಮಂ ಸಂಹರಿಸುವದು ನಗ । ಚಾಪನಿಗಧಿಷ್ಠಾನಮಿದು ಶಿವ । ರೂಪಮಂ ಬೋಧಿಪುದು ಸಂಶಯಮಂ ನಿವಾರಿಪುದು ॥ ಜಾಪಿಗಳ ವಿಕ್ಷೇಪ ದೋಷವ । ಲೋಪಮೆನೆ ಕೈದೊಲೆದು ರಕ್ಷಿಪು । ದೀ ಪರಮಶಿವಮಂತ್ರ ಮಿಂತಷ್ಟಾವರಣಮುಂಟು ॥ ೬೩ ॥

ಒಂದು ಲಿಂಗಾಚಾರಮುಂ ಮ । ತ್ತೊಂದುರುಸದಾಚಾರಮುಂ ಮಗು । ಳ್ದೊಂದು ಭೃತ್ಯಾಚಾರಮಿನ್ನೊಂದಾ ಶಿವಾಚಾರ ॥ ಮುಂದೆ ಸುಗಣಾಚಾರಮಿೊ ಬಗೆ । ಯಿಂದ ಪಂಚಾಚಾರಮಿರ್ಕುಂ । ಕುಂದದಿವುಗಳನಾಚರಿಸಲೇವೇಳ್ಕು ಶಿವಭಕ್ತಂ ॥ ೬೪ ॥

ಗುರುಕರುಣಮಂ ಪಡೆದು ವಿಮಲಾ । ವಿರಳನಿಜಲಿಂಗಾಂಗದೆರಕದೆ । ಪರಿಣಮಿಪ ಸದ್ಭಕ್ತನಾ ಸ್ಥಾವರದ ಲಿಂಗವನು ॥ ಮರವೆಯಿಂದಾದೊಡವು ದೆಂದುಂ । ಚರಿಸದುರೆ ಭಾವಿಸದಲಿಹುದೇ । ಪರಮಲಿಂಗಾಚಾರಮೆನಿಸುವದಿದುವೆ ಶ್ರುತಿಮತವು ॥ ೬೫ ॥

ಕುಂದುಹೊದ್ದದ ಶುದ್ಧಕಾಯಕ । ದಿಂದ ಬಂದ ಪದಾರ್ಥಜಾತವ । ನೊಂದು ನಂಬುಗೆವಿಡಿದು ಘನಗುರುಲಿಂಗಜಂಗಮಕೆ ॥ ಎಂದುಮುಂ ಬಿಡದಂತೆ ಪರಮಾ । ನಂದದಿಂ ದಾಸೋಹಮಂ ಕೈ । ದಂದಮೆನೆ ನೀಡುವದೆ ತಕ್ಕುದಿದೇ ಸದಾಚಾರಂ ॥ ೬೬ ॥

ಗುರುಪರಚರಾವಳಿಯ ಭಕ್ತರೆ । ಪಿರಿಯರವರಿಗೆ ಲೆಂಕನಾನೆಂ । ದರಿದು ನಿರಹಂಕಾರಭಕ್ತಿಯೊಳಂಜಿ ಸೇವಿಸುತ ॥ ವರತನುಮನೋವಿತ್ತಗಳನನ । ವರತಮುಂ ವಂಚಿಸದೆ ನಲುವಿಂ । ನೆರೆ ಸಮರ್ಪಿಸುತಿಹುದೆ ಭೃತ್ಯಾಚಾರಮೆನಿಸುವದು ॥ ೬೭ ॥

ಭಕ್ತದೇಹಿಕದೇವನೆಂದಾ । ಭಕ್ತರೊಳು ಜಾತ್ಯಾಶ್ರಮಗಳ ಪ್ರ । ಸಕ್ತಿಯಂ ತೆಗೆದರಸದಿವರೆನಗತ್ಯಧಿಕರೆಂದು ॥ ಭಕ್ತಿಯಿಂದಂ ತಣಿಸುತಾ ಸ । ದ್ಭಕ್ತರೊಕ್ಕ ಪ್ರಸಾದವಾ ಪರ । ಮುಕ್ತಿಗಾಶ್ರಯಮೆಂದು ಸ್ವೀಕರಿಪುದೆ ಶಿವಾಚಾರಂ ॥ ೬೮ ॥

ಹರಶರಣಗುರುಲಿಂಗಜಂಗಮ । ಚರಣಜಲರುದ್ರಾಕ್ಷಪಂಚಾ । ಕ್ಷರಮನುವಿಭೂತಿಪ್ರಸಾದಾದಿಗಳ ನಿಂದೆಯನು ॥ ಮರವಿನಿಂದಾದಡಮದಾಲಿಸ । ದಿರುವದೆ ಗಣಾಚಾರಮಿಂತಾ । ಚರಿಸುವಂಗನು ಷಟ್ಸ್ಥಲವಿಚಾರದೊಳು ರಮಿಸುವನು ॥ ೬೯ ॥

ಮುಕ್ತಿಹರ್ಮ್ಯಕೆ ಷಟ್ಸ್ಥಲಂಗಳೆ । ವ್ಯಕ್ತಸೋಪಾನಂಗಳಾಗಿವೆ । ಭಕ್ತನೀ ಮೆಟ್ಟಲುಗಳಿಂದೇರುವನದಂ ಪದೆದು ॥ ಸೂಕ್ತಿಮಿಗೆ ಬೊಮ್ಮವೆ ಸ್ಥಲಂ ಪರ । ಮುಕ್ತಿನಿಧಿತೇಜೋಮಯಂ ಚಿ । ದ್ವ್ಯಕ್ತಮುತ್ಪತ್ತಿಸ್ಥಿತಿಲಯಾಧಾರಮಿೂ ಸ್ಥಲವು ॥ ೭೦ ॥

ಅಂಗಮೆಂದುಂ ಲಿಂಗಮೆಂದುಂ । ಪಿಂಗದೊಂದೇ ಸ್ಥಲಮೆರಡು ರೂ । ಪಂಗಳಂ ಧರಿಸಿಹುದು ಶಕ್ತಿಸ್ಫುರಣದಿಂ ತಾನೆ॥ ತುಂಗಶಕ್ತಿಸಮೇತವಾ ಘನ । ಲಿಂಗಮಂಗಂ ಭಕ್ತಿಯುಕ್ತಮ । ದಂಗಲಿಂಗಸುಯೋಗವೇ ಪರಮಾವಿರಳ ಪದವು ॥ ೭೧ ॥

ಅರಿಯಲಂಗಂ ಭಕ್ತಮಾಹೇ । ಶ್ವರ ಪ್ರಸಾದಿಪ್ರಾಣಲಿಂಗಿ ಸು । ಶರಣ ಐಕ್ಯಸ್ಥಲಗಳೆಂದಾರಾಗಿಹುದು ಮತ್ತೆ ॥ ಪಿರಿದೆನಿಸುವಾಚಾರಗುರುಶಿವ । ಚರ ಪ್ರಸಾದಮಹಾಭಿಧಾನ । ಸ್ಫುರದಮಲಲಿಂಗಂಗಳೆಂದಾರಾಗಿಹುದು ಲಿಂಗಂ ॥ ೭೨ ॥

ಮುಕ್ತಿಮಾರ್ಗವೆನಿಪ್ಪ ಶ್ರದ್ಧಾ । ಭಕ್ತಿ ನಿಷ್ಠಾಭಕ್ತಿಯುಂ ಸು । ವ್ಯಕ್ತ ಮಾದವಧಾನಭಕ್ತಿಯುಮನುಭವಾಹ್ವಯದ ॥ ಭಕ್ತಿಯಾನಂದಾಭಿಧಾನದ । ಭಕ್ತಿ ಸಮರಸಭಕ್ತಿಯಿಂತಾ । ರ್ಭಕ್ತಿಗಳ್ಪೊಂದಿರ್ಪವಾರಂಗಸ್ಥಲಂಗಳೊಳು ॥ ೭೩ ॥

ಸಲೆನಿವೃತ್ತಿಪ್ರತಿಷ್ಠೆ*ವಿದ್ಯಾ । ಕಲೆಯು ಶಾಂತಿಸುಶಾಂತ್ಯತೀತಾ । ಕಲೆ ಬಳಿಕ್ಕಂ ಶಾಂತ್ಯತೀತೋತ್ತರೆಯೆನಿಪ ಕಲೆಯು ॥ ತಿಳಿಯಲಿಂತಾರ್ಕಲೆಗಳಿರ್ಪ್ಪಂ । ವಿಲಸಿತಾಚಾರಾದಿಲಿಂಗಂ । ಗಳೊಳನುಕ್ರಮದಿಂದ ತಚ್ಛಕ್ತಿಗಳೆನಿಸಿ ಬೆರೆದು ॥ ೭೪ ॥

ನಿರುತದೆ ಸದಾಚಾರಪರನಾ । ಗಿರುವದೇಯಾಚಾರಲಿಂಗಂ । ಪಿರಿಯ ಶ್ರದ್ಧಾಭಕ್ತಿಕಾರಣಮದು ಲಭಿಸುವದಕೆ ॥ ಪರಿಕಿಸಿದೊಡಾಚಾರಲಿಂಗವೆ । ನೆರೆದ ಸಂಸ್ಕೃತಿಯಿಂ ನಿವೃತ್ತಿಸಿ । ಪರಶಿವಾಭಿಮುಖತ್ವಕೆಡೆಗೈವುದು ನಿವೃತ್ತಿಕಲೆ ॥ ೭೫ ॥

ಪಿಂಗದಲೆ ಸಂಸೃತಿಯ ಬಹುದುಃ । ಖಂಗಳಿಂದ ನಿವೃತ್ತಿಮುಖನಾ । ದಂಗನಂ ಮುದದಿಂ ಪ್ರತಿಷ್ಠಾಕಲೆಯು ಶಿವನಲ್ಲಿ ॥ ಪೊಂಗಿ ತಾನು ಪ್ರತಿಷ್ಠೆಗೊಳಿಪುದು । ಮಂಗಲವೆನಿಪ್ಪಿದುವೆ ತದ್ಗುರು । ಲಿಂಗಶಕ್ತಿಯಿದಕ್ಕೆ ನಿಷ್ಠಾಭಕ್ತಿಯೇ ಮೂಲಂ ॥ ೭೬ ॥

---

೧-೨ ಈಯೆರಡೂ ಸ್ಥಾನಗಳಲ್ಲಿ ಪ್ರ, ಪ್ರ, ಈ ವರ್ಣಗಳ ಹಿಂದಿನ ರ, ರ, ಗಳಿಗೆ ಗುರುತ್ವವು ಬರುತ್ತಿದ್ದು, ಛಂದಸ್ಸಿನ ದಸಿಯಿಂದ ಶಿಥಿಲವಾಗಿ ಪ್ರಯೋಗಿಸಿಧೆ.

* ಇಲ್ಲಿ ಪ್ರ, ದ ಹಿಂದಿನ 'ತ್ತಿ'ಗೆ ಗುರುತ್ವವು ಬರುತ್ತಿದ್ದು ಛಂದಸ್ಸಿಗಾಗಿ ಶಿಥಿಲ ಪ್ರಯೋಗವದೆ.

ಶಿವನೊಳೆಡೆಗೊಂಡಂಗನಂ ಪರ । ಶಿವನ ಧರ್ಮವಿಚಾರದೊಳು ಬಿಡ । ದವಿರತಂ ತೊಡಗಿಪುದು ವಿದ್ಯಾಕಲೆ ತಿಳಿಯಲಿದುವೇ ॥ ಪ್ರವಿಮಲದ ಶಿವ ಲಿಂಗಶಕ್ತಿಯು । ಸವೆಯದಿರ್ಪವಧಾನಭಕ್ತಿಯೆ । ತವೆ ಪ್ರಸಾದಿಗೆ ಮುಖ್ಯ ಮೆಂದನು ಶರಣದಿನಕರನು ॥ ೭೭ ॥

ತುಂಗಶಿವಧರ್ಮದ ವಿಚಾರದಿ । ನಂಗನಂ ಚಲಿಸದವೊಲೆಸಪುವೆ । ಜಂಗಮಾಹ್ವಯಲಿಂಗಶಕ್ತಿಯು ಶಾಂತಿಕಲೆಯಿದುವೇ ॥ ಪಿಂಗದನುಭವಭಕ್ತಿ ಯಿಂದಂ । ಸಂಗಳಿಪುದಖಿಲೇಂದ್ರಿಯಗಳೊಳು । ಲಿಂಗಮಿದು ವ್ಯಾಪಿಸಿದ ಚೇ ತನಲಿಂಗಮಾಗಿಹುದು ॥ ೭೮ ॥

ಶಾಂತಿಯಿಂದಮನುಭವನಿಷ್ಠಾ । ವಂತನಾದಂಗಂ ಜಡತರ । ಭ್ರಾಂತಿ ಸಂಸೃತಿದುಃಖಮಿಲ್ಲದ ಸುಖದೆ ರಮಿಸುವದೆ ॥ ಮುಂತೆ ಮೆರೆವ ಪ್ರಸಾದ ಲಿಂಗಮಿ । ದಿಂತಿದಕೆ ಕಲೆಶಾಂತ್ಯತೀತೆಯು । ಮಂತರಿಸದಾನಂದಭಕ್ತಿಯೆ ಮೂಲಮನವರತ ॥ ೭೯ ॥

ದ್ವೈತವಿಲಯದಿನಂಗನಂ ವಿ । ಖ್ಯಾತಸುಮಹಾಲಿಂಗದೊಳು ನಿ । ರ್ಧೂತಮೋಹದ ಶಾಂತ್ಯತೀತೋತ್ತರೆ ಮುಳುಂಗಿಪುದು ॥ ಪೂತಸಮರಸಭಕ್ತಿ ಯೇಯಿದ । ಕೋತು ಕಾರಣಮಾಗಿಹುದು ಚಿ । ದ್ಭೂತಮುಂ ಮಿಗೆಸಾಮ ರಸ್ಯವೆ ಮುಕ್ತಿ ಬೇರಿಲ್ಲ ॥ ೮೦ ॥

ಸ್ಥಲದೊಳಗೆ ತಾದಾತ್ಮ್ಯದಿಂದಂ । ನೆಲಸಿದುದ್ಯಚ್ಛಕ್ತಿಯೊಂದೇ । ಚಲನ ದಿಂದಂ ಶಕ್ತಿಭಕ್ತಿಗಳೆಂದುಮೆರಡಾಗಿ ॥ ಸಲೆಯುಪಾಸ್ಯೋಪಾಸಕತ್ವಂ । ಗಳನು ಭಕ್ತೋದ್ಧಾರಕಾಗಿಯೆ । ತಳೆದುದೆಂದೀ ತೆರದೆ ಬೋಧಿಸುತಿರ್ದನೀ ಘನನು ॥ ೮೧ ॥

ಅಂಗಭಾವವನುಳಿದು ಪರತರ । ಲಿಂಗವೇ ತಾನಾಗಿ ಸಲೆ ಬಹಿ । ರಂಗದೊಳು ಶುದ್ಧಕ್ರಿಯಾಚರಣಗಳನಾಚರಿಸಿ ॥ ಪೊಂಗಿ ಸದ್ಭಕ್ತಿಯನು ಭಕ್ತಜ । ನಂಗಳಿಗೆ ತೋರ್ದುದ್ಧರಿಸಿದೀ । ತುಂಗವೀರೇಶಂಗೆ ವಂದಿಸಿ ನುತಿಸಿ ಬಾಳುವೆನು ॥ ೮೨ ॥

ಅಂತು ಸಂಧಿ ೧೬ಕ್ಕೆ ಪದಗಳು ೯೬೨.



ಶ್ರೀ ಶಿವಶರಣಾಯ ನಮಃ



## ಹದಿನೇಳನೆಯ ಸಂಧಿ ಪ್ರಾರಂಭ.

ಸೂಚನೆ ॥ ಬಂದ ಮಾವಣ್ಣಿಗಳನು ಕೊಳ್ಳದೆ । ತಿಂದ ವಿಷ ಮಂ ಕಳೆದು ಸತಿಗೊಲ । ವಿಂದ ಬೋಧಿಸಿ ತಣ್ಣುಗೈದಳು ಶರಣೆ ಗುರುದೇವಿ ॥ ಪಲ್ಲ ॥

ಪದ ॥ ಲಿಂಗವೇ ತಾಂ ತತ್ಪದಾರ್ಥಮ । ದಂಗಮದುವೇ ತ್ವಂಪದಾರ್ಥಂ । ತುಂಗಲಿಂಗಾಂಗೈಕ್ಯಮುಸಿಪದದರ್ಥಮಾಗಿಹುದು ॥ ಅಂಗಲಿಂಗಗಳೊಂದೆಯೆಂದರಿ । ದಂಗೆ ಪರಮಾನಂದವಹುದೆಂ । ಬಿಂಗಿತವ ಬಣ್ಣಿಸುವ ಶ್ರುತಿಗಳ್ಹಿನ್ನುಸಿರ್ಗೊರವ ॥ ೧ ॥

ಲಿಂಗನಾಮಕಭಕ್ತನೋರ್ವಂ । ಪಿಂಗದೀಯಲೆನುತ್ತ ಚೂತಫ । ಲಂಗಳಂ ತಾಂ ಪೊತ್ತು ಶಾಂತಾಶ್ರಮಕೆ ನಡೆತಂದು ॥ ತುಂಗಶರಣನ ಸತಿಯ ಕಂಡಾ । ಮಂಗಲೋದಯೆ ಮಾತೆ ನೀನೀ । ಕಂಗೊಳಿಪ ಪಣ್ಣಗಳನು ಕೊಳ್ಳೌ ಎಂದು ಪ್ರಾರ್ಥಿಸಲು ॥ ೨ ॥

ಶರಣರೂರೊಳು ಕಾಯಕಾರ್ಥಂ । ತೆರಳಿರುವರೈತಂದ ಬಳಿಕಂ । ನೆರೆ ಸಮರ್ಪಿಸಬಹುದೆಪಾ ನೀವವರಿಗೆಂದೆನುತ ॥ ಒರೆದಳಾ ಗುರುದೇವಿಯಾತಂ । ಶರಣರೈದುವದೇತಕೌ ನೀ । ವಿರುವಿರಲ್ಲವೆ ಸಂದೆಗಮದೇಂ ಕೊಳ್ಳಿರಿಂತೆಂದ ॥ ೩ ॥

ಅವರು ಪೇಳದಲಿವುಗಳಂ ಕೊ । ಳ್ಳುವದು ತಕ್ಕುದಿದಲ್ಲ ಕೊಳ್ಳುವ । ದಿವರ ಪದ್ಧತಿಯಿಲ್ಲ ಮಿಂತಪ್ಪಣೆಯುಮಿಲ್ಲವೆಪ । ಧವನ ಮನದಂತಾಚರಿಪುದೇ । ಯುವತಿಗತಿಶಯಧರ್ಮವಲ್ಲದೆ । ತವೆ ಸ್ವತಂತ್ರತೆಯಿಲ್ಲವೆಪ ಎಂದೊರೆದ ಳಿಂದುಮುಖಿ ॥ ೪ ॥

ಇನಿದಿರುವವೆಂದೊಪ್ಪಿ ತಂದಿರು । ವೆನು ಪರಿಗ್ರಹಿಸೌ ನೆರೆ ದಯಾ । ಘನಶರಣರಿಗೆ ಸಲಿಸಬೇಕೆಂಬೆನ್ನ ಬಯಕೆಯನು ॥ ಜನನಿ ನೀಂ ಬರಡಾಗಿಸು ವದಿದು । ಸನುಮತವೆ ನೀವಿಂತು ಕೈದಡೆ । ಜನರದೆಂತುದ್ಧಾರವಾಗುವರೆಂದ ವಂ ನುಡಿಯೆ ॥ ೫ ॥

ಧನದಸಖಶರಣರ್ಪದಾರ್ಥಗ । ಳಿನಿದಿಗೊಪ್ಪುವರಲ್ಲ ಮಿನಿಸುಂ । ಮನ ಮುಮುಖಿಲಾಕ್ಷಗಳು ಮುಟ್ಟದ ಮುನ್ನವೇ ಬಂದ ॥ ವಿನುತಚರಲಿಂಗಪ್ರಸಾ ಧದ । ಘನವೆನಿಪ ಸವಿಗೊಪ್ಪುವರ್ವಂ । ಚನೆಯೆನಿಪುದರಿದರಿದುವಿೂ ಮಾವ ಣ್ಗಳಂ ಕೊಳಲು ॥ ೬ ॥

ಪರಮಭಕ್ತರ ಭಕ್ತಿಯನು ಸ್ವೀ । ಕರಿಸಿ ಪದೆದುದ್ಧರಿಪ ಗುರುಚರ । ವರರಿರಲು ಬೇರೇಕೆ ಯೋಚನೆಯವರ್ಗೆ ಸಲ್ಲಿದೊಡೆ ॥ ಶರಣರಿಗೆ ಸಂತೋಷ ವೆಪ ನೀ । ವರಿಯದರೆ ಸುಮ್ಮನೆ ಮನಸಿನೊಳು । ಕೊರಗದಿರಿಯೆಪ ಎಂದು ಸೂಚಿಸಿ ಪೋದಳಂದೊಳಗೆ ॥ ೭ ॥

ಮುಂದೆ ಚೆಸಸುವದೇನು ಯತ್ನಂ । ನಿಂದುದಿಲ್ಲಿಗೆ ಶಿವಶಿವಾ ಪೂ । ರ್ಣೇಂದುಮುಖಿಯಿೂಕೆಯೆ ಜಗತ್ತ್ರಯದಲ್ಲಿ ಬಹುಧನ್ಯೆ ॥ ಬಂದ ಪಣ್ಗಳಿಗೆಳ ಸಲಿಲ್ಲಂ । ತಂದವಗನುತ್ಸಾಹವಾಗುವ । ದೆಂದಿನಿಸು ಬಗೆಗುಂದಲಿಲ್ಲೀಂ ದೃಢವಿಚಾರಿಣಿಯೋ ॥ ೮ ॥

ಶರಣೆಯಿನಿವಣ್ಣುಗಳನಂಗೀ । ಕರಿಸಲಿಲ್ಲೆಂಬೊಂದು ಕಳವಳ । ವರಿಯ ಲೆನ್ನೊಳು ಜನಿಸದೀ ಗುಣವತಿಯ ಪೊಸತಾದ ॥ ಚರಿತೆಯಂ ಮನಗಂಡುದ ಕ್ಕತಿ । ಹರುಷಮಂ ಪೊಂದಿಪೆನೆನುತ್ತಂ । ಮರುಳಿ ಪಣ್ಗಳನೊಯ್ದನಾತಂ ನಿಜ ಗೃಹಕೆ ಮತ್ತೆ ॥ ೯ ॥

ನೀತಿಯುಕ್ತೆ ಮಹಾಪತಿವ್ರತೆ । ಪಾತಕೋತ್ಕರಭೀತೆ ದೀನ । ವ್ರಾತ ನಿರುಪಮಕಲ್ಪಲತೆ ಶಿವಲಿಂಗಸಂಪ್ರೀತೆ ॥ ಖ್ಯಾತಕವಿಜನವಿನುತೆ ಸುಗುಣಪು । ನೀತೆ ಮಾನಿತಸಕಲಮಹಿಲಾ । ಜಾತೆ ಘನಸೌಭಾಗ್ಯಸಂಗತೆ ಸುಕುಲಸಂಭೂತೆ ॥ ೧೦ ॥

ಭಸಿತಶೋಭಿತಫಾಲೆ ಕೋಮಲೆ । ಪಶುಪಮಂತ್ರವಿಲೋಲೆ ನಿರ್ಮಲೆ । ಲಸಿತಶಿವಸೇವಾನುಕೂಲೆ ವಿಶಾಲದೃಗ್ಯುಗಲೆ ॥ ವಸುಧೆಯೊಳು ಬಸವಾಂಬೆ ಯೆಂಬೀ । ಪೆಸರಿನಿಂದಂ ರಾಜಿಸಿದಳಾ । ಮಿಸುಪ ವಾರದಮಲ್ಲಪಾಖ್ಯನ ರಾಣಿ ಮೃದುವಾಣಿ ॥ ೧೧ ॥

ಶ್ರೀಮತಿಯು ತಾನೆಂಬ ಬಿಂಕ । ಕ್ಕಾ ಮಹಾಸತಿಯಿಂಬುಗೊಡದತಿ । ಕೋಮಲತೆಯಂ ನಿಜಮನೋಮಂದಿರದೆ ನೆಲೆಗೊಳಿಸಿ ॥ ಪ್ರೇಮನಯ ದಾಕ್ಷಿಣ್ಯಕರುಣಾ । ಕ್ಷೇಮವಚನಗಳಂ ಶಿವಗಣ । ಸ್ತೋಮದೊಳು ಸ್ವಜನ ರೊಳು ಬಳಿಸುತ್ತಿರ್ದಳನುದಿನದೆ ॥ ೧೨ ॥

ತಮ್ಮ ಸಂಸ್ಕೃತಪಾಠಶಾಲೆಯೊ । ಳೊಮ್ಮನದಿನೋದುವ ಕುಮಾರರಿ । ಗಮ್ಮನಂತೆ ಫಲಾದ್ಯುಪಾಹಾರಂಗಳಂ ಕೊಟ್ಟು ॥ ಸಮ್ಮುದದೊಳುಪಚರಿಸಿ ಪೋಷಿಸು । ತಂ ಮನಂದಂದವರ ಸೌಖ್ಯವ । ನುಮ್ಮಳವನಡಿಗಡಿಗೆ ಕೇಳು ತ್ತಿರ್ದಳಾ ಸಾಧ್ವೀ ॥ ೧೩ ॥

ಉಡಲುಣಲ್ಕಿಲ್ಲದೆ ಬಳಲುತಿಹ । ಬಡವರಂ ಕಂಡೊಡಲೊಳಳಲಂ । ಪಡುತವರನುಪಚರಿಸುತಿರ್ದಳು ಕಡು ಕನಿಕರದೊಳು ॥ ಕೆಡಕುನುಡಿಗಳಿ ಗೊಂದಿನಿಸು ಕಿವಿ । ಗೊಡದೆ ಸಿಡಿಮಿಡಿಗೊಳ್ಳುತಿರ್ದಳು । ಮೃಡನ ಧರ್ಮವೆ ತನಗೆ ನೆಲೆಯೆಂದಿರ್ದಳಾ ಸುದತಿ ॥ ೧೪ ॥

ಇಂತೆಸೆವ ಬಸವಾಂಬೆಯುಂ ತ । ತ್ಕಾಂತನುಂ ಸದ್ಭಾವದಿಂದ ನಿ । ರಂತರಮುಮಿೂ ಶರಣದಂಪತಿಗಳೊಳು ನಂಬುಗೆಯ ॥ ಸಂತಸದೊಳಿಟ್ಟತಿ ವಿಧೇಯತೆ । ಯಂ ತಳೆದು ತಾಯ್ಮಕ್ಕಳಂದದೊ । ಳಂತರಿಸದುತ್ಸವಿಸುತಿರ್ದ ರ್ನೋಡಿ ನೆನೆದಾಡಿ ॥ ೧೫ ॥

ಶರಣಪುಂಗವಗಪ್ಪನೆಂದುಂ । ಶರಣಸತಿಗೊಲೆದವ್ವನೆಂದುಂ । ಕರೆವು ತಿರ್ದರ್ತನ್ಮಹಾಸತಿಪತಿಗಳಕ್ಕರದೆ ॥ ಶರಣನಂ ಶರಣೆಯನು ನಿಜಮಂ । ದಿರಕೆ ಬರಿಸಿಕೊಳುತ್ತಲಿರ್ದರು । ಬರುತಲಿರ್ದರು ಶರಣದರ್ಶನಕಾಗಿ ಯೊಮ್ಮೊಮ್ಮೆ ॥ ೧೬ ॥

ಮರವೆಯಿಂದೊಮ್ಮೊಮ್ಮೆ ತಮ್ಮೊಳು । ವಿರಸಮೊಗೆದೊಡೆ ಸತಿಪತಿಗಳೀ । ಶರಣನಂ ನೆರೆ ಬರಿಸಿಕೊಂಡೈ ನಿಮ್ಮಸೊಸೆಗಿಂದು ॥ ಒರೆಯಿರೊಳ್ಳುಣವೆಂದು ನಾಥನು । ಮರುಪಿರೊಳಿತಂ ತಂದೆ ನಿಮ್ಮಳಿ । ಯರಿಗೆನುತ್ತಾ ಪತ್ನಿಯುಂ ದೂರುವರು ಬಿಡದರರೆ ॥ ೧೭ ॥

ಸತಿಯ ಪಿತನಾಣ್ಮಂಗೆ ಮಾವಂ । ಪತಿಯ ಪಿತನಾ ಸತಿಗೆ ಮಾವಂ । ಕ್ಷಿತಿಯೊಳಪ್ಪುದು ಸಹಜಮಿರ್ದುಂ ಶರಣಪುಂಗವನು ॥ ಸತಿಪತಿಗಳೀರ್ವರಿಗೆ ಪ್ರೇಮದ । ಪಿತನೆನಿಸಿದಂ ಜನರ ವಾವೆಯು । ಗತಿ ಮಹಾಮಹಿಮರೊಳು ಸಂಘಟಿಸದು ವಿಚಾರಿಸಲು ॥ ೧೮ ॥

ಬೇರೆ ಬೇರವರೀರ್ವರಿಗೆ ಸುಖ । ಪೂರಿತೋಕ್ತಿಗಳಿಂ ರಹಸ್ಯದೆ । ಪಾರಮಾರ್ಥಿಕಲೌಕಿಕವಿಚಾರಗಳಿಗನುಸರಿಸಿ ॥ ಸಾರಬೋಧವನೆಸಗಿ ವೃತ್ತಿವಿ । ಕಾರಮಂ ಪರಿಹರಿಸಿ ಶಾಂತಿಯ । ಬೀರುತಿರ್ದಂ ಶರಣಪುಂಗವನಾಪ್ತ ಭಾವದೊಳು ॥ ೧೯ ॥

ಒಂದು ಸಮಯದೆವಾರದಪ್ಪನ । ಮುಂದಿರದ ಪೆಣ್ಮಕ್ಕಳೊಳಗೈ । ತಂದು ದತಿವೈಷಮ್ಯವದರಿಂ ತಮ್ಮ ತಮ್ಮೊಳಗೆ ॥ ಮಂದಮತಿಗಳ ತೆರದೆ ಸಿಡಿಮಿಡಿ । ಯಿಂದಿರುವದಂ ತಿಳಿದು ಕಿನಿಸಿಂ । ದಂದು ಬಸವಾಂಬೆಯನು ದೂಷಿಸಿದಂ ನಿಜೇಶ್ವರನು ॥ ೨೦ ॥

ಅದನು ಸಹಿಸದೆ ಬಸವಮಾಂಬೆಯು । ಕುದಿದು ಮಡಿವುದೆ ಲೇಸೆನುತ ಭಾ । ವದೆ ಬಗೆದು ಕೋಣೆಯೊಳು ಬಾಗಿಲುಮಂ ಬಲಿದುಕೊಂಡು ॥ ಬೆದರ ದುಂಡಳು ಬಿಸಮನದು ರ । ಕ್ತದೊಳು ಭೇದಿಸಿ ಪಲವು ಸಂಕಟ । ಮುದಿಸಿ ಬಲಮುಂ ಕುಂದಿ ಮುಚ್ಚೆ ಮುಸುಂಕುವನಿತರೊಳು ॥ ೨೧ ॥

ಶರಣಸತಿಗುರುದೇವಿ ಸಿದ್ಧೇ । ಶ್ವರನ ದರ್ಶನಕಾಗಿ ತನ್ನಯ । ತರುಳೆಯನೊಡಂಗೊಂಡು ತೆರಳ್ದು ನಿಜಾಶ್ರಮಕೆ ಮರುಳಿ ॥ ಬರುವ ಪಥದೊಳು ಬಸವಮಾಂಬೆಗೆ । ದರುಶನಂಗುಡಲೆಂದು ತನ್ಮಂ । ದಿರಕೆ ಬಂದಳು ನೆನೆದು ಸೈಪಿನ ಸುಗ್ಗಿಯಂದದೊಳು ॥ ೨೨ ॥

ಮನೆಯೊಳವಳಂ ಕಾಣದೆಲ್ಲಿಹ । ಳೆನುತ ಬೆಸಗೊಳಲೂಟವಿಲ್ಲದೆ । ಮನದ ದುಗುಡದಿನೊರಗಿರುವಳೀ ಕೋಣೆಯೊಳಗೆಂದು ॥ ವಿನಯದಿಂದಂ ದಾಸಿಯೋರ್ವಳು । ವಿನುತಗುರುದೇವಿಗೆ ಬೆದರ್ದು ಸೂ । ಚನೆಯನೆಸಗಿದ ಳೊಡನೆ ತಾಂ ಕೈಸನ್ನೆಯಿಂದದನು ॥ ೨೩ ॥

ತಿಳಿದು ಕೋಣೆಯ ಬಾಗಿಲಿಗೆ ನಿಂ । ದಲಸದಾ ಬಸವಾಂಬೆಯುರೆ ಬಾ । ಗಿಲನು ತೆರೆಯಿರೆನುತ್ತೆರಡುಬಾರೆನ್ನಲಾಕ್ಷಣವೆ ॥ ಪರಿಪರಿಯೊಳನ್ನೆವರಮಾ ಮಂ । ದಿರಜನರು ಕೂಗಿದಡುಮೇಳದ । ಕರಿಗಮನೆ ಬಸವಾಂಬೆ ತೆರೆದಳು ಬಾಗಿಲುಮನೇಳ್ದು ॥ ೨೪ ॥

ತೆರೆಯಲಸದಳಮಾಗಿ ಬಾತಿಹ । ಪಿರಿಯ ನಯುನಂಗಳನು ತನ್ನಯ । ಬೆರಳ್ಗಳಿಂ ತೆರೆದೆರಗಿದಾ ಬಸವಾಂಬೆಯುಂ ನೋಡಿ ॥ ಮರುಗಿ ಮಿನಿಸಿ ಶಿವಾರ್ಚ ನಾನಂ ; ತರದೊಳನ್ನಕ್ಷೀರಮಂ ನಿಜ । ಕರದಿನೀ ಗುರುದೇವಿಯೂಡೆ ವಿಷಂ ದೊಲಂಗಿದುದು ॥ ೨೫ ॥

ಬಳಿಕಲಾ ಶ್ರೀಮತಿಯೆದುರಿನೊಳು । ಕುಳಿತು ಶ್ರೀಗುರುದೇವಿಯೇಕೌ । ತಿಳಿದವರು ನೀವಿಂತು ಮಾಡಿದ ಕಾರಣಮದೇನು ॥ ತಿಳಿಸಿರುಳಿಯದೆನುತ್ತ ಬೆಸಗೊಳೆ । ನಿಲಯದೊಳಗೆಲ್ಲರ್ವಿರೋಧಿಪ । ರಳಿಯುಲೆಳಸಿದೆನೆಂದು ಕಂಬನಿ ದುಂಬಿ ಪೇಳಿದಳು ॥ ೨೬ ॥

ಏನಿದೆಂತಹ ಕೆಲಸಗೈದಿರಿ । ಮಾನವತಿಯರ ಗೌರವಕ್ಕತಿ । ಹಾನಿಯಲ್ಲವೆ ನಿಮ್ಮ ನೀತಿ ವಿಚಾರ ಶಾಂತಿಗಳು ॥ ಜ್ಞಾನಮೆಲ್ಲಿ ತೊಲಂಗಿದವು ಸುಮಿ । ಧಾನಮುಡಗಿ ನಿಷೇಧಮಾದಭಿ । ಮಾನವೆಂತುದಿಸಿದುದೊ. ನಿಮ್ಮೊಳ್ಪೊಸತಿದಾ ನೆನೆಯೆ ॥ ೨೭ ॥

ಮೃಡನೆ ಸೃಷ್ಟಿಸ್ಥಿತಿಲಯಂಗಳಿ । ಗೊಡೆಯನಿಹನವನಿಚ್ಛೆಯಿಂದಂ । ಬಿಡದೆ ತನ್ನೊಳು ಬೆರಸಿಕೊಂಬನು ನಡುವೆ ಬಲುಪಿಂದ ॥ ಮಡಿದೊಡಾತ್ಮ ದ್ರೋಹಮೆನಿಪುದು । ಕೆಡಿಸುವದು ತತ್ಪಾಪಮುಗ್ಗದ । ಸಡಗರವನೆಂಬೀ ವಿವೇಕವ ಮಾಣ್ದಿರೇಕವ್ವಾ ॥ ೨೮ ॥

ಲಿಂಗಲೋಪವ್ರತವಿಲೋಪದೊ । ಳಂಗಮಂ ಬಿಟ್ಟಮಲಸುಖಮಂ । ಪೊಂಗಿ ಪಡೆದವರುಂಟನೇಕರ್ಭಕ್ತಿಭಾವದೊಳು ॥ ಸಂಗಳಿಸಿದತಿಕಷ್ಟದೊಳು ಧವ । ಲಾಂಗನಂ ಮರೆಹೊಕ್ಕು ಜೀವಿಸ । ದಂಗಮಂ ಬಿಟ್ಟವರದಾರ್ಶಿವ ಭಕ್ತರೊಳು ಪಿಂದೆ ॥ ೨೯ ॥

ಭುವಿಯೊಳೈಹಿಕಸುಖದೊಳಗಜಾ । ಧವನ ಮರವಾಗುವದೆನುತ್ತಂ । ಸವೆಯದಿಹ ಕಷ್ಟವನು ಬೇಡಿದರರ್ಥಿಸದೆ ತಾನೆ ॥ ಕವಿದ ಕಷ್ಟಕೆ ಹಿಗ್ಗಿ ಧ್ಯಾನೋ । ತ್ಸವದೊಳಿರ್ದರ್ಪರಿಂದೆ ಭಕ್ತರು । ತವಕದಿಂದಳಿವನಿತು ನಿಮಗಾದ ಳಲದೆಂತಹದೌ ॥ ೩೦ ॥

ಒತ್ತರದೊಳಳಿದೆತ್ತ ಪೋಪಿರಿ । ಚಿತ್ತಜಾರಿಪ್ರಮಥಸೇವಾ । ವೃತ್ತಿ ಪರತರಮುಕ್ತಿಗಳು ನಿಮಗಲ್ಲಿ ದೊರೆದಪವೇ ॥ ಮತ್ತಮುದಿಸುವೊಡಿಂತಹ ಪೆಸ । ರ್ವೆತ್ತ ಕುಲಗುಣರೂಪಭಕ್ತಿಥ । ನೋತ್ತಮಾಚಾರಗಳೊದಗುವ ವೆನುತ್ತರಿದಿರೇನು? ॥ ೩೧ ॥

ವನಕೆವಿಹರಿಸಲೆಂದು ತೆರಳುವ । ಡಿನೆಯನಾಜ್ಞೆಯನಾಂಪ ನೀವೀ । ತನುವಿಯೋಗದೊಳಾತನಾಜ್ಞೆಯ ಪಡೆಯಲಿಲ್ಲೇಕೆ ॥ ನೆನೆಯೆ ಲಿಂಗಾರ್ಪಿತ ಮನವ ಕೆ । ಮ್ಮನೆ ಮುಗುಳ್ದುಕೊಂಡೀ ದುರಾಲೋ । ಚನೆಯ ನೆಸಗಿದಿರೇಕೆ ಪೊತ್ತಿರಿ ದೋಷಗಳನೆರಡು ॥ ೩೨ ॥

ಹಿಂದೆ ಮಾಡಿದ ಪುಣ್ಯದೊಬ್ಬುಳಿ । ಯಿಂದ ಶಿವಸೇವಾನಿಮಿತ್ತಂ । ಬಂದ ತನುವಂ ಕಷ್ಟವಾಯ್ತೆಂದಿಂದು ತ್ಯಜಿಸಿದೊಡೆ ॥ ಮುಂದೆ ಕಷ್ಟಗಳಿಲ್ಲ ದಂಗಮ । ದೆಂದು ನಿಮಗೊದಗುವದಳಲಿಗೆಡೆ । ಗುಂದದಮಲತೆವಡೆವುದೇ ಕರ್ತವ್ಯಮಂಗಿಗಳ ॥ ೩೩ ॥

ಘೋರತರಸಂಸಾರಪಾರಾ । ವಾರಮಂ ದಾಂಟಿಸಲು ದೊರೆದ ಶ । ರೀರ ನೌಕೆಯನೇರ್ದು ಬಲುಹಿಂ ನಡುವೆ ನೀವದನೆ ॥ ಸೈರಿಸದಲೊಡೆದಡೆ ಗಿರಿಶಪುರ । ತೀರವನು ಸಾರುವದದೆಂತೌ । ಕ್ರೂರಭವನಕ್ರಾಸ್ಯದೊಳು ಬೀಳದಲುಳಿವಿರೇನು? ॥ ೩೪ ॥

ತನುವೆ ಧರ್ಮಕ್ಕೆ ಸಾಧನಮೆನು । ತ್ತನುಭವಿಗಳುಲಿವಶ್ರುತಿಗಳನು । ದಿನದೆ "ಧರ್ಮಂಚರ" ಸು"ಧರ್ಮಾತ್ಸುಖವೆ"ನುತ್ತೊಲೆದು ॥ ಜನಕೆ ಬೋಧಿಸುತಿರುವವರಿಯದೆ। ಮುನಿದು ಬಲುಹಿಂ ತನುವನುಳಿದಡೆ। ವಿನುತಧರ್ಮೋನ್ನತಿಗೆ ಕಂಟಕರೆನಿಸುವಿರಿ ನೀವು ॥ ೩೫ ॥

ಪರರಿನಾತ್ಮೇಶ್ವರನ ಘನತೆಗೆ । ಕೊರತೆಯಾದೊಡೆ ಸೊರಗುವರ್ಬಿ । ತ್ತರದೆ ಪೆರ್ಚಿದಡುಬ್ಬುವರ್ಗಂಡನ ಜಸಕ್ಕಾಗಿ ॥ ಹರನ ಮರೆವುಗುವರ್ಸತಿಯರಿಂ । ತಿರೆ ವರನ ಚಿತ್ತೋತ್ಸವಂ ತಾಂ । ಸರಿವಕಾರ್ಯಂಗೈವುದಿದು ಸಲ್ವುದೆ ನಿಮಗೆ ತಾಯೆ ॥ ೩೬ ॥

ಅವನಿಯೊಳ್ಸತ್ಪುರುಷರು ಹೃದು । ತ್ಸವಸುಮಾನದ ಶಕ್ತಿಯಿಂ ಬಾ । ಳುವರು ಮಾನಂ ಪ್ರಾಣಮಲ್ಲದೆ ಭೂಧನಾದಿಗಳು ॥ ಅವರಿಗಲ್ಲಂ ನಿಮ್ಮ ಪತಿಮಾ । ನವರೊಳುಜ್ವಲಕೀರ್ತಿಯುತನನು । ಭವಿಯಿಹಂ ನಿಮ್ಮೊ ಕೃತಿಗೆ ತಲ್ಲಣಿಸದುಳಿದಪನೆ ॥ ೩೭ ॥

ಸತಿ ಗೃಹಿಣಿ ಸಹಧರ್ಮಿಣಿ ಧರ್ಮೋ । ಚಿತಹಿತಾತಿಥ್ಯಪ್ರಕಾರಿಣಿ । ಸತತವರದುಃಖಾರ್ಧಭಾಗಿನಿಯೆಂದು ಪೆಸರ್ವೆತ್ತ ॥ ನುತಮಹಿಳೆಯರ್ಬಿಸದಿನಳಿದೊಡೆ । ಪತಿಯ ಸಂಸೃತಿಸುಖಕೆ ಧರ್ಮೋ । ನ್ನತಿಗೆ ಕಂಟಕರಾದ ದೋಷಂ ಬಾರದೇನವರ್ಗೆ ॥ ೩೮ ॥

ನೂರುಕಷ್ಟಗಳಿರಲವುಗಳಂ । ತೋರದಾಣ್ಮಗೆ ಬೀರದಾಪ್ತರೊ । ಳಾರೊಳುಂ ಪತಿಗಳಲಡಸಿದೆಡೆಯಲ್ಲಿ ಧೈರ್ಯವನು ॥ ಭೂರಿ ಶಾಂತಿಯನೊರೆವುತದರನಿ । ವಾರಣೋಪಾಯವನು ಬಗೆವುತ । ನಾರತಂ ಸಂತುಷ್ಟಮುಖದಿಂದಿರುವವಳೆ ಸತಿಯು ॥ ೩೯ ॥

ಅಳಲಿಗಾರದಲಾತ್ಮಹತ್ಯ । ಕ್ಕೆಳಸುವವರಿತರರ ಮರಣದಿಂ । ದಳಲುಪೋಪಂತಿರ್ದಡವರಂ ಕೊಲ್ವ ಯತ್ನಕ್ಕೆ ॥ ಪೆಳರರೆಂದಾಡುವ ಜನರ ನುಡಿ । ಗಳುಕಿ ನಿಜಕಷ್ಟವನು ಸಹಿಪರು । ಕೆಲಬರಬಲೆಯರಿದನು ಪಿಂದಾಲಿಸದವರೆ ನೀವು ॥ ೪೦ ॥

ಲವಣಮಿಲ್ಲಂ ತೈಲಮಿಲ್ಲಂ । ವಿವಿಧಕನಕಾಭರಣಮಿಲ್ಲಂ । ಭವನ ದೊಳು ವಿಶ್ರಾಂತಿಯಿಲ್ಲಂ ಪೇಳ್ದ ನುಡಿಗಳನು ॥ ತವೆ ನಡಿಸುವವರಿಲ್ಲ ಮನ್ನಣೆ । ಕುವರರಿಲ್ಲಿಂತೆಂದು ಡಾವರಿ । ಸುವ ವನಿತೆಯಿಂದಾಗದೀ ಸಂಸಾರ ದೊಳು ಸುಖವು ॥ ೪೧ ॥

ಕ್ರೂರಭಾಷಿಣಿ ವಕ್ರನೇತ್ರೆ ವಿ । ಚಾರವಿರಹಿತೆ ಧೂರ್ತೆ ಧರ್ಮವಿ । ದೂರೆ ಕಶ್ಮಲೆಯುತ್ತರೋತ್ತರವಾದಿನಿ ಕುವೃತ್ತೆ ॥ ಘೋರಕಲಹಪ್ರೀತೆ ಪತಿ ಧನ । ಚೋರಕಾರ್ಯಧುರೀಣೆಯೆನಿಸಿದ । ನಾರಿ ಸತಿಯಾಗಿರ್ದಡೋಪಗೆ ಬೇರೆ ಮುಪ್ಪೇಕೆ? ॥ ೪೦ ॥

ನರಕವಾಸಂ ದುರಿತಕೋಟಿಯ । ನಿರೆಯಿರುತೆ ಕ್ಷೀಣಮೆನೆ ಮಾಳ್ಪ ದು । ಧರಣಿಯೊಳು ದುಷ್ಪತ್ನಿಯೆಂಬೀ ನರಕವಾಸಮದು ॥ ದುರಿತನಿಧಿಯಂ ಪಲವುಬಗೆಯಿಂ । ಭರದೆ ಬೆಳಿಸುತ್ತಿರ್ಪುದದರಿಂ । ದುರುಳಮಡದಿಯ ಸಂಗ ಕಿಂದಾ ನರಕವೇಲೇಸು ॥ ೪೩ ॥

ತೊಳೆದು ವಸನದೊಳುಳ್ಳ ಹೊಲಸಂ । ಕಳೆವವೊಲ್ಪತಿಬೈದು ಬಡಿದೆ । ನ್ನೊಳಗಣಜ್ಞಾನವನು ತೊಲಗಿಸಿ ತಿದ್ದಿದಪನೆಂದು ॥ ತಿಳಿದು ಸೇವಿಸಿ ತತ್ಕ ರುಣಮಂ । ಗಳಿಪುದಕೆ ಬದಲಾಗಿ ಪೊಣರ್ವು । ವ್ಮಳಿಸುವಂಗನೆ ಪತಿಗೆ ನಿಷ್ಕೃತಿಗೊಡುವ ಸಾಹಸಿಯು ॥ ೪೪ ॥

ಪತಿಯೆ ಸರ್ವಶ್ರೇಷ್ಠನೆಂದುಂ । ಪತಿಯೆ ಸದ್ಗುರುನಾಥನೆಂದುಂ । ಪತಿ ಯ ಸುಖದುಃಖಗಳು ನಿತ್ಯಂ ತನ್ನವಿಂತೆಂದು ॥ ಪತಿಯೆ ಪಂಚಪ್ರಾಣಮೆಂದುಂ । ಮತಿಯೊಳರಿದೊಡಬಟ್ಟೆ ಬಾಳುವ । ಸತಿಯರಿಂದುದ್ಧಾರವಾಗುವದನ್ವಯ ದ್ವಯವು ॥ ೪೫ ॥

ಮೂರು ಜಗದೊಳು ವಿಷಮುವೀ ಸಂ । ಸಾರಮಿದರೊಳು ವಿಷಯ ಪೂರ್ಣತೆ । ಯಾರಿಗಿಹುದೌ ಶಿವನಿರಿಸಿದಂದದೊಳು ಮನಮೊಪ್ಪಿ ॥ ಸ್ವೈರಣೆ ಯೊಳಿರದೊಡೆ ಸುಖಂ ಕೈ । ಸಾರುವದದೆಂತೀ ಸುಖಂ ಸುವಿ । ಚಾರದಿಂದಂ ಜನಿಪುದಲ್ಲದೆ ವಿಷಯದಿಂದಲ್ಲ ॥ ೪೬ ॥

ಮನದ ನಿರ್ಮಲತೆಯೆ ಸುಖಂ ಮೇ । ಣ್ಮನದ ಮಲಿನತೆ ದುಃಖಮೆನಿಪುದು । ಮನವೆ ಸುಖದುಃಖಗಳಿಗಾಶ್ರಯಮಾಗಿಹುದರಿಂದ ॥ ಮನಕೆ ಸದ್ಬೋಧವನು ಮಾಡು । ತ್ತನುವಿನಿಂ ಚಂಚಲತೆಯಂ ಕಳೆ । ದಿನಿಯನನುಮತಿವಿಡಿದು ಬಾಳ್ವುದೆ ತಕ್ಕುದಿನಿಯಳಿಗೆ ॥ ೪೭ ॥

ಬಳಗದ ಜನರ್ದ್ವೇಷಿಸರು ನಿ । ಮ್ಮೊಳಗಿರುವ ಕಾಮಾದಿರಿಪುಗಳು । ಬಲುಹಿನಿಂ ದ್ವೇಷಿಪರು ತದ್ದ್ವೇಷಿಗಳನಿಕ್ಕದಲೆ ॥ ಬಳಗದವರಿಗೆ ದೋಷಮಂ ಕೊ । ಟ್ಟಲಸದವರೊಡನುರ್ಕಿನಿಂದಂ । ಕಲಹವಂ ಬೆಳಿಸುವದು ಯೋಗ್ಯವೆ ಬುದ್ಧಿವಂತರಿಗೆ ॥ ೪೮ ॥

ಹಸರುಹರಳಿನುಪಾಧಿಯಿಂ ಕಡು । ಬಿಸಿಲು ಹಸುರೆನೆ ತೋರುವಂದದೆ । ಮುಸುಕಿದಾ ಗುಣದೋಷದಿಂ ತಮ್ಮವರರಿಗಳಾಗಿ ॥ ಮುಸಕಮುಂಮಿಗೆ ಕಾಣ್ಬರದರಿಂ । ಗಸಣೆಗೊಳಿಪಾ ದೋಷಮಂ ಖಂ । ಡಿಸಿ ನಿಖಿಲರೊಳು ವೈರವಿಲ್ಲದೆ ಕೂರ್ಪುದೇ ಚಾಣ್ಕೆ ॥ ೪೯ ॥

ಗುಣವೆ ಕೀರ್ತಿಸುಖಂಗಳಿಗೆ ಕಾ । ರಣಮದೀ ತನುವಲ್ಲ ಜಗದೊಳು । ಗುಣಮದಿಲ್ಲದೊಡಿದು ಹೆಣಂ ಕಾಮಾದಿದುರ್ಗುಣವ ॥ ಕೆಣಕಿ ಕಲಿತನದಿಂದ ಕೊಲದೀ । ಹೆಣವ ಕೊಂದೊಡೆ ಹೇಡಿಗಳೊಳಿಂ । ದೆಣಿಸರೇ ಬಲ್ಲವರು ನಿಮ್ಮಂ ಪೇಳಿರಾ ಮಾತೆ ॥ ೫೦ ॥

ಮುನಿದ ಜವನಂ ಗೆಲ್ದನಾ ಮುನಿ । ತನಯನೀಶ್ವರಪೂಜೆಯಿಂ ವಿಧಿ । ಯನು ಹರಿಶ್ಚಂದ್ರಂ ಜಯಿಸಿದನು ಸತ್ಯದಿಂ ಭೃಂಗಿ ॥ ವಿನುತನಿಷ್ಠಾಭಕ್ತಿಯಿಂಗೆಲಿ । ದನು ಮಹಾಮಾಯೆಯನು ಮಡಿಯದೆ । ಮನೆಯ ಜನರಂ ಗೆಲಿಯಲಿಲ್ಲಾ ನೀವು ಕ್ಷಮೆಯಿಂದ ॥ ೫೧ ॥

ಸತಿಪತಿಗಳೊಡಹುಟ್ಟಿದವರುಂ । ಸುತಪಿತರು ಜಾಮಾತೃಶ್ವಶುರರು । ಸತತಮತಿಹಿತಮಂ ಪರಸ್ಪರರೆಸಗುತಿರಲದುವೆ ॥ ನುತಕುಟುಂಬವೆನಿಪ್ಪುದವರೊಳು । ಮತವಿಭೇದಂ ಪುಟ್ಟಿದೊಡೆ ಭಾ । ವಿಸೆ ಕುಟುಂಬವದೆನ್ನಿಸದು ಮೇಣ್ಕೆಡುಗುಮವರೇಳ್ಗೆ ॥ ೫೨ ॥

ತನುವಿನೊಳು ಪುಟ್ಟಿರ್ದಡುಂ ರುಜೆ । ತನಗಳಲುಗುಡುವಂತೆ ಸ್ವಕು ಲದೆ । ಜನಿಯಿಸಿರ್ದಡುಮಾತ್ಮಜಾದಿಗಳಹಿತವೆಸಗಿದೊಡೆ ॥ ಘನರಿಪುಗಳವಕಿ ನಿಸುವರು ಗಿರಿ । ವನದೊಳಿರ್ಪೌಷಧಿಗಳಾ ರುಜೆ । ಯನು ಕಳೆವವೊಲು ಹಿತ ವನೆಸಗುವ ಪರರೆ ಬಂಧುಗಳು ॥ ೫೩ ॥

ಸರಳಮನಸಿನ ಸವತಿ ಮಂಗಲ । ಕರಸುಮತಿಗಳು ನೀವು ನಿಮ್ಮೊ । ರ್ವರಿಗೆ ಮಲಮಗಳೋರ್ವಳಿಹಳವಳೊಳ್ಳೆಗುಣವತಿಯು ॥ ಪೆರರಿರುವರಾ ರ್ಮನೆಯೊಳು ಪರ । ಸ್ಪರರು ನೀವವಿಚಾರದಿಂ ಬೆಳ । ಸಿರುವಿರೌ ವೈಷಮ್ಯ ಮಂ ತಪ್ಪಾರೊಳೇನಿಹುದು ॥ ೫೪ ॥

ನಿರುತಮನ್ಯೋನ್ಯಾನುರಾಗದಿ । ನಿರುವ ನಿಮ್ಮೊಳು ದ್ವೇಷಭಾವಾಂ । ಕುರವೊಗೆದುದವಿಚಾರಕಲ್ಪನೆಯಲ್ಲದಿನ್ನುಂಟೆ ॥ ಪರಿಕಿಸದೆ ನೀವಿಂತು ಸೆಣ ಸಲು । ಪಿರಿದು ಪಶ್ಚಾತ್ತಾಪವಾಗುವ । ದರಿಯಲೊಂದಿತಿಹಾಸಮುಂಟದಕಾಲಿ ಸಿರಿ ಪದೆದು ॥ ೫೫ ॥

ಒಂದು ನಗರದೊಳೋರ್ವ ಪರಮಾ । ನಂದನೆಂಬುತ್ತಮತಪೋಧನ । ನಂದಮೆನೆ ಸಾಕಿರ್ದನೊಂದರಗಿಳಿಯನೊಲ್ಪಿಂದ ॥ ಕುಂದದದು ನಂದನವನ ದೊಳಿ । ರ್ಪೊಂದು ಪಂಡಿತವಕ್ಕಿಯೊಡನೊಲ । ವಿಂದ ಬೆಳಸಿರ್ದತ್ತು ನಿರ್ವಂ ಚನೆಯ ಗೆಳೆತನವ ॥ ೫೬ ॥

ಗೆಳೆತನದ ಮರುಕದೊಳು ಸಗ್ಗದ । ಗಿಳಿ ತಪೋಧನನರಗಿಳಿಗೆ ತಂ । ದೆಳಸಿ ಸವಿಯುಳ್ಳೊಂದು ಪಣ್ಣಂ ಕೊಟ್ಟು ಕೇಳ್ಸಖನೇ ॥ ಫಲವಿದಂ ತಿಂದವರ ಮರರಹ । ರೊಲೆದು ಮೆಲೆಯಮರತ್ವಮಂ ನೀಂ । ತಳೆವೆಯೆಂದೊರೆದೊಯ್ಯ ನೇ ತೆರಳಿದುದು ನಾಕಕ್ಕೆ ॥ ೫೭ ॥

ನಾನಿದಂ ತಿನ್ನುವದರಿಂದನಿ । ತೇನು ಲಾಭಮಿದೆನ್ನನೋವಿದ । ಮೌನಿ ಗೀವುದೆ ವಿಹಿತಮೆಂದದನವನಿಗರಗಿಳಿಯು ॥ ಸಾನುರಾಗದೊಳೀಯಲಾತಂ । ತಾನು ಮೆಲೆಯದೆ ಭೂಪತಿಗೆ ಕೊ । ಟ್ಟು ನವೀನಫಲಸ್ವಭಾವವನರುಹಿದಂ ಮುದದೆ ॥ ೫೮ ॥

ಇದನು ಸವಿದಾನೋರ್ವನಮರ । ತ್ವದ ಸಿರಿಯೊಳುಪಜೀವಿಪುದಕಿಂ । ದಿದರ ಮರವನೆ ಬೆಳಸಿ ತತ್ಫಲಗಳನು ಪ್ರಜೆಗಳಿಗೆ ॥ ಪದುಳದಿಂದುಣಿಸಿದೊಡ ವಂದಿ । ರ್ಮುದುಕರಾಗದೆ ರೋಗವಿಲ್ಲದೆ । ಬದುಕುತಿಹರಮರತ್ವಮಂ ಪಡೆ ದೆಂದು ನಿಶ್ಚಯಿಸಿ ॥ ೫೯ ॥

ನಾಟಿಸಿದನಾ ಬೀಜಮಂ ಪೂ । ದೋಟದೊಳು ಸಂಪ್ರೀತಿಯಿಂದದು । ಕಾಟವಿಲ್ಲದೆ ಬೆಳೆದು ತತ್ತರು ಬಹುಫಲಂದಳೆಯೆ ॥ ನೋಟಕಿಂಪೆನೆ ನೋಡಿ ಬಲುಕೊರ । ದಾಟದೊಳು ಸಮನಿಸುವ ಮೃತಿಯಂ । ದಾಟದೆವು ನಾವೆಂದು ನಲಿದನು ಹಿಗ್ಗಿ ಭೂವರನು ॥ ೬೦ ॥

ಒಂದು ಪನ್ನಗವಾ ಮರವನೇ । ರ್ದೊಂದು ಪಣ್ಣಂ ಕಚ್ಚಿ ಕೆಡಹಿದು । ದಂದದನು ವನಪಾಲಕರ್ತಿಳಿಯದೆ ಮಹೀಶಂಗೆ ॥ ತಂದುಕೊಡಲಿದು ಮೊ ದಲ ಫಲವಿಂ । ತೆಂದು ವಿಪ್ರನಿಗೋರ್ವಗರ್ಪಿಸಿ । ವಂದಿಸಿದನವನಳ್ಕರಿಂದಂ ಪೂಜ್ಯಭಾವದೊಳು ॥ ೬೧ ॥

ಮನೆಗೆ ಕೊಂಡೊಯ್ದಂದು ತತ್ಫಲ । ವನು ಸವಿಯೆ ಫಣಿಗರಳವೇ ರ್ದಳಿ । ದನು ಮಹೀಸುರನಾಕ್ಷಣದೊಳದನರಿದು ತತ್ಸತಿಯು ॥ ಜನಪನೆಡೆಗೈ ತಂದು ನೀನೆ । ನ್ನಿನಿಯನಂ ಪಣ್ದಿನಿಸಿ ಕೊಂದೈ । ಯೆನುತ ಶೋಕಿಸಿ ಪೋಗಿ ಸಹಗಮನವನು ಮಾಡಿದಳು ॥ ೬೨ ॥

ಆ ದಿವಿಜದಂಪತಿಗಳಳಿದುದ । ನಾ ದಯಾಳು ಮಹೀಶನೀಕ್ಷಿಸಿ । ಖೇದಮಾನಸನಾಗಿ ಯೋಚಿಸಿ ಕೋಪದುಬ್ಬೆಗದೆ ॥ ಆ ದುರಾತ್ಮಂ ಕಪಟ ತಾಪಸ । ನಾದರಂದೋರ್ದನಗೆ ಕ । ಣ್ಗಿಂಬಾದ ವಿಷಫಲವಿತ್ತನೆನ್ನಂ ಕೊಲ್ಲ ಲೆಂದೆಳಸಿ ॥ ೬೩ ॥

ಅವನು ಮದ್ರಾಜ್ಯದೊಳಿರಲ್ತ । ಕ್ಕವನೆನಿಸನೆಂದಾ ತಪೋನಿಧಿ । ಗವ ಗಡಿಸಿ ಗಡಿಪಾರಶಿಕ್ಷೆಯನಿತ್ತನರಿಯದಲೆ ॥ ತವೆ ಸಲಹಿದೆನಗೀ ಶುಕಂ ಕೊ । ಲ್ಲುವ ಫಲವನರಿದಿತ್ತುದಿದರಾ । ಸ್ಯವನು ನೋಡಲುಬಾರದೆಂದಾ ಮುನಿಯದಂ ಪೊಯ್ದು ॥ ೬೪ ॥

ಬಿಡಲುದಯ್ಯೋ ನಂಬಿದೆನ್ನಂ । ಕೆಡಿಸಲಿಚ್ಛಿಸಿ ನಾಕಕೀರಂ । ಕಡು ವಿಷದ ಪಣ್ಣಿತ್ತುದಾ ವಿಶ್ವಾಸಘಾತಕಿಯ ॥ ಗೊಡವೆ ಬೇಡವೆನುತ್ತಲರಗಿಳಿ । ಸಿಡಿಮಿಡಿಯನಾಂತುದು ವಿವೇಕಂ । ಗೆಡಲು ಘಟಸುವದಿಂತನರ್ಥಮುದಂತಿರಲಿ ಮುಂದೆ ॥ ೬೫ ॥

ಮರಣಫಲಮಂ ಕೊಡುವ ಮರವೆಂ । ದರಿದದರ ಹತ್ತರಕೆ ಪೋಗದೆ । ಚರಿಸುತಿರ್ದರು ದೂರದೊಳು ನರರೆಲ್ಲರಾ ಪುರದ ॥ ಜರಠನೋರ್ವಂ ಜರೆಯ ದುಃಖದೆ । ಕೊರಗಲಾರದೆ ಸಾಯಲೆಂದಾ । ತುರಿಸಿ ಬಂದದರೊಂದು ಪಣ್ಣಂ ತಿಂದನಾಕ್ಷಣಕೆ ॥ ೬೬ ॥

ಜರೆಯುಡಗಿ ಬಿರುಜವ್ವನಂ ಸುಂ । ದರತೆ ಬಲಮಾರೋಗ್ಯಮುವಗೈ । ತರಲದಂ ನೆರೆ ನೋಡಿ ಹರ್ಷಾಶ್ಚರ್ಯಗಳನಾಂತು ॥ ನರವರಂ ಮತ್ತಂ ಪರೀ ಕ್ಷಿಸಿ । ಕರೆಕರೆದು ತತ್ಫಲಗಳಂ ನಿಜ । ಪುರದ ಜನರಿಗೆ ಮೆಲಿಸಲಮರತ್ವಂ ದಳೆದರವರು ॥ ೬೭ ॥

ಎನಗಮರತೆಯುದಾಗಲೆಸಗಿದ । ಮುನಿಪನಂ ಕಳಕೊಂಡೆನೀ ಮೇ । ದಿನಿಯೊಳೆನ್ನಂತಹ ಕೃತಘ್ನಮೂರ್ಖರಿನ್ನುಂಟೆ ॥ ಜನತೆಗೊಳಿತಂ ಮಾಡುವ ತಪೋ । ಧನರು ವಿಷಮಂ ಕುಡುವರಲ್ಲೆಂ । ಬನುಭವಕ್ಕೆಡೆಯಾಗದತಿಮತಿ ಹೀನನಾನಲ್ತೆ ॥ ೬೮ ॥

ಕರಮುಹಿಂಸಾಧರ್ಮಮಂ ಬಿ । ತ್ತರಿಪ ಜಗದುದ್ಧಾರಕರಮುನಿ । ವರಗೆ ಹಿಂಸಾದೋಷಭಾರವ ಪೊರಿಸಿದಘವೆನ್ನ ॥ ನರಪತಿತ್ವಕೆ ಕೊರತೆಯಂ ಕೊಡ । ದಿರದವಂಗೆಸಗಿರ್ದ ಶಿಕ್ಷಾ । ದುರಿತವೆನ್ನಂ ನಿರಯುವಾಸದೊಳಿರಿಸದಿರದಕಟಾ ॥ ೬೯ ॥

ಹಿಂದೆ ಮುಂದೆ ವಿಚಾರಿಸದೆ ಛಲ । ದಿಂದ ಪ್ರತ್ಯಕ್ಷಪ್ರಮಾಣವ । ನೊಂದನೇ ಬಲವಿಡಿದು ರಾಜ್ಯಂಗೈವ ನರಪತಿಯು ॥ ನಿಂದೆಗೀಡಾಗುವನು ಕೇಡಂ । ಪೊಂದುವಂ ಪೊರತಪ್ಪನವೃತ । ಕ್ಕೆಂದು ಬೋಧಿಪ ನೀತಿವಚನಂ ಮನವರಿಕೆಯಾಯ್ತು ॥ ೭೦ ॥

ಆವ ಕಾರಣದಿಂದ ವಿಪ್ರಗೆ । ಸಾವು ಬಂದುದೊ ಶೀಘ್ರದೊಳಿದಂ । ದೇವರೇ ಬಲ್ಲನು ವಿಚಾರಿಸೆ ಪಣ್ಣಿನಿಂದಲ್ಲ ॥ ಜೀವರೊಳು ಕರ್ಮವನು ಮೀರುವ । ನಾವನೆನಗಿದು ಮೋಸವಾಯ್ತೆಂ । ದಾ ವಸುಮತೀಶಂ ಬಗೆಬಗೆಯೊಳಳಲುತ್ತ ಬಳಲುತ್ತ ॥ ೭೧ ॥

ಪುಡುಕಿ ತನ್ಮುನಿವರರ ಕ್ಷಮೆಯಂ । ಪಡೆದನಾ ಮುನಿ ತನ್ನಗಿಳಿಯಂ । ಬಿಡದರಸಿ ಸಂತೈಸಿದಂ ತಚ್ಛುಕಮುಮರಶುಕಗೆ ॥ ಕಡು ಕೃತಜ್ಞತೆಯಿಂದ ಮಣಿದುದು । ಕಡೆಗೆ ಪ್ರಾಯಶ್ಚಿತ್ತವೀ ತೆರ । ಮುಡಸುವದು ಸ್ವಜನರೊಳು ವೈರವ ಕಲ್ಪಿಪಜ್ಞರಿಗೆ ॥ ೭೦ ॥

ಆದರಿನೀ ಕಲ್ಪನೆಯ ವೈರವ । ನೆದೆಗುದಿಯನುಳಿದೆಲ್ಲರೊಳು ಮುದ । ಮುದಿಪನನ್ಯವಿಚಾರಭಾವಂದಳೆದು ಮನೆಯಲ್ಲಿ ॥ ಪದುಳಮಿರಿಯಿಂತೆಂದು ಪೇಳಿದ । ಸದುಪದೇಶಂಗೇಳ್ದು ಮನದೊಳು । ಬೆದರಿ ನಾಣ್ಚಿ ಕೃತಾಪರಾಧಕೆ ಹೇಸಿ ತಲೆವಾಗಿ ॥ ೭೩ ॥

ಕ್ಷಮಿಸಿರೌ ತಪ್ಪಾಯ್ತೆನುತ್ತಾ । ಪ್ರಮುದೆ ಗುರುದೇವಿಯ ಪದಾಬ್ಜಕೆ । ನಮಿಸಲನಿತರೊಳೀ ಹಿತೋಕ್ತಿಗಳೆಮ್ಮ ಮಾನಸದ ॥ ತಮವನಳಿಸಿದವೆಂದು ಳಿದ ತ । ತ್ಕಮುಲಮುಖಿಯರು ಬಂದೆರಗಿದರು । ವಿಮಲಗುಣಿಮಲ್ಲಪ್ಪನಿದನೆಲ್ಲವನು ಮರೆಯಲ್ಲಿ ॥ ೭೪ ॥

ನಿಂದು ಕೇಳ್ದರಿದವರೆಡೆಗೆ ಪರಿ । ತಂದು ಮಾತೆ ಪುನೀತೆ ನಿಮಗಾ । ನಿಂದು ಋಣಿಯಾದೆನು ಗೃಹಛಿದ್ರವನು ನೂಂಕಿದಿರಿ ॥ ಎಂದೆರಗಲ್ವೈ ಸ್ವಜನಕೊಳಿತಂ । ಕುಂದದೆಸಗುವದುಪಕೃತಿಯದ । ಲ್ಲೆಂದೊರೆದು ಬೀಳ್ಕೊಂಡು ನಡೆದಳು ಶರಣೆ ನಿಜಗೃಹಕೆ ॥ ೭೫ ॥

ಪರಶಿವಂ ಗುರುವಾಗಿ ತಿಳುಪುತೆ । ಪರಮಲಿಂಗಮುದಾಗಿಯಂಗನ । ಕರಣವೊಳು ವ್ಯಾಪಿಸುತೆ ಜಂಗಮುವಾಗಿ ಹಮ್ಮುವನು ॥ ತರಿವುತಂ ಮನುವಾಗಿ ವಾಕ್ಕಂ । ಪಿರಿದು ಶುದ್ಧೀಕರಿಸಿ ಮುಕ್ತಿಯು । ಕರುಣಿಸುವನೆಂದೊರೆದ ವೀರೇಶ್ವರಗೆ ಶರಣಾರ್ಥಿ ॥ ೭೬ ॥

ಅಂತು ಸಂಧಿ ೧೭ಕ್ಕೆ ಪದಗಳು ೧೦೬೮.

ಶಿವಂ.



ಶ್ರೀ ಮಜ್ಜಗದ್ಗುರು ರೇಣುಕಾಚಾರ್ಯಾಯ ನಮಃ



## ಹದಿನೆಂಟನೆಯ ಸಂಧಿ ಪ್ರಾರಂಭ.

ಸೂಚನೆ ॥ ಪೇಳುವೆನು ವೀರೇಶ್ವರನ ಸುವಿ । ಶಾಲಲೀಲಾ ಮಾಲೆಯುನಿದಂ । ಕೇಳುವರಿಗಾನಂದಮಾಗುವ ತೆರದೊಳಾನಿಲ್ಲಿ ॥ ಪಲ್ಲ ॥

ಪದ ॥ ನಿರುತಮುಂ ತನ್ನೊಳಗಿಹುದನಿನಿ । ಸರಿಯುದಲೆ ಗಂಧಾಶೆಯಿಂದಂ । ಪೊರಗೆ ಪುಡುಕುತ ತಿರುಗುತಿಹ ಕತ್ತುರಿಯ ಮಿಗದಂತೆ ॥ ಪರಮ ನೀನೆನ್ನೊಳಗಿಹುದನಾ । ನರಿಯದಲೆ ಬರಿಕರ್ಮಗಳನಾ । ಚರಿಸಿ ನಿನ್ನಂ ಪೊರಗೆ ಪುಡುಕಿದೆನಿನ್ನು ಕೃಪೆಮಾಡು ॥ ೧ ॥

ಧರಣಿಯೊಳು ರಂಜಿಸುವ ಸಂಕೇ । ಶ್ವರವೆನಿಪ ಗ್ರಾಮದೊಳಗಿರ್ದಂ । ವರಮಹಾಳಂಕದ ಶಿವಪ್ಪನೆನಿಪ್ಪ ವ್ಯಾಪಾರಿ ॥ ಪಿರಿಯ ವ್ಯವಹಾರವನು ಮುಂಬಾ । ಪುರದೆ ವಾರದ ಮಲ್ಲಪಾಖ್ಯನ । ಸರಕಿನಂಗಡಿಯಲ್ಲಿ ಮಾಡಿದನವನು ಪದೆದೊಮ್ಮೆ ॥ ೨ ॥

ಆದರೊಳವಗತಿಹಾನಿಸಂಜನಿ । ಸಿದುದರಿಂದಾ ಹಣವ ಕೊಡದಿ । ರ್ದುದಕೆ ನ್ಯಾಯಾಸನದೊಳಾ ಶ್ರೀಯುತನು ಕೋರಿದನು ॥ ಇದನರಿದು ಸೊನ್ನಲಪುರಿಗವಂ । ಬೆದರಿ ಬಂದು ಕಿರೀಟಮಠದ । ಗ್ಗದ ನಿಜಗುಣಾಹ್ವಯ ಮಹಾಸ್ವಾಮಿಯನು ತಾಂ ಕಂಡು ॥ ೩ ॥

ವಾರದಪ್ಪನೊಳುಳ್ಳ ಋಣಮಂ । ತೀರಿಸಲುಬಂದಿಹೆನು ಕರುಣಾ । ವಾರಿಧಿಯೆ ಲೆಕ್ಕವನು ಮಾಡಿಸಿ ಸುಲಭಮೆನೆ ನೀನು ॥ ಭೂರಿಯತ್ನದಿನೊರೆದಡರ ಪರಿ । ಹಾರಮಂ ಮಾಡಿಸೆನುತಂ ಪದ । ವಾರಿಜವನಾಶ್ರಯಿಸಿದಂ ಬಳಿಕೊಂದು ದಿನವಲ್ಲಿ ॥ ೪ ॥

ವೀರಶರಣವರೇಣ್ಯನಂಘ್ರಿಪ । ಯೋರುಹಗಳಂ ಕಾಣಲೆನುತಂ । ಹಾರಯಿಸಿ ಶಾಂತಾಶ್ರಮಕ್ಕೆ ಶಿವಪ್ಪನೈತಂದು ॥ ಚಾರುಭಕ್ತಪ್ರಮಥರೊಡನಾ । ಚಾರಪರಗೋಷ್ಠಿಯೊಳು ಸುಖಿಸೀ । ಸಾರಮಹಿಮನ ಕಂಡು ವಂದಿಸಿ ಮುಂಡಿಸಿದನಲ್ಲಿ ॥ ೫ ॥

ಕೆಲವು ಪೊತ್ತಿನಮೇಲೆ ಶರಣಂ । ಬಳಿಯೊಳುಳ್ಳಶಿವಪ್ಪನಂ ಬಿ । ಟ್ಟುಳಿದ ಭಕ್ತಪ್ರಮಥರಿಗೆ ಲಿಂಗಾರ್ಪಿತಕ್ಕಾಗಿ ॥ ಒಲೆದು ಬಿನ್ನಪವೆಸಗಲಾತಂ । ತಿಳಿದು ಮಹಿಮನೆ ತ್ವತ್ಪ್ರಸಾದ । ಕ್ಕೆಳಸಿ ನಾನುಂ ಬರವೆನಪ್ಪಣೆಯಾಗಬೇಕೆನಲು ॥ ೬ ॥

ನಿನ್ನಪೇಕ್ಷೆಯೊ ತತ್ಪ್ರಸಾದದ । ಸನ್ನುತಾಪೇಕ್ಷೆಯೊ ಎನಲವಂ । ತನ್ನ ಮನದೊಳು ಮರುಗಿ ಮೇಣ್ಮರುದಿವಸವೈತಂದು ॥ ಸನ್ನಿಯರಿಯವೆ ಮಗುಳ್ದು ಕೇಳ್ದಂ । ಸನ್ನುತನದಕೊಪ್ಪಲಿಲ್ಲಂ । ಖಿನ್ನಮಾನಸನಾಗಿ ಮರುಳ್ದಂ ಕಳವಳಿಸುತವನು ॥ ೭ ॥

ಎರಡುದಿನಮಾನರ್ಥಿಸಿದಡಂ । ಶರಣನ ಮಹಾಸುಪ್ರಸಾದಂ । ದೊರೆಯಲಿಲ್ಲೆನಗದರಿನೀ ಋಣಬಾಧೆಯಿಂದೆನ್ನ ॥ ಪರಿಯದೇನಪ್ಪುದೊ ಎನುತ್ತಂ । ಕೊರಗುತಿರೆ ಮುಂದಲ್ಪಕಾಲದೊ । ಳಿರದೆ ತೊಲಗಿದವಿವನ ಹೊಲಮನೆಯೆಲ್ಲ ಸಾಲದೊಳು ॥ ೮ ॥

ಬಳಿಕ ಶೀಘ್ರದೊಳಳಿದನಾತಂ । ಮಲಹರನ ತಚ್ಛರಣಸಮುದಯ । ದೊಲುಮೆ ಬಹುತರ ಜನ್ಮ ಕೋಟಿಯೊಳಾರ್ಜಿಸಿರ್ದೆಲ್ಲ ॥ ಅಲಘು ಪುಣ್ಯೋದಯದಿನಲ್ಲದೆ । ಬಲುಹಿನಿಂ ದೊರಕೊಳ್ಳಲುಂಟೇ । ನೆಲದೊಳಗಜೇಶಪ್ರಸಾದಿಯೆ ಧನ್ಯನಹುದಹುದು ॥ ೯ ॥

ಒಂದು ಬಡವರ ಹುಡುಗನಿಗೆ ತಾಂ । ಬಂದಡಸಿದುದು ಬೇನೆಯ ವನದ । ರಿಂದುಳಿಯನೆಂದವನ ಮಾತಾಪಿತರಳುತಮಿರಲು ॥ ಇಂದುಧರ ಶರಣಂ ತದಾಲಯ । ಕಂದು ಬಿಜಯಂಗೈಯಲಾ ತಾ । ಯ್ತಂದೆಗಳು ವಂದಿಸಿ ಮಹಾತ್ಮನೆ ಮಗನಳಿವುತಿಹನು ॥ ೧೦ ॥

ಕಡುದಯೆಯೊಳೀತಗೆ ಪ್ರಸಾದವ । ಕೊಡು ಬದುಕಿಸವಿದಿಡುವೆ ವೈಯೆ । ನ್ನೊಡೆಯ ನಿನ್ನಂ ಬಿಟ್ಟು ಬೇರೆಮಗಾಪ್ತಹಿತರಿಲ್ಲ ॥ ಮಡಿವ ಸುತನಂ ಪಾಲಿಸಿದೊಡೀ । ಪೊಡವಿಯೊಳು ಬಲು ಸೈಪು ಜಸಗಳು । ಬಿಡದೆ ಪಸರಿಪ ವೆಂಟುಗೊಂಟನೊಳೆಂದು ಪ್ರಾರ್ಥಿಸಲು ॥ ೧೧ ॥

ಲೋಕದೊಳಗುಳ್ಳನ್ನಮೆಲ್ಲಮು । ಮಾ ಕಪರ್ದಿಯ ಸುಪ್ರಸಾದಂ । ಸ್ವೀಕರಿಸುತಿಹರೆಲ್ಲರದನೇ ಮೂದಿನದೊಳದನು ॥ ಬೇಕು ಬೇಕೆಂದರ್ಥಿಪನಿವಂ । ಲೋಕನಾಥಂ ಕಾವುತಿರಲೀ । ಶೋಕಮೇತಕ್ಕೆಂದನುಗ್ರಹಿಸಿದನು ಚಿದ್ಘನನು ॥ ೧೨ ॥

ಒಡೆಯ ಪೇಳಿವಗಿನ್ನಗದಮಂ । ಕೊಡಲುಬೇಕೊ ಹೇಗೆನುತ್ತವ । ರೊಡನೆ ಬೆಸಗೊಳಲಿವರ ಮಾತಿನ ಶ್ರದ್ಧೆಯಿಲ್ಲದೊಡೆ ॥ ಕೊಡಿರಿ ನಂಬುಗೆಯುಳ್ಳೊಡೀಯದೆ । ಬಿಡಿರಿ ನೀವೆಂದೊರೆಯಲಗದದ । ಗೊಡವಿಯಂ ಬಿಟ್ಟು ಸಿಕರಾದರ್ನಂಬುಗೆಯೊಳವರು ॥ ೧೩ ॥

ಮೂರು ದಿನದೊಳು ಬೇನೆಯದು ಪರಿ । ಹಾರಮಾಯ್ತಾಹಾರಮಂ ಸುಕು । ಮಾರನರ್ಥಿಸಲಾದನಾತನ ತಂದೆ ತಾಯಿಗಳು ॥ ಭೂರಿಹರ್ಷಂದಾಳ್ದು ಶರಣನ । ಪಾರ ಕೃಪೆಯಿಂದೆಮ್ಮ ತನಯಂ । ಧಾರುಣಿಯೊಳೊಗೆದಂ ಮಗುಳ್ದೆಂದವರು ನುತಿಸಿದರು ॥ ೧೪ ॥

ಪೇಳುವೆನು ಮತ್ತೊಂದು ಶರಣನ । ಲೀಲೆಯಂ ಸೆರೆ ಸೊನ್ನಲಿಗೆಯೊಳು । ಮಾಳಸೆಟ್ಟಿಯ ಸೋಮನಾಥನೆನಿಪ್ಪ ಚೆಲುವುಳ್ಳ ॥ ಬಾಲನೆಡಗೈಯಿಂದಲುಣುತಂ । ಬಾಳುತಿರ್ದಂ ಮೊದಲಿನಿಂದೀ । ಚಾಳಿಯಂ ಬಿಡಿಸಲೆನು ತಾತನ ತಂದೆತಾಯಿಗಳು ॥ ೧೫ ॥

ಪಲವು ಬಗೆಯಿಂ ಪದೆದು ಪೇಳ್ದರು । ಮುಳಿದು ಬೈದರ್ಬಡಿದರಾದಡ । ಮುಳಿಯಲಿಲ್ಲಾ ರೂಢಿಯನವಂ ಕೊನೆಗೆ ಬೇಸತ್ತು ॥ ತೊಲಗದಿದೆನುತ್ತರಿದು ಬಿಟ್ಟರು । ಬಳಿಕ ಮೊಂದುದಿನಂ ಶರಣನೊಲೆ । ದಲಸದಿವನಂ ಕರೆದನೂಟಕೆ ಪ್ರಮಥ ಪಙ್ತಿಯೊಳು ॥ ೧೬ ॥

ಬಿಡದೆ ತನ್ನಯ ರೂಢಿಗೆಡದಂ । ತೆಡದ ಕೈಯಿಂದುಣ್ಣತೊಡಗಿದ । ಹುಡುಗನಂ ಕಂಡೀ ಮಹಾತ್ಮಂ ಸಮ್ಮುಖದೆ ಕುಳಿತು ॥ ಕಡು ಸಮಾಧಾನೋಕ್ತಿಯಿಂ ಬೆಂ । ದಡವಿ ದಕ್ಷಿಣಹಸ್ತದಿಂ ನೀಂ । ಸಡಗರದೊಳುಣಬೇಕೆಪ ಎನುತ್ತೊರೆಯಲಾ ಕ್ಷಣವೇ ॥ ೧೭ ॥

ಬಲದ ಕೈಯಿಂದುಣ್ಣಲಾದಂ । ನಿಲದೆ ರೂಢಿಯದಂದಿನಿಂದಂ । ತೊಲಗಿದುದವನ ತಂದೆ ತಾಯ್ಗಳು ಕೌತುಕೋತ್ಸವವ ॥ ತಳೆದರಭವನ ಶರಣಬೋಧಂ । ಗಳು ಪುಸಿಯುವೆಂದೆಂದುಮೆನುತಂ । ಬಳಗದವರರಿದತಿಕೃತಜ್ಞತೆಯಿಂದ ಹರಸಿದರು ॥ ೧೮ ॥

ಪರತರನಿರಂಜನಜಗದ್ಗುರು । ವರದಮುರುಘಾರಾಜದೇಶಿಕ । ವರನನುಪಮಸ್ವಾಮಿಯಿೂ ಶರಣಾಗ್ರಣಿಯ ಮನೆಗೆ ॥ ಕರುಣದಿಂದಾಶೀರ್ವದಿಸಲೆಂ। ದರಿದು ಬಿಜಯಂಗೈಸಲೀಕ್ಷಿಸಿ । ಭರದೊಳಭ್ಯುದ್ಗಮನದಿಂ ಕರತಂದು ಕುಳ್ಳಿರಿಸಿ ॥ ೧೯ ॥

ನಲವಿನಿಂ ಕುಂಬಿಟ್ಟು ಪಣ್ಕಾ । ಯ್ಗಳನು ಮುಂದಿಟ್ಟಭವಭಾಷಣ । ಗಳೊಳು ಕೆಲಪೊಳ್ತುಪಚರಿಸಲತಿಸಂತಸಂಬಟ್ಟು ॥ ಸಲೆ ಪರಸುತಾ ಫಲಗಳೊಳಗರೆ । ಯುಳಿಸಿಕೊಂಡುಳಿದರ್ಧಮಂ ಮಗು । ಳ್ವೊಲೆದಿವಂಗಾಶೀರ್ವದಿಸಲದಕೆನಿತುವೊಡಬಡದೆ ॥ ೨೦ ॥

ಒಗುಮಿಗೆಯೊಳೋಸರಿಸಿ ಕೈಗಳ । ಮುಗಿದದೇಕೆಪ ಬೇಡವೆಪ ನೆರೆ । ತೆಗೆದುಕೊಳಬೇಕೆಪ ಸಲಲುಬೇಕೆಪ ನಿಮಗಿವೆಲ್ಲ ॥ ಮಗುಳ್ದು ಕೊಡುವದನುಚಿತವೆಪ ಬಗೆ । ಬಗೆಯೊಳಿವ*ರಂ ಪೊರೆದಿರುವಿರೆಪ । ಜಗದೊಳಿವ*ರುರೆ ಬಾಳ್ದಿರುವರೆಪ ನಿಮ್ಮ ಕೃಪೆಯಿಂದ ॥ ೨೧ ॥

ಧರೆಯೊಳಿವ*ರಿನ್ನುಂ ಬದುಕಲೆಂ । ದರಿದು ನೀವಾಶೀರ್ವದಿಸಬಂ । ದಿರುವಿರೇನಪ ಬೇಡವಿದುಸಾಕೆಪ ತಳುವದೀಗ ॥ ಕರುಣದಿಂ ನಿಮ್ಮಯ ಚರಣದೊಳು । ಬೆರಸಿಕೊಳಬೇಕೆಪ ಮಗುಳ್ದೆೈ । ತರದವೊಲು ಪಾಲಿಸುವದೆಪ ಇಂತೆಂದನಿವನಂದು ॥ ೨೨ ॥

ಮುದದೊಳಾಶೀರ್ವಾದವಮಂ ಮಾ । ಳ್ಪುದೆ ಮಹಾತ್ಮರ ಧರ್ಮವಾಗಿಹು । ದಿದಕೊಡಂಬಡದಿರ್ಪರೇನೆಂದಾ ಯತಿಪನೆನಲು ॥ ಪದೆದು ಭಕ್ತರ್ಕಳ್ಸಮರ್ಪಿಸಿ । ದುದನು ಕೊಳ್ಳುವುದು ಧರ್ಮವೆಪ ಮೇ । ಣದನೆ ಕೊಡುವದಿದಾವಧರ್ಮದ ರೀತಿಯೆನಿಪುದೆಪ ॥ ೨೩ ॥

ಕಿರಿದನಿತ್ತಡದಂ ಬಿಡದೆ ಸ್ವೀ । ಕರಿಸಿ ಪಿರಿದಂ ಕೊಟ್ಟು ಪಾಲಿಸು । ತಿರುವದೇ ಮಹನೀಯರಿಗೆ ಭಾಸುರತೆಯೆನಿಪುದೆಪ ॥ ಧರೆಯೊಳಿರುವದು ಸಾಕೆನುತ್ತದ । ನಿರದೆ ಕೊಟ್ಟೇ ಕಾಣ್ಕೆಯಂ ನೀವ್ । ಮರುಳಿಯಾಶೀರ್ವಾದವೆಂದಿಂದೇತಕೀವುದೆಪ ॥ ೨೪ ॥

ಇಂತು ಶರಣಂ ಪೇಳ್ದದಂ ಕೊಳ । ದಂತೆ ವಂದಿಸಲಾ ಜಗದ್ಗುರು । ಸಂತಸದೆ ತಲೆದೂಗಿ ಪರಸುತ್ತನುಮತಿಯನಾಂತು ॥ ತಾಂ ತಳುವದಲ್ಲಿಂ ಮುಗುಳ್ದನ । ತ್ಯಂತವಿಸ್ಮಿತಚಿತ್ತನಾಗಿ ಜಿ । ತಾಂತಕಪ್ರಭುಶರಣಚರಿತಂ ಭೂಹಿತಂ ಮಹಿತಂ ॥ ೨೫ ॥

ಬಳಿಕವೊಂದು ದಿನಂ ಶರಣನಾ । ಸುಲಲಿತಜಗದ್ಗುರುವರನ ಪದ । ಜಲಜಸಂದರ್ಶನನಿಮಿತ್ತಂ ಸೊನ್ನಲಿಗೆಯಲ್ಲಿ ॥ ನಲವಿನಿಂದಂ ಪೋಗಲೀತಂ । ಗೊಲೆದು ಬಿಡದಾಶೀರ್ವದಿಸಲೆಂ । ದೆಳಸುತಾ ನೀರಂಜನಪ್ರಭುಪುಂಗವಂ ನೋಡಿ ॥ ೨೬ ॥

ಸಾರೆಯೊಳು ಮಡುಗಿರ್ದರಳ್ಕ । ಜ್ಜೂರವಮಂ ಬಿಟ್ಟೊಳಗಣಿಂದಂ । ಸಾರತರಬಹುಫಲಗಳಂ ತಾರೆಂದು ವಟುವರಗೆ ॥ ಬೀರುತಪ್ಪಣೆಯೊಯಲದನೀ । ಧೀರಶರಣಂ ತಿಳಿವುತ ನಿರಾ । ಭಾರಿದೇಶಿಕಸಾರ್ವಭೌಮಂಗಾಗ್ರಹಿಸುತಾಗ ॥ ೨೭ ॥

ಬೇಡವೆಪ ಹೀಗಾಗಬಾರದು । ನೋಡೆಪ ಕೃಪಾರಸದೊಳಿರ್ದದ । ನೀಡಬೇಕೆಪ ಮತ್ತೆ ಪೊಸತಂ ತರಲು ಹೊಲ್ಲವೆಪ ॥ ಮಾಡುವಾಶೀರ್ವಸ್ತುಚಯದೊಳು । ನಾಡೆ ಪೆರ್ಚುಂ ಕುಂದುಮಿಲ್ಲೆಪ । ನೋಡಿ ಮುಟ್ಟಿ ಪರಸಿ ಕರುಣದಿಂ ಕೊಡುವದಧಿಕವೆಪ ॥ ೨೮ ॥

ಬಳಿಯ ಫಲಗಳು ಸಿದ್ಧವಸ್ತುಗ । ಳೊಳಗಣಿಂದಂ ತರುವ ಫಲಗಳು । ನೆಲವೆ ಬಹಿರಂಗೋಪಚಾರಪದಾರ್ಥವೆನಿಪವೆಪ ॥ ಒಳಗಣಫಲಂಗಳನುಳಿದು ಬಳಿ । ಯೊಳಗಿರುವ ಸದ್ವಸ್ತುಗಳನಿವ । ರ್ಗೊಲಿದನುಗ್ರಹಿಸಿದೊಡೆ ಸಾಕೆಪ ಎಂದು ಬಿನ್ನೈಸೆ ॥ ೨೯ ॥

ಅಹುದು ಶರಣೋತ್ತಂಸ ನಿನ್ನೀ । ಮಹಿತಮತಕೊಪ್ಪಿದೆನೆನುತ್ತಂ । ಬಹುತರದೊಳಭಿನಂದಿಸಿ ಬಳಿಕ್ಕಾ ಬಳಿಯ ಫಲವ ॥ ವಿಹಿತಮೆನೆ ಕೊಡ ಲೊಡನೆ ಕೈಕೊಂ । ಡಹಿಪಕುಂಡಲಶರಣನೊಲ್ಪಿಂ । ಮಹಿಯೊರಸಲಭಿನಮಿಸಿ ಮಗುಳ್ದಂ ಪಡೆದನುಜ್ಞೆಯನು ॥ ೩೦ ॥

ಮತ್ತಮೊಂದು ಮಹತ್ವಮನದಾಂ । ಬಿತ್ತರಿಪೆನಾನಂದದಿಂದೀ । ಪತ್ತನದೆ ಮಲ್ಲಾರ್ಯನೆಂಬಗಣೇಶ್ವರಂ ಜಸವ ॥ ಪೆತ್ತ ಮಾಹೇಶನನೊಡಂಗೊಂ । ಡುತ್ತಮಾಭವಭಕ್ತಭವನಕೆ । ಚಿತ್ತಯಿಸಿದಂ ಭೋಜನಾರ್ಥಂ ಬಿನ್ನಪ ಕ್ಕೊಪ್ಪಿ ॥ ೩೧ ॥

ಹರುಷದಿಂದವರೀರ್ವರಾ ಮುಂ । ದಿರದೆ ನೆರೆದ ಗಣಂಗಳೊಡನುರೆ । ಪುರಿ ಗಡಬು ನರುನೆಯ್ಯಗಳನಾಕಂತಮುಂ ಬಿಡದೆ ॥ ಸರಸಮುಂಮಿಗೆ ಸವಿದು ಮೆಲೆದಾ । ಪಿರಿಯಶ್ರಮದಿಂದೊಂದು ಗುಡಿಯೊಳ । ಗೊರಗಿರುವ ಸಮಯ ದೊಳು ಶರಣಂ ಬಂದು ಶರಣೆಂದು ॥ ೩೨ ॥

ಹರಗಣಂಗಳೆ ಸುಪ್ರಸಾದ । ಕ್ಕರಿದು ಬಿಜಯಂಗೈಪುದೆಂದಾ । ದರದೆ ಬಿನ್ನಯಿಸಲ್ಕದಂ ಕೇಳ್ದುಭಯರಾತ್ಮದೊಳು ॥ ಬಿರಿವವೊಲ್ತುಂಬಿರುವದುದರಂ । ಮರುಳಿ ಭುಂಜಿಪುದೆಂತದು ನಿರಾ । ಕರಿಸಿದಂತಹುದಾ ಪ್ರಸಾದವನಿಂದು ಪೋಗದೊಡೆ ॥ ೩೩ ॥

ಆದುದಾಗಲಿ ಪೋಗಬೇಕು ಪ್ರ । ಸಾದಕೊಲ್ಲೆನಲಾಗದೆಂದವ । ರೀ ದಯಾಬ್ಧಿಯ ಹಿಂದೆ ತಳರ್ದಾರು ಬಿನ್ನಪವ ಪಿಡಿದು ॥ ಸ್ವಾದುಮಯ ಮೃಷ್ಟಾ ನ್ನಗಳನಾ । ಮೋದದಿಂದುಂಡವರು ನೀರಸ । ಮಾದ ಮುದ್ದಿಯ ಕಂಡು ದಾಸೀನತೆಯನಾಂತಲ್ಲಿ ॥ ೩೪ ॥

ಎಡೆಯಮಾಡಿಸಿಕೊಂಡರವರೊಂ । ದಡಕೆಯನಿತದನಾನನದೊಳಿಡ । ಲೊಡನೆ ಬಹುರುಚಿಯಾಗಿ ಮತ್ತತ್ಯಾಶೆಯಿಂದೊಂದು ॥ ಒಡಹಿಡಿಗೆ ಪೆರ್ಚಾಗಿ ಮುದ್ದಿಯ । ಬಿಡದೊಲೆದು ಭುಂಜಿಸಿದರಾ ಪುರಿ । ಗಡಬು ಸಕ್ಕರೆ ತುಪ್ಪಗಳಿಗಿಂದಧಿಕಮೆಂದೆನಿಸಿ ॥ ೩೫ ॥

ಉದರಮದು ಹಿಗ್ಗಿದುದೊ ಮೊದಲುಂ । ಡುದುದು ಶೀಘ್ರದೆ ಜೀರ್ಣಮಾದುದೊ । ಮದನಹರಶರಣಾಗ್ರಗಣ್ಯನ ಭಾವದುನ್ನತಿಯೋ ॥ ಒದವಿದಿಂದಿನಗುಣವೊ ಮಹಿಮನ । ಸದನಮಹಿಮೆಯೊ ಎಂದು ನೆನೆವುತ । ಮೊದಲಿನಾಯಾಸಂ ತೊಲಗಿ ಮಗುಳ್ದರ್ಗಣಾಧಿಪರು ॥ ೩೬ ॥

ಶರಣನಾಲಯಕೋರ್ವ ಮಾಹೇ । ಶ್ವರನು ಕನ್ಯಾಭಿಕ್ಷೆಗೆಂದಾ । ತುರದೊಳೈತಂದೆಲೆ ಮಹಿಮ ನಿನ್ನಯ ಕುಮಾರಿಯನು ॥ ಪುರಹರಪ್ರೀತ್ಯರ್ಥಮೆನಗಂ । ಕರುಣದಿಂದಿತ್ತುದ್ಧರಿಸು ನಾ । ನಿರುವೆನುತ್ತಮಕುಲಜನೆಂದರ್ಥಿಸಿದ ನವನರರೆ ॥ ೩೭ ॥

ಪರಮಶಿವಯೋಗಿನಿ ವಿರಾಗಿಣಿ । ನಿರುಪಮಾನಬ್ರಹ್ಮಚಾರಿಣಿ । ವರತಪಸ್ವಿನಿ ಲಿಂಗಪೂಜಾನಂದಮಯಳಾದ ॥ ಶರಣತನುಭವೆ ರುದ್ರಮಾಂಬೆಯ । ನರಿಯದರ್ಥಿಸಿದಿವನ ಮೌರ್ಖ್ಯದ । ಪರಿಗಣನೆಯಂ ಮಾಡಲಾರಿಗೆ ಸಾಧ್ಯಮುರ್ವಿಯೊಳು ॥ ೩೮ ॥

ಜಗವ ಮೋಹದ ನೇಣಿನಿಂದಂ । ಬಿಗಿದ ಸಂಸಾರವನು ಲಕ್ಕಿಸ । ದೊಗುಮಿಗೆಯೊಳೊದ್ದಮಲಚಿಲ್ಲಿಂಗಕ್ಕೆ ವಶಳಾಗಿ ॥ ಸೊಗಸಿನಿಂದಂ ತಣಿವಳಂ ನಗೆ । ಮೊಗದ ಕೊಡಗೂಸೆಂದು ಮನದೊಳು । ಬಗೆದು ಬೇಡಿದನವನು ತಪ್ಪೇಂ ಮೊದಲೆ ಲೌಕಿಕನು ॥ ೩೯ ॥

ಮೂರು ಲೋಕದೆ ವಿಷಯಸುಖದಿಂ । ನೂರುಸಾವಿರಕೋಟಿಮಿಗಿಲಿಹ । ಚಾರುಲಿಂಗಾನಂದದೊಳು ಪರಿಣಮಿಪ ಶರಣರನು ॥ ಘೋರಭವಚಕ್ರಭ್ರಮಣದಿಂ । ಪಾರವಿಲ್ಲದೆ ಬಳಲುತಿಹ ಸಂ । ಸಾರಿಗಳು ತಾವೆಂತು ಬಲ್ಲರು ವಿಷಯಲಂಪಟರು ॥ ೪೦ ॥

ಮದುವೆಗೊಲಿದರು ಗಿರಿಜೆ ಸಿರಿ ಶಾ । ರದೆಯರು ಮುನಿಕನ್ಯೆಯ ರ್ಸು ರ । ಸುದತಿಯರು ಕರಣತ್ರಯಗಳಿಂದಕ್ಕಮಾದೇವಿ ॥ ಚೆದುರೆ ನಾಗಾಂಬೆಯರದೆಂದುಂ । ಮದುವೆಗೊಡಬಡಲಿಲ್ಲ ಮಿವರವೊ । ಲದಿಗಳಾದೀ ಶರಣಸುತೆಯೊಪ್ಪುವಳೆ ಸಂಸೃತಿಗೆ ॥ ೪೧ ॥

ವಿಷಮವಹ ಸಂಸಾರವದು ದು । ರ್ವಿಷಸದೃಶವೆಂದರಿದ ಮಗಳಂ । ವಿಷಯಲಂಪಟಮನದ ಮಾಹೇಶ್ವರನು ಯಾಚಿಸಿದ ॥ ನಿಷಧವಚನಕ್ಕುವ್ಮಳಿಸಿ ತಾಂ । ವೃಷೆಯನಾಡದೆ ದೂಷಿಸದೆ ನೆರೆ । ವೃಷಭವಾಹನಶರಣನವನಂ ಕೂರ್ತು ವಿನಯದಲಿ ॥ ೪೨ ॥

ಗಣವರನೆ ಚಿತ್ತಯಿಸು ಕನ್ಯಾ । ಮಣಿ ಮಹಾಲಿಂಗಕ್ಕೆ ಮೊದಲ । ರ್ಪಣಮದಾಗಿಹುದದನು ಮತ್ತಂ ಕೊಡುವದೆಂತೆಂದು ॥ ಮಣಿದು ಪೇಳಲದಕ್ಕವಂ ಬಿಡ । ದೊಣರಗಳೆಯಿಂಬೇಡತೊಡಗಿದ । ನಣಿಯರಂ ಮೂರ್ಖಂಗೆ ತಿಳಿಪುದು ಸಾಧ್ಯವಿನ್ನಾರ್ಗೆ ॥ ೪೩ ॥

ಸುಕುಲಸಂಭವನಿರಲಿ ಶಾಸ್ತ್ರ । ಪ್ರಕರಮಂ ಕಲಿತವನಿರಲಿ ವೈ । ದಿಕನಿರಲಿ ಮುನಿಯಿರಲಿ ಶಿವಪೂಜಕನು ತಾನಿರಲಿ ॥ ಸಕಲಕಲೆಗಳನರಿದೊರೆವಮಾ । ರ್ಮಿಕನಿರಲಿ ವಿಷಯೇಚ್ಛೆಯಿಂದಂ । ಪ್ರಕಟಮೆನೆ ದೌರ್ಜನ್ಯ ಮೌರ್ಖ್ಯಗಳಂ ಪರಿಸದಿರನು ॥ ೪೪ ॥

ಬೆಳಗನರಿವುದು ಕೋಳಿ ಹೊತ್ತಂ । ತಿಳಿವುತಿರ್ಪುದು ಕತ್ತೆ ತನ್ನಂ । ಸಲಹಿದೊಡೆಯನ ತನುಗೃಹಕ್ಷೇತ್ರಗಳ ರಕ್ಷಣದ ॥ ಹೊಲಬನರಿವುದು ನಾಯಿ ಭೇಕಂ । ಮಳೆಯಬರವಂ ತಿಳಿವುದೇನುಂ । ತಿಳಿಯದಿಹ ಕಡುಮೂರ್ಖನವುಗಳಿಗಿಂದ ಕಡೆಯೈಸೆ ॥ ೪೫ ॥

ಅಲ್ಲಿ ಕುಳ್ಳಿರ್ದೋರ್ವ ಬುಧನಿದ । ನೆಲ್ಲಮಂ ತಿಳಿದೆಲವೊ ಮೂರ್ಖನೆ । ಎಲ್ಲಿ ಬುದ್ಧಿಯನಿಟ್ಟಿರುವೆ ನಡೆ ಸಾಕು ನೀನಿಲ್ಲಿ ॥ ನಿಲ್ಲಬೇಡೆಂದುರಿದು ಬೆದರಿಸೆ । ಮೆಲ್ಲನೇಳ್ದೈದಿದನು ಪಡಿನುಡಿ । ಯಿಲ್ಲದಪಮಾನಂಬಡೆದವಂ ನಾಣ್ಚಿಳಿದು ಬಳಿಕ ॥ ೪೬ ॥

ಎದ್ದುಬಂದೆಡೆಯಲ್ಲಿ ಭರದೊಳು । ಹದ್ದುಬಡಿಯಿತ್ತೆಂಬ ತೆರನಾ । ಯ್ತಿದ್ದು ಫಲವೇನಿಲ್ಲಿ ಬೇರೆಡೆಗೈದಬೇಕೆಂದು ॥ ಸುದ್ದಿಯಂ ಪೇಳದೆ ಶರಣ ನಂ । ದಿದ್ದ ದಿನಸಂ ಕಟ್ಟುವನಿತಕೆ । ಸಿದ್ಧನಾಮಂ ದರ್ಶನಕ್ಕೈತಂದದಂ ತಿಳಿದು ॥ ೪೭ ॥

ಪೋಗಬೇಡಿರಿ ಬೇರೆ ತಾಣ । ಕ್ಕೀಗಳಡಸಿದ ಕೊರತೆಯೇನನು । ರಾಗ ದಿಂದೆಮ್ಮಯ ವದನಮಂ ನೋಡಿ ಸೈರಿಸಿರಿ ॥ ಭೋಗವಾಂಛಾಂಧರ್ಕಳೀ ಶಿವ । ಯೋಗಮಾರ್ಗವನೆತ್ತಬಲ್ಲರು । ರಾಗಿಗಳ ನುಡಿಗೆಡೆಗೆಡುವದಿದು ಯೋಗ್ಯವೇ ನಿಮಗೆ ॥ ೪೮ ॥

ಶಿವನ ಸತಿಯಾದದ್ರಿವರತನು । ಭವೆಯುನಾ ರಾವಣನು ಬೇಡಿದ । ನವನಿಯೊಳು ಕುಂಟಣಿಯ ಕೆಲಸವನಾಗಿಸಿದನಂದು ॥ ಭವನಿನಾ ಸೌಂದರನು ಬಾಣಂ । ಭವನಮಂ ಕಾಯಿಸಿದನಗಜಾ । ಧವನಿನಿರದೇಗೈಯರೋ ಭೋಗೇ ಚ್ಛುಗಳ್ತಿಳಿಯೆ ॥ ೪೯ ॥

ಶಿವನಿಗಿಂದಂ ಶಿವಶರಣರೀ । ಭುವನಗಳೊಳತ್ಯಧಿಕರೆಂಬುದು । ಭವ ವಿಮೋಹಾರಣ್ಯಸಂಚಾರಿಗಳಿಗೇಂ ಗುರುತು ॥ ಇವರೊಡನವರ್ನಂಟುತನ ಮಂ । ವ್ಯವಹರಿಸಿ ಮನ್ನಣೆ ಸೊಗಗಳಂ । ತವೆ ಪಡೆಯಲೆಂದೆಳಸುವರ್ನಿಜ ಶಕ್ತಿಯಂ ಮರೆದು ॥ ೫೦ ॥

ಇಲ್ಲಿಗಾವಿಲರುಂಟು ನೀವ್ಪೋ । ದಲ್ಲಿಯಿಲ್ಲವೆ ನೆರೆ ವಿಚಾರಿಸ । ಲೆಲ್ಲೆಡೆಗಳೊಳಗುಂಟು ಸಭ್ಯಮೂರ್ಖರುಗಳಾರ್ಯ ॥ ಬಲ್ಲವರು ನೀವಿಂತು ಮಾಡುವ । ದೊಳ್ಳಿತೇ ಬಿಡಿರೆಂದು ಪ್ರಾರ್ಥಿಸಿ । ನಿಲ್ಲಿಸಿದನವನೀ ಮಹಾತ್ಮನ ನಲ್ಲಿಯೇ ಮತ್ತೆ ॥ ೫೧ ॥

ವಿನಯಗುಣಿ ಥೋಬಡೆಯ ಸಿದ್ಧ । ಪ್ಪನಿಗೆ ಗುರುಳೆಯರೋಗಮಡ ಸಿದು । ದೆನಿತುಪಾಯಂಗೈದಡುಂ ಬೆಳೆವುತ್ತಮಿರಲಾಗ ॥ ಘನಶರಣನೈತಂದ ನಾತನ । ಮನೆಗೆ ಮನೆಯವರೆಲ್ಲರೀಕ್ಷಿಸಿ । ವಿನಯದಿಂದುಪಚರಿಸಿ ಪೇಳ್ದರ್ತ ದ್ಗದೇಂಗಿತವ ॥ ೫೨ ॥

ಆವನಿಂದೀತನಿಗವೌಷಧ । ಸೇವನೆಯ ಮಾಡಿಸುವಿರೆಂದೀ । ಭಾವ ಜಾಂತಕರೂಪನಾತುರದಲಿ ವಿಚಾರಿಸಲು ॥ ದೇವ ಕೇಳ್ಪಾಶ್ಚಾತ್ಯವೈದ್ಯರ । ತೀವಪರಮೌಷಧವ ಯತ್ನದಿ । ನೀವರಾದಡುವಿಳಿಯದೇರುವದೆಂದವ ರ್ಪೇಳೆ॥ ೫೩ ॥

ಪರಮಮುರಘಾರಾಜದೇಶಿಕ । ವರಜಗದ್ಗುರುಗಳ್ಪರುವರೀ । ಪುರಕ ವರ ದಿವ್ಯೋತ್ಸವಾದಿವಿಶೇಷಸೇವೆಯನು ॥ ಪರುಠವಿಸುವಾ ವಾರದಪ್ಪಗೆ । ನೆರೆಸಹಾಯಿಕನಾಗಬೇಕಾ । ಗಿರುವದೀತಂ ಮಡಿಯನಪ್ಪಣೆಯಿಲ್ಲ ಮಡಿ ಯಲ್ಕೆ ॥ ೫೪ ॥

ಇಂದಿನಿಂದಿವಗೌಷಧಂ ಬೇ । ಡಿಂದುಚೂಡಪ್ರಮಥಪುಂಗವ । ವೃಂದ ಮದು ಕಾರುಣ್ಯದಿಂ ಪರಿಪಾಲಿಸುತ್ತಿಹುದು ॥ ಕಂದದಿರಿ ತಿಲಮಾತ್ರಮುಂ ನೀ । ವೆಂದು ನಿರವಿಸಿ ಪೋಗಲಿವನವ । ನಂದೆ ಗುಣಮಂ ಪೊಂದಿ ಬದುಕಿದ ನೊಳ್ಪಿಕಳೆದುಂಬಿ ॥ ೫೫ ॥

ಶರಣರೊಳು ಮಾನವರಿಗೊದಗಿದ । ಮರಣಮಂ ಪರಿಹರಿಪ ಬಲ ಮದು । ಮೆರೆವುದೆಂಬ ಮಹತ್ವಮಂ ಮನಗಂಡೆನಾನಿಂದು ॥ ಕರುಣಿಗಳೆ ನಿಪ್ಪಭವಶರಣರ । ಚರಣಮಂ ಪಿಡಿದವರ ಕಷ್ಟಂ । ಪರಿಯದಿರದೆಂದಾಡಿದ ನವಂ ಮುಂದೆಕೆಲದಿನಕೆ ॥ ೫೬ ॥

ಇಂದುಧರಶರಣಂ ನುಡಿದವೊಲು । ಬಂದರುಜಗದ್ಗುರುಗಳತಿಮುದ । ದಿಂದವರ ಸೇವೆಯನು ಮಾಳ್ಪಾ ವಾರದಪ್ಪಂಗೆ ॥ ಕುಂದದಲೆ ನೆರವಾಗಿಯವ ನುರೆ । ಮುಂದೆ ಪಂಚಾಬ್ದಂ ಬದುಕಿ ಮಗು । ಳ್ವೊಂದಿದಾ ಬೇನೆಯೊಳೆ ಪಡೆ ದನು ಶಿವಪದಾಶ್ರಯವ ॥ ೫೭ ॥

ಪೇಳುವೆನು ಮತ್ತೊಂದು ಶರಣನ । ಲೀಲೆಯಂ ಕೋಡಲಿಯ ಗ್ರಾಮದ । ಶೂಲಿಭಕ್ತಶಿವಪ್ಪನೆಂಬಗೆ ಕರ್ಮವಶದಿಂದ ॥ ಕೀಲಿಸಿದುದುಪದಂಶ ವಾತನ । ನಾಲಿಗೆಯೊಳೊಂದಿನಿಸು ಕಾರಂ । ಬೀಳಲನಲಂಪತ್ತಿದಂದದೊಳು ರಿವುತಿರ್ದತ್ತು ॥ ೫೮ ॥

ಕಾರವಿಲ್ಲದ ಭೋಜನವ ಸುಡು । ಕಾರದೊಳು ಬಹುಸಾರವಿರುವದು । ಕಾರವಿದು ಷಡ್ರುಚಿಯೊಳೊಂದಾಗಿಹುದು ಭೋಗಿಗಳ ॥ ಚಾರುಜಿಹ್ವಾಗ್ರಕ್ಕೆ ಮಧುರಾ । ಹಾರವುಸಗೊಳದಿರ್ದಡದು ತುಸು । ಕಾರದಿಂದಗಿದೋಡಿ ಸೇರುವದುದರದೇಶವನು ॥ ೫೯ ॥

ಎಂದಿಗುಂ ತಿಕ್ತಪ್ರಿಯಂ ನಾ । ನಿಂದಿಗೀ ದುಸ್ಸಹದುರಾಮಯ । ದಿಂದ ಮೆನಗೆರವಾಯ್ತುದೇಗೈಯುಲಿ ಮಹಾದೇವ ॥ ಎಂದು ಮನದೊಳು ಚಿಂತಿಸುತ್ತಿರ । ಲೊಂದು ದಿನಮುವನಂ ಶರಣನಾ । ನಂದದಿಂದೂಟಕ್ಕೆ ಕರೆದಂ ದೈವ ವಶದಿಂದ ॥ ೬೦ ॥

ಪೋಗಿ ಕುಳಿತಂ ಪಙ್ತಿಯೊಳವಂ । ನಾಗಭೂಷಣಶರಣನಾತನಿ । ಗಾಗಿಯೊಪ್ಪಿಡಿ ಹಸಿಯಮೆಣಸಿನಕಾಯಿಗಳನರೆದು ॥ ಆಗಿಸಿದ ಪಿಣ್ಯಾಕಪಿಂಡವ । ನಾಗ ತಾಂ ಕೈಮುಟ್ಟಿ ನೀಡಲು । ಬೇಗನದನೆಲ್ಲವನು ಸುಖಮೆನೆ ಭುಂಜಿಸಿದನೊಲೆದು ॥ ೬೧ ॥

ಅಂದನಿಂ ಮೊದಲಂತೆ ಸಂತಸ । ದಿಂದ ಕಾರವನುಣ್ಣಲಾದಂ । ಮುಂದೆ ತದ್ರುಜೆಯುಳಿದುದಲ್ಪಾವಧಿಯೊಳಗೆ ತಾನೆ ॥ ಹಿಂದೆ ಮಾಡಿದ ಪುಣ್ಯದಿಂದೆನ । ಗಿಂದು ಶರಣನ ಕರುಣವಾದುದು । ತಂದೆ ತಾಯ್ಗುರುದೇವನಿವನೆಂದವನು ಹರಸಿದನು ॥ ೬೨ ॥

ಸೊನ್ನಲಿಗೆಯೊಳು ಖ್ಯಾತಿವಡೆದಿಹ । ಚೆನ್ನಮಲ್ಲಾಹ್ವಯಗುರುಸ್ಥಲ । ದುನ್ನತಶ್ರೀಪಟ್ಟದಾರ್ಯನ ಮಠಕೆ ಸಹಜಮೆನೆ ॥ ಮನ್ನಣೆಯ. ಪಡೆದೀ ಸುಗುಣಸಂ । ಪನ್ನನೊಂದುದಿನಂ ಪ್ರಮೋದದದೆ । ಸನ್ನುತೋತ್ಸಂಧ್ಯಾಸಮಯದೊಳು ಬರಲು ಕಾಣುತ್ತ ॥ ೬೩ ॥

ಪಟ್ಟದಾರ್ಯಂ ಮನದೆ ಪ್ರೇಮಂ । ಪುಟ್ಟ ನೆರೆ ಕುಳ್ಳಿರಿಸಿ ಸೊಡರಂ । ಮುಟ್ಟಿಸುವ ಪೊಳ್ತಾಗಿಹುದರಿಂದವನು ಪಣತಿಯೊಳು ॥ ನೆಟ್ಟನೆರಡೊಳ್ಬತ್ತಿಯಂ ಸಮೆ । ದಿಟ್ಟೊಳಗಣೆಣ್ಣೆಯನು ಬಲು ನಲು । ವಟ್ಟು ತರಲೆಂದೇಳ್ವುದಂ ಕಂಡೀ ದಯಾಘನನು ॥ ೬೪ ॥

ಏಳಬೇಡಿರಿ ನೀವೆನುತ್ತಂ । ಪೇಳಿ ತನ್ನಯ ಬಳಿಯೊಳುಳ್ಳುರು । ತೈಲ ಮಂ ಪದೆದಿನಿಸೆರೆದು ದೀಪವನು ಪೊತ್ತಿಸಲು ॥ ಲೀಲೆಯಿಂ ಮೂದಿನಗಳನ್ನಂ । ಮೇಲೆನಿಸಿ ಪಗಲಿರುಳುರಿದುದದು । ಕಾಲಕಂಧರಶರಣಮಹಿಮೆಯಿದಲ್ಲವೇ ತಿಳಿಯೆ ॥ ೬೫ ॥

ಶರಣನೇ ತಾಂ ತಂದ ತೈಲವು । ನೆರೆದು ಹಚ್ಚಿಹನಿದನು ನಂದಿಸ । ದಿರುವದುಚಿತಮೆನುತ್ತ ಬಿಡಲೀ ಸೊಡರು ನಿಚ್ಚಳದೆ ॥ ಇರುಳುಪಗಲುಂ ಮೂದಿನಗಳನ । ಕುರಿಮುದಚ್ಚರಿಯೆಂದು ಪಟ್ಟದ । ಗುರುವರೇಣ್ಯಂ ಪೊಗಳ್ದನೊಲವಿಂ ಬುಧಸಮಾಜದೊಳು ॥ ೬೬ ॥

ಈರೆರಡುಗಳಿಗೆಯೊಳಗೆಲ್ಲಂ । ತೀರುವನಿತೆಣ್ಣೆಯದು ಸೌಮ್ಯದೆ । ಮೂರುದಿನವುರಿದಿರ್ದುದದು ತೈಲದ ಮಹಿಮೆಯಲ್ಲ ॥ ವೀರಶರಣನ ದಿವ್ಯ ಹಸ್ತಪ । ಯೋರುಹಸ್ಪರ್ಶನಮಹಿಮೆಯಿಂ । ದೀ ರಸಾತಲದೊಳ್ಪ್ರಸಿದ್ಧಮಿದಾದುದಂದಮುಮ ॥ ೬೭ ॥

ಸೊರಗದುಬ್ಬದೆ ನಿಚ್ಚವೊಂದೇ । ತೆರದೊಳಿಹ ಶರಣನ ಮನವನನು । ಕರಿಸಿ ಕುಂದದೆ ಪೆರ್ಚದೆ ಸಮಾಧಾನದಿಂದೊಂದೇ ॥ ಪರಿಯೊಳುರಿದುದು ಬ್ರಹ್ಮನಿಷ್ಠನ । ಪಿರಿಯಕರ್ಮದ ಪಾಂಗಿನಿಂ ಕೊನೆ । ಗಿರದಡಗಿದುದು ಸೊಡರೆನುತ ಕಂಡವರು ನುತಿಸಿದರು ॥ ೬೮ ॥

ವೀರಶರಣನ ಭಾವಚಿತ್ರವ । ಜೀರಿಗೆಯ ಗಂಗಪ್ಪನೆಂಬಂ । ಸಾರತರಮೆನೆ ರಚಿಸಬೇಕೆಂದೆಳಸಿ ಯೋಚಿಸುತ ॥ ಈ ರಹಸ್ಯವನರಿದಡೊಪ್ಪನು । ದಾರಚರಿತನೆನಿಪ್ಪಶರಣಂ । ಬೇರೆಬಗೆಯಿಂ ತಿಳಿಯದಂದದೆ ರಚಿಸಬೇಕೆಂದು ॥ ೬೯ ॥

ವಿನುತಶರಣಂ ಭಿಕ್ಷೆಗೈಯುವ । ಮನೆಗಳೊಳು ಸಂಚರಿಪ ಪಥದೊಳು । ದಿನಸುಗಳ ಕೊಳ್ವಂಗಡಿಯ ಬೀದಿಯೊಳು ಬಾಗಿಲೊಳು ॥ ಘನಮಹಿಮರಿರ್ದೆಡೆಗೆ ಬಂದತಿ । ವಿನಯದಿಂ ಮಂಡಿಸುವ ತಾಣದೊ । ಳನುವಿನಿಂ ದೂರದೊಳು ಮೊದಲೇ ಯಂತ್ರಮಂ ಮಡುಗಿ ॥ ೭೦ ॥

ಎದುರಿಗೀತಂ ಬಂದೊಡನೆ ಬಲು । ಚೆದುರಿನಿಂ ಯಂತ್ರವನು ತೆರೆಯು। ಲ್ಕದರೊಳೀತನ ಚಿತ್ರವಿನಿಸುಂ ಮೂಡದೆಡಬಲದ॥ ಪುದಿದ ದೇಶಸುವಸ್ತುಗಳು ಚೆ । ಲ್ವೊದವಿ ಮೂಡುತ್ತಿರ್ದವಿಂತವ । ನೆದೆಗೆಡದೆ ಪತ್ತೆಂಟು ಬಾರೆಸಗಿದನು ಪಲತೆರದೆ ॥ ೭೧ ॥

ಆದಡುಂ ಕೈಗೂಡಲಿಲ್ಲದು । ಖೇದಗೊಳ್ಳದೆ ಯತ್ನದಿಂದಂ । ಸಾದರಂ ಮಿಗೆ ಕ್ಷಣವೆ ಮೂಡುವ ಬೇರೆ ಯಂತ್ರವನು ॥ ಐದೆ ತಂದದರಿಂದ ಮಾಡಲು । ಭೇದವಾಗಲ್ತೊಡಗಿದವು ಸೊಗ । ಸಾದ ಪರಳುಗಳುಳಿಯದಂದದೊಳಾಗ ಬೇಸತ್ತು ॥ ೭೦ ॥

ಆವುಪಾಯವನೆಸಗಿದಡುಮೀ । ಭಾವಜಾಂತಕಶರಣವರ್ಯನ । ಭಾವ ಚಿತ್ರಂ ಸಾಧ್ಯಮಾಗದೆನುತ್ತ ಕೈಬಿಟ್ಟು ॥ ಭೂವಲಯದೊಳು ಮುಂದಿವಂ ಘನ । ಪಾವನಮಹಾಲಿಂಗದೊಳು ಬೆರೆ । ದಾ ವಿಭವಸಮಯದೊಳು ರಚಿಸಿದನವನು ಸೊಗಸಾಗಿ ॥ ೭೩ ॥

ಸನ್ನುತಪ್ರಮಥಾಗ್ರಗಣ್ಯರ । ಪನ್ನಳಿನದಾಸ್ಯವನು ಸಾಧಿಸು । ವೆನ್ನ ಬಣ್ಣದ ಭಾವಚಿತ್ರವ ವಿರಚಿಸಿದೊಡದನು ॥ ಮನ್ನಿಸುತ ಕೆಲಭಕ್ತಿಗುಣಸಂ। ಪನ್ನರರ್ಚಿಸಿ ವಂದಿಸುವರೆಂ । ದುನ್ನಿಸಿ ಮಹಾಮುಹಿಮನಿಂತಾಗಿಸಿರಲಹುದರರೇ ॥ ೭೪ ॥

ಮೋಸದಿಂದೀ ಚಿತ್ರಪಟಮಂ । ಲೇಸುಮಿಗೆ ವಿರಚಿಸಲುಬೇಕೆಂ । ಬಾಶೆಯಿಂ ತೊಡಗಿದೊಡೆ ಮೂಡದೆ ಕೆಡದೆ ಪೋದಪುದೆ ॥ ದೇಶಗಳನಾಡಿಸುವ ಸೂತ್ರಾ । ಧೀಶನಿಹನಿವಗರಿಯದೆಸಗುವ । ಮೋಸಗೀಸಗಳೆಂತು ಸಾಧಿಪವೆಂದರಿಯರಾರು ॥ ೭೫ ॥

ವಸುಧೆಯೊಳು ವ್ಯವಹಾರದಿಂದಂ । ಪೆಸರುವಡೆದೀ ಸೊನ್ನಲಿಗೆಯೊಳು। ಮಿಸುಪ ಬೋರಾಮಣಿಯುವರೆನಿಪ್ಪೊಂದು ಸೊಗಸಾದ ॥ ಕುಶಲಮಾಹೇಶ್ವರರ ಮನೆತನ । ದೆಸೆವ ಕನ್ನಿಕೆಗಾಗಿ ಮಾನಸ । ಮೊಸೆದು ಬಂದವು ಪಲವೆಡೆಗಳಿಂ ಬಹುವರಗಳೈದೆ ॥ ೭೬ ॥

ಮನಸಿಗವು ಸರಿಬಾರದುತ್ತಮ । ವೆನಿಪ ವರನಂ ನೋಡಬೇಕೆಂ । ದೆನುತಲಾ ಮನೆಯವರು ಶೋಧಿಸುತಿರೆ ಶಹಾಪುರದ ॥ ಘನಚರಂತಿಯ ಮಠದ ವಿದ್ಯಾ । ವಿನಯಗುಣಸಂಪನ್ನನಾದೋ । ರ್ವನು ಬಯಸಿ ತತ್ಕನ್ಯೆ ಯಂ ಬೇಡಿದನು ಯತ್ನದೊಳು ॥ ೭೭ ॥

ಅವನಿಗೀವುದು ಯೋಗ್ಯವೋ ಹೊ । ಲ್ಲವೊ ಎನುತ್ತಾ ಮನೆಯ ಪಿರಿಯರು । ತವೆ ನಿಜಗುಣಸ್ವಾಮಿಯಂ ಜಗದೀಶಬುಧವರನ ॥ ತವಕದಿಂದಂ ಬರಿಸಿ ತಮ್ಮಯ । ಭವನದೊಳು ಸುಹಿತಾಪ್ತಭಾವದಿ । ನವರೊಡನೆ ಸಂಜೆ ಯೊಳು ಯೋಚಿಸುತಿರುವ ಸಮಯದೊಳು ॥ ೭೮ ॥

ಶರಣನಾಕಸ್ಮಿಕಮದಾರಿಗು । ಮರಿಯದಂದದೊಳಲ್ಲಿಗೈತಂ । ದುರಿವ ಮಂದಜ್ಯೋತಿಗೆಣ್ಣೆಯನೆರೆದು ಬೆಳಗೆಸಗೆ ॥ ನಿರುಕಿಸಿ ನಯಂ ಭೀತಿ ರಯ ಮುಂ । ಬೆರಸಿ ಓಹೋ ಎಂದವರು ಕು । ಳ್ಳಿರಿಸಿ ನೀವೇಕೆರೆದಿರೆಣ್ಣೆಯನೆಂದು ಬೆಸಗೊಳಲು ॥ ೭೯ ॥

ಇದುವೆ ಬೇಕಾಗಲಿಯೆನುತ್ತಂ । ಮುದದೊಳೆಣ್ಣೆಯನೆರೆದರಿವರೆನ । ಲದಕವರೊಡಂಬಟ್ಟು ಕೊಟ್ಟರ್ತದ್ವರಂಗಂದು ॥ ಸದಮಲಶ್ರೀಶರಣನುರು ತರ । ಪದಕರುಣದಿಂದಾ ವರಂ ಘನ । ಪದವಿಯಂ ತಳೆದೆಲ್ಲರೊಳು ಜಸ ವೆತ್ತು ಸಡಗರದೆ ॥ ೮೦ ॥

ಸತಿಯೊಡನೆ ಸಂಸಾರಸುಖದಿಂ । ದತಿಶಯದೆ ಬಾಳುತ್ತಿಹಂ ವಾ । ಕ್ಪತಿ ಬರೆದ ಫಾಲಾಕ್ಷರಂ ಬರಡಾಗಲಹುದೊಮ್ಮೆ ॥ ನುತಶರಣಸಂಕೇತಮದು ವಸು । ಮತಿಯೊಳೆಂದುಂ ಪುಸಿಯದದರಿಂ । ಸತತಮಭವಪ್ರೀತರೊಲು ಮೆಯೊಳಿಹುದು ಕಡುಲೇಸು ॥ ೮೧ ॥

ಧನಿಕನಲ್ಲದ ರಾಜನಲ್ಲದ । ಘನಪರಾಕ್ರಮಶಾಲಿಯಲ್ಲದ । ನಿನಗೆ ತಲೆವಾಗದವರಾರೀ ಧರಣಿಯೊಳು ನಿನ್ನ ॥ ವಿನುತಗುಣವರ್ತನಗಳಂ ಪಾ । ವನತೆಯಂ ಕಂಡಾಲಿಸಿ ಮದು । ನ್ಮನದೊಳು ಭವತ್ಪಾದವಿರಲೆಂದೆಳಸು ವೆನು ಶರಣ ॥ ೮೨ ॥

ಅಂತು ಸಂಧಿ ೧೮ಕ್ಕೆ ಪದಗಳು ೧೧೫೦.

ಶುಭಂ.



ಶ್ರೀ ಭವಾಯ ನಮಃ



## ಹತ್ತೊಂಬತ್ತನೆಯ ಸಂಧಿ ಪ್ರಾರಂಭ.

ಸೂಚನೆ ॥ ಪತಿಯನುಜ್ಞೆಯನಾಂತು ನಿರ್ಜಿತ । ರತಿಪ ನಡಿಯಂ ನೆನೆವುತ ಮಹಾ । ಸತಿಯೆನಿಪ ಗುರುದೇವಿ ಬೆರೆದಳು ದಿವ್ಯಲಿಂಗದೊಳು ॥ ಪಲ್ಲ ॥

ಪದ ॥ ಪೊರೆಯೊಳಗ್ಗಿವೊಗರ್ಕಳೆಲ್ಲರು । ಪರಸೆ ಬಾಂಬೊಳಲಂ ಪೊಣರ್ಕೆಯೊ । ಳುರುಪಿ ಸೊಗಮನವರ್ಗೊಡರ್ಚಿ ಜಸಂಬಡೆದು ಮೆರೆವ ॥ ಗೊರವನೇ ಜಗದೆರೆಯನೆಂದೊಲಿ । ದೊರೆಗುಮಾ ಪಳೆವಾತುಗಳು ನಿನ । ಗೊರೆಯದಾರ್ಪೊರೆ ನಿನ್ನ ಡಿಂಗರಿಗರ್ಸಕಲರಭವಾ ॥ ೧ ॥

ಶರಣಸತಿಪತಿಪುತ್ರಿಗಳೊಳೋ । ರ್ವರಿಗೆ ರುಜೆಯುಡಸಿದೊಡೆ ಪೇಳದೆ । ನರಳದೊರಗುತ್ತಿರ್ದರುಣ್ಣದೆ ಪೂಜೆಯಂ ಬಿಡದೆ ॥ ಮರುಗದುಳಿದೀರ್ವರ್ಕಳೀನಾ । ಯ್ತುರುಹಿರೆಂದವರಂ ವಿಚಾರಿಸ । ದಿರುತಲಿರ್ದರು ಬೇನೆಬಂದಿರ ಲಹುದೆನುತ್ತರಿದು ॥ ೨ ॥

ಬೇನಿಗರಿಗುಪಚಾರಮಿಲ್ಲಂ । ಬೇನೆಯೇನೆಂದಿನಿಸು ಕೇಳ್ವಭಿ । ಮಾನಿಗಳು ಮೊದಲಿಲ್ಲವೌಷಧಸೇವನಮದಿಲ್ಲ ॥ ಬೇನೆಯನಿವರ್ಕೇಳಲೆಂಬೀ । ಮಾನಸಂಬೇನಿಗರಿಗಿಲ್ಲೀ । ಭೂನುತರ ಸಂಬಂಧನಿಷ್ಪ್ರೇಮುವನೊರೆಯಲಳವೇ ॥ ೩ ॥

ನಮ್ಮ ಗುರುದೇವಿಗೆ ತುಡುಂಕಿದು । ದೊಮ್ಮೆ ನಸುಮೈಬೇನೆಯದರಿಂ । ನೆಮ್ಮಿ ಕಾಲತ್ರಯಗಳೊಳು ಶಿವಲಿಂಗಪೂಜೆಯನು ॥ ಒಮ್ಮನದಿನೆಸಗುತೆ ಪ್ರಸಾದ । ಕ್ಕಂ ಮುಖಂಗೊಡದಳುಕದುಸುರದೆ । ಸುಮ್ಮನೇ ಮಲಗಿದಳು ಪರಮಧ್ಯಾನಮನಳಾಗಿ ॥ ೪ ॥

ಮೂರನೆಯ ದಿನಮಧ್ಯನಿಶೆಯೊಳು । ಮಾರಹರನೊಳು ಬೆರೆವ ಸಮಯಂ । ತೋರೆ ಹತ್ತರದೊಳ್ಮಲಂಗಿರ್ದಣುಗೆಯಂ ಕೂರ್ತು ॥ ವೀರದವ್ವಾ ಅವ್ವ ಎನಲಾ । ಚಾರುರುದ್ರಾಂಬಾಖ್ಯೆಯೇಳ್ದರೆ । ಸಾರೆವಂದೇಕ್ರೆವಯುವಾ ಎಂದೊಡನೆ ಬೆಸಗೊಳಲು ॥ ೫ ॥

ಕರೆವಿರೇನೌ ನೀವು ಶ್ರೀಶರ । ಣರನೆನಲದೇಕವ್ವ ಎಂದೆನೆ । ಪರಮಲಿಂಗದೊಳೈಕ್ಯರಾಗುವರಿವರೆನುತ್ತುಸುರೆ ॥ ಹರಹರಾ ಈ ಕೂಸಿಗಿಂತಾ । ಚರಣೆಯಂ ನೀವ್ಪಿಡಿಸಿ ಲಿಂಗದೆ । ಬೆರೆದೊಡಿದು ಮುಂದೆಂತು ಬಾಳುವದೇನೊರೆದಿರವ್ವಾ ॥ ೬ ॥

ಶರಣರಪ್ಪಾ[೧]ಅವರ ಸ್ಥಿತಿಯದು । ಪರಮಸೂಕ್ಷ್ಮಂ ಜಡಮತಿಗಳಿವೆ । ರರಿಯೆ ಸ್ವೈರಿಪರೆಂತಿವರನಾ ವಿರತಿಗುಣಯುತರು ॥ ಪಿರಿಯ ಗುಣಶೀಲೆಯರೆನಿಸಿ ಬಲು । ನುರಿತವರೆ ನೀವವರ ಕೈಯೊಳು । ಕೊರಗುತಿರ್ದಿರಿ ತಡೆಯಲಾರದೆ ಮನದೊಳೊಮ್ಮೊಮ್ಮೆ ॥ ೭ ॥

ಮರುಳು ಕೂಸಿದು ಪಾರುಗಾಣುವ । ಪರಿಯದೆತ್ತಣದುರೆ ವಿಚಾರಿಸೆ । ಪೊರೆದಿರೌ ವಾತ್ಸಲ್ಯದಿಂ ನೀವಿನ್ನೆವರಮಿನ್ನು ॥ ಕರುಣದಿಂ ನಿಮ್ಮಂತೆ ಪಾಲಿಸ । ಲರಿಯರವರೆಂದಾರ್ತಭಾವದೊ । ಳರುಪಲಾ ಗುರುದೇವಿ ಧೃತಿಗೆಡದಾತ್ಮಜೆಯನೋಡಿ ॥ ೮ ॥

ನೀವು ಚಿಂತಿಸಬೇಡಿರವ್ವಾ । ನೀವು ಲೌಕಿಕರಲ್ಲವವ್ವಾ । ನೀವಿವರಬಸುರಿನೊಳೊಗೆದಡೇನಾಯ್ತು ಹಡೆದವ್ವಾ ॥ ನೀವು ಗರ್ಭದೊಳಿರುವಕಾಲದೆ । ಭಾವಭವಹರರೂಪಜಂಗಮ । ದೇವನೋರ್ವನದೊಂದು ದಿನದೆನಿಶಾವಸಾನದೊಳು ॥ ೯ ॥

ಇವರ ಕನಸಿನೊಳೈದಿ ಮಗಳೇ । ಕುವರಿಯೋರ್ವಳು ನಿನ್ನ ಗರ್ಭದೊ । ಳವತರಿಸುವಳು ಪರಮಪಾವನೆಯೆನಿಸಿ ಸಂಸೃತಿಯ ॥ ವಿವಿಧವಿಷಯಾಶಾಂಕುರಕೆ ತಾಂ । ತವೆಯಿನಿಸುಮವಕಾಶಮಂ ಕುಡ । ದವಿಕಲಸದಾಚಾರಗುಣಸಂಪತ್ಪ್ರಯುತೆಯಾಗಿ ॥ ೧೦ ॥

---

೧. ಈಗಿರುವ ರುದ್ರಮಾಂಬೆಯರು, ತಂದೆಯಾದ ವೀರೇಶ್ವರನಿಗೆ 'ಶರಣರಪ್ಪಾಅವರು' ಎಂದು ಅನ್ನುವ ರೂಢಿಯುಂಟು.

ಲಿಂಗಪೂಜಾಪ್ರಮಥಸೇವಾ । ಮಂಗಲಜ್ಞಾನಕ್ರಿಯೆಗಳೀ । ಪಿಂಗ ದಾಗಳ್ತನಗೆ ಸಹಜಸುಧರ್ಮವೆಂದೆನಿಸಿ ॥ ತುಂಗನಿಸ್ತುಲಕೀರ್ತಿ ಘನಪು । ಣ್ಯಂಗಳಿಗೆ ಬೀಡಾಗಿ ಮಾಯೆಯ । ಹಂಗಿನೊಳಗಿರದೊಪ್ಪಿ ಮೆರೆವಳು ಶಾಂತಿ ಸುಖದಿಂದ ॥ ೧೧ ॥

ಹರನ ಕಾರ್ಯಕ್ಕೊಪ್ಪುವಳು ಶಂ । ಕರಶರಣರೊಳು ಪರಿಣಮಿಸುವಳು । ದುರಿತವಂ ದಂಭವನಹಂಕಾರವನು ಕೋಪಿಸಳು ॥ ಅರರೆ ಜೀವಿತಕಾಗಿ ಗಿರಿಜಾ । ವರನಿಗುಂ ಬಾಯ್ದೆರೆಯದಿರ್ಪಳು । ಪರತರಜಗಜ್ಜನನಿಯಂಶ ಮಿವಳ್ವಿಮಲೆ ಶೀಲೆ ॥ ೧೨ ॥

ಜನಿಸಿರುವಳಿವ್ಮುದರದೊಳಿಮಗೆ । ತನುಜೆಯಿವಳೆಂದರಿಯಬೇಡಿರಿ । ಜನನಿಯೆಂದರಿಯಿರಿಯೆನುತ್ತಂ ಪೇಳ್ದು ತೆರಳಿದನು ॥ ಮನಕೆ ವಿಸ್ಮಯವಾಗಿ ಯೇಳ್ದತಿ । ವಿನಯದಿಂದಿವರಿದನು ಶರಣ । ರ್ಗನುಮತಿಸಿ ಸೂಚಿಸಲದಕ್ಕ ವರಚ್ಚರಿಯನಾಂತು ॥ ೧೩ ॥

ಇವರಿಗುಂ ತಚ್ಚರವರೇಣ್ಯಂ ತವೆ ಕನಸಿನೊಳು ಪೇಳ್ದನಿದನೇ । ಯುವತಿ ಕೇಳೆಂದಾ ಚರೇಂದ್ರನ ರೂಪವೇಷಗಳ ॥ ವಿವರಮೆನಲಿವರಂದು ಕಂಡಂ । ತವರು ಪೇಳಲ್ಕೇಳ್ದು ಪರಮೋ । ತ್ಸವವನಾಂತರ್ಮನದೊಳಿವರ ವರಂದಿನಿಂ ನೋಡೆ ॥ ೧೪ ॥

ಆ ಚರೇಂದ್ರಂ ಪೇಳ್ದವೊಲು ನಿ । ಮ್ಮಾಚರಣೆ ಮನಗಂಡಿರುವದಾ । ಲೋಚನೆಯದೇಕ್ರೆವಯವಾ ನೀವ್ಧನ್ಯರಿರ್ಪಿರೆವಾ ॥ ಸೂಚಿಸುವದೇಂ ಬೇರೆ ನಿಮಗೀ । ಶ್ರೀಚರಿತರಹಶರಣರುರುಸೇ । ವಾಚತುಷ್ಟಯದೊಳು ನಿರಂತಂ ಪರಿಣಮಿಪಿರವ್ವಾ ॥ ೧೫ ॥

ಮೊನಮರಿಗೀಸಂ ಕಲಿಸುವರೆ । ಜ್ಞಾನವೈರಾಗ್ಯೋಪರತಿಲಿಂ । ಗಾನು ಸಂಧಾನಗಳು ನಿಮಗೆ ನಿಸರ್ಗಮಾಗಿರಲು ॥ ಏನು ಹೇಳ್ಪುದು ನೀವು ಹಿಡಿದ ಶಿ । ವಾನುಭವಮಾರ್ಗವನು ತಪ್ಪದ । ನೂನಮೆನೆ ಕೊನೆಮುಟ್ಟುವಿರಿ ಸಂದೇಹವಿಲ್ಲವ್ವಾ ॥ ೧೬ ॥

ಇಂತುಮುಗಳಿಗೆ ಪೇಳ್ದು ಮತ್ತಂ । ಸಂತಸದೆ ನೀವ್ಕರೆವಿರೇನೌ । ಶಾಂತಶರಣರನಿವರ ವೇಳೆ ಸವಿೂಪಿಸಿದುದೆಂದು ॥ ಭ್ರಾಂತಿಹರಗುರುದೇವಿ ಯೊರೆಯಲು । ತಾಂ ತಳುವದಾ ರುದ್ರಮಾಂಬೆ ಸ । ಮಂತು ಪಿತನೆಡೆಗೈದಿ ಕರ ಕಮಲಂಗಳಂ ಮುಗಿದು ॥ ೧೭ ॥

ಕರೆವರವ್ವಾಳವರು[೧] ನಿಮ್ಮಂ । ಬರುವಿರೇನ್ನೈಯೆಂದರುಪಲಾ । ಶರಣನಾ ಕ್ಷಣದಲ್ಲಿ ಬಂದೇಕ್ರೆಪ ಕರೆದಿರೇಕೆ ॥ ಅರುಹಬೇಕ್ರೆಪ ಎನುತ ಸತಿಯಂ । ಕರುಣದಿಂದಂ ಕೇಳಲಾ ಪತಿ । ಚರಣಯುಗಳವ ಪಿಡಿದು ವಂದಿಸಿ ಭಕ್ತಿ ಭಾವದೊಳು ॥ ೧೮ ॥

ಇವರಿಗೀಶ್ವರನಾಜ್ಞೆಯಾಗಿಹು । ದಿವರು ಮರವಿಂ ಮಾಡಿದಪರಾ । ಧವನು ಸೈರಿಸಿ ಕೊಡುವಿರೇನಪ್ಪಣೆಯನೆಂದೆನುತ ॥ ತವಕದಿಂ ಗುರುದೇವಿ ಮಗುಳ್ದಾ । ಧವನಡಿಗೆ ಕುಂಬಿಡಲಿದೇನ್ರೆಪ । ಇವರನುಳಿದೋರ್ವರೆ ತಳ ರ್ವರೇ ಮೋಸವೆಸಗಿದಿರಿ ॥ ೧೯ ॥

ನೃಢನಿಯುಮುಮಂ ವಿೂರಲರಿದಾ । ದೊಡೆ ವಿಷಯುಗಳ ನೆನಹಿಗಿಂ ಬಂ । ಕೊಡರು ಶರಣರು ಧ್ಯಾನಮಂ ಬಿಡರಂತ್ಯದೊಳು ನೀವು ॥ ಸಡಗರ ದೊಳೀ ತೆರದೆ ಲಿಂಗದೊ । ಳಡಗುವೊಡೆ ಪ್ರತಿಕೂಲವೇತ । ಕ್ಕೊಡೆಯರೊ ಪ್ಪವರಾಗಬಹುದ್ರೆಪ ಎಂದೊರೆದನಿವನು ॥ ೨೦ ॥

ಆ ಕ್ಷಣದೆ ಗುರುದೇವಿ ಶಿವಶಿವ । ಸಕ್ಷಮಾಭವ ಎಂದು ನುಡಿವು । ತ್ತಕ್ಷಯಾನಂದಾತ್ಮಲಿಂಗದೊಳೈಕ್ಯಳವಳಾಗೆ ॥ ತ್ರ್ಯಕ್ಷಶರಣಂ ರುದ್ರಮಾಂಬೆಯು । ರೀಕ್ಷಿಸಿ ಪ್ರಸನ್ನಾಸ್ಯದಿಂ ಬಸ । ವಾಕ್ಷರೋಚ್ಚಾರದೆ ವಿನಿಸಿ ಮಡಿಯುಡಿಸಿ ಕುಳ್ಳಿರಿಸಿ ॥ ೨೧ ॥

ಲಲಿತಭಸಿತಶಿವಾಕ್ಷಬಿಲ್ವೀ । ದಳಗಳಿನಲಂಕರಿಸಿ ಮುಂದಿನ । ಕೆಲಸ ವದು ಭಕ್ತರದಿವರದಿನ್ನಲ್ಲಮೆಂದೆಸುತ ॥ ಉಲಿದನುದಿನಂ ಮುಗಿವ ಹೆಬ್ಬಾ । ಗಿಲನು ತೆರೆದೆಂದಿನ ತೆರದೊಳಂ । ದಳುಕದೈದಿದನಿವನು ನಿಲ್ಲದೆ ತನ್ನ ಕಾಯಕಕೆ ॥ ೨೨ ॥

---

೧. ರುದ್ರಮಾಂಬೆಯರು, ತಾಯಿಯಾದ ಗುರುದೇವಿಗೆ 'ಅವ್ವಾಳವರು' ಎಂದು ಅನ್ನುವ ರೂಢಿಯುಂಟು.

ಇದನರಿದು ತತ್ಪುರದ ಭಕ್ತರು । ಸದಮಲಗಣಾಧಿಪರು ನೆರೆದಾ । ಸುದತಿಯಸವಮತರಾಂತಿಮಸಮಾಧಿಕ್ರಿಯೋತ್ಸವವಾ ॥ ಸದರಮೆನೆ ಮುಗಿಸಿದರು ಬಳಿಕೀ । ಸದಯರಂ ಮಾತಾಡಿಸಲು ಬಂ। ದುದು ಪುರಸ್ತ್ರೀವಿತತಿ ಲೌಕಿಕರೀತಿಗನುಸರಿಸಿ ॥ ೩೩ ॥

ಹಿರಿಯತನದಭಿಮಾನದಬಲೆಯ । ರರಿದವರು ನಾವೆಂಬ ಸೊಕ್ಕಿನ । ಜರಠೆಯರು ಬಿರುನುಡಿಯನಾಡುವ ಸನ್ನೆಗೇಡಿಗಳು ॥ ಬರಿಯ ಬಣ್ಣದ ಮಾತುಗಳನೇ । ಸುರಿಸುವವರಿತರೇಂಗಿತವನಿನಿ । ಸರಿಯದರೆಮುದುಕೆಯರು ಮೂಢೆಯರಿರ್ದರದರಲ್ಲಿ ॥ ೩೪ ॥

ಶರಣರಡಿಗಳಿಗೆರಗಿಯೇನ್ನೈ । ವರಗುಣದ ಗುರುದೇವಿಯಳಿದಳು । ಪಿರಿದು ಕಷ್ಟಮುದಡಸಿದುದು ಮುಂದೆಂತು ಮಾಡುವಿರಿ? ॥ ಹರನ ಕಣ್ಣೊಳು ಮಣ್ಣುತುಂಬಲಿ । ಹರೆಯುದಾಕೆಯನೊಯ್ದನಿನ್ನುಪ । ಚರಿಪರಾರ್ರೈ ನಿಮ್ಮನೆಂದ ವರಾಗ್ರಹಿಸಿ ನುಡಿಯೆ ॥ ೩೫ ॥

ಜಡತಮಸ್ತ್ರೀಗಣಮಿದೆಂದೀ । ಮೃಡಶರಣನರಿದುಂ ವಿನಯಮಂ । ಬಿಡದೆ ರುದ್ರಾಂಬೆಯುರಿರುವರಿವರೆಸಗಿದಂತಕ್ಕೆ ॥ ಪಡುವದೇತಕ್ಕುವಮ್ಮಳವನೆಂ । ದೊಡನೆ ಪಡಿನುಡಿಗೊಟ್ಟನಾ ಪೆ । ಣ್ಗಡಣದ ಸಮಾಧಾನಕಾಗಿಯೆ ಸಹಜಭಾವದೊಳು ॥ ೩೬ ॥

ಇವರ ಯೋಗಕ್ಷೇಮದ ವಿಚಾ । ರವನು ಮಾಳ್ಪಧಿಕಾರವೆಮಗೀ । ದಿವಸದೊಳು ದೊರೆದುದೆನುತರಿದಾ ಮೂರ್ಖನಾರಿಯರು ॥ ತವಕದಿಂ ರುದ್ರಾಂಬೆಯಂ ಕೂ । ರ್ತವಗಡಿಸಿ ನೋಡವ್ವ ಮಗಳೇ । ಶಿವಶರಣರಿಂತಾಡುತಿಹರೇನೆಂಬೆ ನೀನಿದಕೆ ॥ ೩೭ ॥

ಪೇಳು ನಿಮ್ಮಂ ಕರುಣದಿಂದಂ । ಪಾಲಿಸುವೆನಾನೆಂದು ಪಿತಗೆನ । ಲಾಲತಾಂಗಿ ತದನುಚಿತೋಕ್ತಿಗೆ ಸಹಿಸದೇನುವನು ॥ ಪೇಳದಿರೆ ಏ ತಂಗಿ ಸುಮ್ಮನೆ । ಮೂಲೆಯಂ ಪಿಡಿದೇಕೆ ಕುಳಿತೆಯೆ । ಪೇಳಬಾರದೆ ನೀನೆಲ್ಲಾ ಮಗಳು ಸಿಕಳಿರಲು ॥ ೩೮ ॥

ಏನಿದೆಂತಹ ಹುಡುಗೆಯಿದು ತಾಂ। ಮೌನದಿಂ ಕುಳ್ಳಿರ್ದುದಿನಿಸುಂ। ಜ್ಞಾನಮಿಲ್ಲಮಿದೆಂತಹದು ಜನಿಸಿಹುದೊ ಶರಣರೊಳು ॥ ಏ ನಿನಗದೇನಾಯ್ತೆ ವದನವಿ। ಹೀನಳೇಂ ಮಾತಾಡೆನುತ್ತಾ। ಕಾನನವಿದಗ್ಧೆಯರು ಮುತ್ತಿದರೀ ಮಹಾತ್ಮಳನು ॥ ೨೯ ॥

ಬೆಳಕನರಿವುದೆ ಕಾರುಗತ್ತಲೆ। ಪಳುಕನರಿವುದೆ ಹಂಚು ಸೂರ್ಯನ। ಹೊಳಪನರಿವುದೆ ಗೂಗೆ ಕಾಗೆ ಮರಂದಗಂಧವನು ॥ ತಿಳಿವುದೇ ಹೆಗ್ಗತ್ತೆ ಮುತ್ತಿನ। ಬೆಲೆಯನರಿವುದೆ ಗ್ರಾಮ್ಯನಾರಿಯ। ರಲಘುರುದ್ರಾಂಬೆಯ ಮಹತ್ವವ ನರಿವರೇ ನೆಲದೆ ॥ ೩೦ ॥

ಕೋಗಿಲೆಗೆ ಕಾಗೆಗಳು ಹಂಸಿಗೆ। ಗೂಗೆಗಳು ಸಾರಿಕೆಗೆ ಪರ್ದುಗ। ಳಾಗಮಃಶ್ರುತಿಶಾಸ್ತ್ರವಿದುಗೆ ವಿತಂಡವಾದಿಗಳು ॥ ಯೋಗಿಗೆ ಸುರಾಪಾಯಿಗಳು ಕಡು। ಚಾಗಿಗತಿಕೃಪಣರ್ತೊಡಂಕಿದ। ಹಾಗೆ ತೊಡರಿದರಾ ವಧೂಟಿಗಳೀ ವಿರಾಗಿಣಿಗೆ ॥ ೩೧ ॥

ಪಶುಪತಿಯು ವಶಳೀ ಮಹಾತ್ಮಳು। ಕುಸುಮಶರವಶರಾ ಪ್ರಮದೆಯರು। ಕುಶಲಳೀ ಶಿವಶರಣೆ ಮೂರ್ಖೆಯರಾ ಲತಾಂಗಿಯರು ॥ ಅಸಮತರ ಕಲ್ಯಾಣಕರವಾ। ನಸೆಯೆನಿಪಳೀ ವಿಮಲೆ ಸ್ವಾರ್ಥ। ಕ್ಕಸುಗೊಳುವರವರಿಂತಿರಲು ಮೇಲನಮದೆಂತಹುದೋ ॥ ೩೨ ॥

ಕೊಸರಿನುಡಿವಾ ನಗರನಾರೀ। ವಿಸರಕೇನೊಂದುತ್ತರವನೀ। ಬಿಸಜಲೋಚನೆ ಕೊಡದಿರುವದಂ ತಿಳಿದು ಬೇಸತ್ತು ॥ ಮುಸಗಿಯಿದು ಹಟಮಾರಿ ತಂದೆಯು। ಮುಸುಡನೇನಿದು ನೋಡಿದಪುದೆನು। ತಸವಸದೊಳೈದಿದರು ಪಳಿವುತ ತಮ್ಮ ಮನೆಗಳಿಗೆ ॥ ೩೩ ॥

ಅವರಖಿಲರುಂ ಪೋದಬಳಿಕೀ। ಶಿವಶರಣೆ ನೀವಿಂತದೇಕಾ। ಯುವತಿಯರಿಗಿಂದೊರೆದಿರ್ದೈ ಕಂಡಂತೆ ಮಾತಾಡಿ ॥ ಇವರನೊಪ್ಪದೆ ಪಳಿದು ಪೋದರು। ಸವೆಯುದ ಸಮಾಧಾನವದು ಸಂ। ಭವಿಸಿದುದೊ ನಿಮುಗಿದರಿನೆಂದಯ್ಯನನು ಕೂರ್ತಾಡೆ ॥ ೩೪ ॥

ತಾಳಿರೌ ಲೌಕಿಕರು ನಿಮ್ಮಂ । ಬೀಳುಗಳೆದುದನಿವರು ಮರವಿಂ । ಪೇಳಿದೀ ಲೌಕಿಕದ ಮಾತುಗಳಂ ಮರೆಯಿರವ್ವಾ ॥ ಕೀಲಿಸಿರ್ದಭಿಮಾನ ವಳಲಿಗೆ । ಮೂಲಮೆಂಬುದನರಿಯಿರೌ ಸಲೆ । ಬಾಳಿರೌ ನೀವೆಂದು ಶರಣಂ ಮಗಳಿಗರುಪಿದನು ॥ ೩೫ ॥

ತಪ್ಪನಾಡುವರಲ್ಲ ಶರಣರು । ತಪ್ಪಿದೆಂದನ್ಯರ್ಕಳೊರೆದಡ । ಮೊಪ್ಪುತಿಹ ರಭಿಮಾನವಿಲ್ಲದೆ ಸರಳಮನದಿಂದ ॥ ಬೊಪ್ಪನಾಡಿದ ಮಾತು ಮಗಳಿಗೆ । ತಪ್ಪೆನಿಸಿದುದು ಲೌಕಿಕವ್ರಜ । ಕೊಪ್ಪಿಗೆಯದಲ್ಲೆಂದು ಪೇಳುವರಾರ್ಥರಿತ್ರಿ ಯೊಳು ॥ ೩೬ ॥

ಶರಣರಂ ಪಾಲಿಸುವೆನಾನೆಂ । ದೊರೆದಡದು ಘುಸಿ ಲಘುವೆನಿಕ್ಕುಂ । ಪೊರೆಯಲಾನಸಮರ್ಥಳೆಂದೊಡೆ ನೆರೆದ ಪೆಣ್ಗಳೊಳು ॥ ಸರಿಯದೆನಿಸದು ಸಲಹೆ ನೆಂದೊಡೆ । ದುರಿತಮೆನಿಪುದೆನುತ್ತಮೇನುವ । ನೊರೆಯದಿರ್ದುದು ತಪ್ಪೆ ಶ್ರೀ ವೀರೇಶ್ವರಾತ್ಮಜೆಯ ॥ ೩೭ ॥

ಮಾತೆಯಗಲಿದಳೆಂದು ಚಿಂತಿಸ । ದೀ ತನುಜೆ ಪಿತೃಸೇವೆಯಂ ಪರಿ । ಪೂತಶಿವಪೂಜೆಯನು ಶುದ್ಧಾಚರಣೆಯಂ ಬಿಡದೆ ॥ ಖ್ಯಾತಿಮುಂಮಿಗೆ ಮಾಡ ತೊಡಗಿದ । ಳೋತು ತಾನುದ್ದೇಶವಿಲ್ಲದೆ । ತಾತನೊಪ್ಪುವವೊಲ್ಮೊದಲಿಗಿಂದತ್ಯಧಿಕಮೆನಿಸಿ ॥ ೩೮ ॥

ಪಾರಿವಂ ಶ್ಯೇನಕ್ಕೆ ವನಮದ । ವಾರಣಂ ಪಂಚಾನನಕ್ಕೆ ವಿ । ಚಾರ ಪರಸುಬ್ರಹ್ಮಚಾರಿ ನವಾಂಗನಾಮಣಿಗೆ ॥ ಧೀರನಪಯಶಕಗಿವವೊಲ್ಸಂ । ಸಾರಿಗಳ ಸಂಗಕ್ಕೆ ಬೆದರಿದ । ವೀರಶರಣಾಗ್ರಣಿಯ ಚರಣಾಬ್ಜವನು ಮರೆವುಗುವೇಂ ॥ ೩೯ ॥

ಅಂತು ಸಂಧಿ ೧೯ಕ್ಕೆ ಪದಗಳು ೧೧೮೯.

ಶಿವಂ.



ಶ್ರೀ ಸಂಗಮೇಶಾಯ ನಮಃ



## ಇಪ್ಪತ್ತನೆಯ ಸಂಧಿ ಪ್ರಾರಂಭ.

ಸೂಚನೆ ॥ ಚರಕುಲಕೆ ಕಾಯಕವನೊಪ್ಪಿಸಿ । ಮರುಳಿ ತಾಳ್ದು ಪ್ರಸಾದಘನತೆಯ । ನೊರೆದು ತೋರ್ದು ಯತೀಂದ್ರ ಗಿತ್ತಂ ಗುಡವನೀ ಶರಣಂ ॥ ಪಲ್ಲ ॥

ಪದ ॥ ದಧಿಯೊಳಡಗಿದ ಬೆಣ್ಣೆಯಂತಂ । ಬುಧಿಯೊಳಡಗಿದ ಸುಧೆಯ ವೊಲು ಬಹು । ವಿಧನಿಗಮಶಾಸ್ತ್ರಾಗಮಪುರಾಣಗಳೊಳಡಗಿರ್ದ ॥ ಅಧಿಕ ಧರ್ಮವ ಬೇರ್ಪಡಿಸಿ ಮೆರೆ । ದಧಿಕೃತಶ್ರೀಬಸವರಾಜಂ । ಮಧುಸಖಾರಿಯೆ ನಿನ್ನ ಚಿತ್ತಂಬರಿವನೀಯೆನಗೆ ॥ ೧ ॥

ನೆರೆ ವಿರಾಟ್ಪುರದಾ ಕುಮಾರೇ । ಶ್ವರಮಹಾಶಿವಯೋಗಿವರನೀ । ಶರಣ ನಿಗೆ ಮನವೊಪ್ಪಿ ನಂಬುಗೆಯಿಂದಿವನ ಬಳಿಗೆ ॥ ಬರುತಲಿರ್ದಂ ತೇನತೇನಂ ; ಪರಿಣಮಿಸುತಿರ್ದರ್ಬಿಡದೆ ಭಾ । ಸುರಶಿವಾನುಭವಪ್ರಸಂಗದೊಳುಭಯರಿನಿ ದಾಗೆ ॥ ೨ ॥

ವೀರಶರಣನ ವಚನಮಂ ಸುವಿ । ಚಾರಮಂ ಶ್ರುತಿತಂತ್ರಸನ್ನುತ । ಸಾರ ತರಶಿವಭಕ್ತಿವೃತ್ತಿಗಳೊನಪಿನಂದವನು । ವೀರಶಿವಮತನಿಷ್ಠೆಯಂ ಸಂ । ಸಾರ ದೃಢವೈರಾಗ್ಯದೊಂದೊ । ಯ್ಯಾರಮಂ ಕೇಳ್ದೀಕ್ಷಿಸುತೆ ಶಿವಯೋಗಿ ಹಿಗ್ಗು ವನು ॥ ೩ ॥

ಹಿಂದೆ ಕಲ್ಯಾಣದೊಳು ಲೀಲಾ । ವೃಂದಮಂ ತೋರಿದ ಬಸವನಂ । ಚೆಂದದಿಂ ಕೇಳುತ್ತಲಿರ್ದೆವು ಗ್ರಂಥಮುಖದಿಂದ ॥ ಇಂದಮಾನುಷಕೃತಿಗಳಂ ಪಲ । ವಂದದಿಂ ತೋರ್ಪೀ ಶರಣನೇ । ಸುಂದರಶ್ರೀಬಸವನಿವನಂ ಕಂಡೆ ವೆನುತಿಹನು ॥ ೪ ॥

ಜಗವನೆಲ್ಲವ ತೂಗಿ ನೋಳ್ಪನಿ । ತಗಣಿತಕಲಾಪೂರ್ಣಮತಿಯುಂ । ಸುಗುಣತತಿಯುಂ ಧರ್ಮರತಿಯುಂ ನಿರ್ಮಲತೆಯುಳ್ಳ ॥ ಮಿಗಿಲೆನಿಪ ಶ್ರೀಮದ್ವಿರಾಟ್ಪುರ । ದಗಸುತಾವರಯೋಗಿ ಪರಿಕಿಸಿ । ಬಗೆಯೊಳೊಪ್ಪಿದನೆಂದೊಡೀ ಶರಣಂಗೆ ಸರಿಯುಂಟೇ ॥ ೫ ॥

ಕಲಿತನಿವನಿಂ ಮೇಣ್ಸುಧಾರಣ । ಗಳನು ತಚ್ಛಿವಯೋಗಿಯೆಂದೊಡೆ । ನೆಲದೊಳತಿಶಯವಚನಮೆನಿಸದು ಶಾಸ್ತ್ರಪಂಙ್ಕ್ತಿಯೊಳು ॥ ಬೆಳಗುವಾಚರಣಗಳು ಶರಣನ । ಬಳಿಕೆಯೊಳು ಕಾಣುವವೆನುತ್ತಂ । ಸಲೆ ಮನಂಗಂಡೊರೆದು ಹಿಗ್ಗುತ್ತಿರ್ದನೊವ್ಮೊಮ್ಮೆ ॥ ೬ ॥

ವರದಶಿವಭಕ್ತಿಯ ಕುರುಹು ಭಾ । ಸುರಶಿವಜ್ಞಾನದ ತಿರುಳು ಬಂ । ಧುರವಿರಾಗದ ಸುಗ್ಗಿ ಶೈವಾನುಭವದೈಸಿರಿಯು ॥ ಪರಮಲಿಂಗಾಂಗಗಳ ಸಮರಸ । ದಿರವವಿರಳಾನಂದಗೃಹವೀ । ಪುರುಷನಿವನೆಂದಾಡುತಿರ್ದಂ ತಚ್ಚರೋತ್ತಮನು ॥ ೭ ॥

ಕೊಳವಿಯುದಕವನೀ ಮಹಾತ್ಮಂ । ಬಳಿಸುತಿರ್ದುದರಿಂದಮೊತನ । ನಿಳಯಕಂ ಶಿವಲಿಂಗಸಂತೃಪ್ತ್ಯರ್ಥಮಾ ಯತಿಯು ॥ ತಳರದಿರ್ದಡುಮಿವನ ಕಾಯಕ । ದಲಘು ಪಿಷ್ಟಾದಿಪ್ರಸಾದವ । ನೆಳಸಿ ಬೇಡುತ್ತಿರ್ದನತಿವಿಶ್ವಾಸಭಕ್ತಿಯಲಿ ॥ ೮ ॥

ಅವನ ಮನಕನುಸರಿಸಿ ಶರಣಂ । ವಿವಿಧಪಾಕಪದಾರ್ಥಚಯಮಂ । ತವೆ ಸಮರ್ಪಿಸುತಿರ್ದನಾತಗೆ ಬಂದ ಸಮಯದೊಳು ॥ ಅವಿರತಂ ಸತ್ಪಾನ್ನಮಂ ಕೊ । ಳ್ಳುವ ವ್ರತಂಬಿಡಿದಾ ಯತೀಂದ್ರಂ । ಸವಿವುತಿರ್ದಂ ಶರಣನಿತ್ತಾ ಜಡಪದಾರ್ಥವನು ॥ ೯ ॥

ಶರಣನಿತ್ತಾ ವಸ್ತುಚಯದೊಳು । ಧರಣಿಗೊಂದಣುಮುಂ ಸ್ರವಿಸದಂ । ತರಿದು ಮುದದಿಂದಟ್ಟು ಪಾಕಂಗೈದ ಪಾತ್ರದೊಳು ॥ ಮರವೆಯಿಂದಲುಮಿನಿಸುಳಿಯದಂ । ತರಸಿಯೆಲ್ಲವನುಂಡು ವಸನದಿ । ನೊರಸವೇಳುತ್ತಿರ್ದನಾತಂ ಸೇವಕರಿಗೊಲಿದು ॥ ೧೦ ॥

ಒಂದು ಪ್ರಸ್ತಾವದೊಳು ಕೆಲಚರ। ವೃಂದದೊಡನಾ ಪೊಳಲಿಗಾ ಯತಿ। ಬಂದು ಶ್ರೀಮದ್ವಾರದಪ್ಪನ ತೋಟದೊಳಗುಳ್ಳ॥ ಮಂದಿರದೊಳುಳಿದಿರುವದಂ ತಿಳಿ। ದೆಂದಿನಂತೆ ಪ್ರಸಾದವನಿವಂ। ತಂದವುಗಳಂ ಮಡುಗಲಿಕೆ ಪಾತ್ರಂಗಳಂ ಬೇಡೆ॥ ೧೧॥

ಒಡನೆ ನೋಡಿ ಕುಮಾರಯತಿಪಂ। ಸಡಗರದೊಳಾ ವಸ್ತುಚಯಮಂ। ಮಡುಗುವಡೆ ಶರಣಂಗೆ ಶ್ರಮವಹುದೆಂಬ ಮತಿಯಿಂದ॥ ಬಿಡದೆ ತತ್ಸಕಲ ಪ್ರಸಾದವ। ಮಡುಗಿಕೊಂಬೆವು ಜೋಳಿಗೆಯನೀ। ಮಡುಗಿರೆಂದಿವಗವನೊ ರೆಯಲಾಕ್ಷಣವೆ ಶಂಕಿಸದೆ॥ ೧೨॥

ತಚ್ಚರೇಂದ್ರನ ಸನ್ನಿಧಿಯೊಳೀ। ಸಚ್ಚರಿತ್ರಂ ಜೋಳಿಗೆಯನಿ। ಟ್ಟುಚ್ಚ ವಂಮಿಗೆ ನಮಿಸಿ ನಿಮ್ಮದು ನಿಮಗೆ ಮುಟ್ಟಿದುದು॥ ಮೆಚ್ಚಿದಿರಿ ನೀವಿಂದಿ ವರಿಗೆಂ। ದುಚ್ಚರಿಸಿ ಪೊರಬೀಳ್ದು ನಿಲ್ಲದೆ। ಚಚ್ಚರದಿನಿವನೋಡತೊಡಗಿದ ನೊಂದು ಪಥವಿಡಿದು॥ ೧೩॥

ಏನಿದತಿವಿಪರೀತವೆಮ್ಮ ಮ। ನೋನುರಾಗಸುವಚನಕರ್ಥವ। ತಾನು ಬೇರೆಸಗಿದನೆನುತೆ ಶಿವಯೋಗಿವರರೆಲ್ಲ॥ ಮಾನಸದೆ ಭಯಕೌತುಕಂಗಳ। ನಾನುತಂ ಬೆಂಬಳಿವಿಡಿದು ಸಂ। ಮಾನಿಗಳ್ಬಿಡದೋಡಿದರು ಪಾವುಗೆಗಳಂ ಬಿಟ್ಟು॥ ೧೪॥

ಹಾರುತಿರ್ದನಿವಂ ಮೃಗದವೊಲು। ಹಾರುತಿರ್ದತ್ತಿವನ ಕಿರುಜಡೆ। ಹಾರುತಿರ್ದುದು ಪೆಗಲೊಳುಳ್ಳಾ ಹರಕುಶಾಟಿಯದು॥ ಧೀರಸೌಮ್ಯಾಗ್ರಹಸು ಧೈನ್ಯೋ। ದ್ಗಾರದಿಂ ತೇಂಕುತೆ ಯತಿಗಳವ। ರಾರುತಿರ್ದರು ಹಿಂದೆ ಶರಣರೆ ನಿಲ್ಲಬೇಕೆಂದು॥ ೧೫॥

ತಿರುಗಿನೋಡದೆ ಮುಂದಕೋಡು। ತ್ತಿರುವ ಶರಣನ ಬೆಂಬಿಡದೆ ಕಡು। ಭರದೊಳೈತಂದಡ್ಡಗಟ್ಟುತ್ತೋರ್ವ ಯತಿವರನು॥ ತರುಬಿ ಓ ಶರಣ ನೆಯಿದೇನೀ। ತೆರದೆ ಪೋಪುದು ಸರಿಯೆ ಹಿಂದೈ। ತರುವರಾರೊಂದಿನಿಸು ಮಗುಳ್ದೀಕ್ಷಿಸು ಮಹಾಪಥದೆ॥ ೧೬॥

ಕರೆವುತೋಡುತ ಚರವರೇಣ್ಯರು । ಬರುವದನು ಲಕ್ಕಿಸದೆ ಪೋಪುದು । ಶರಣಲಕ್ಷಣವೇ ವಿಚಾರವನೆಲ್ಲಿ ಬಿಟ್ಟಿರುವೆ ॥ ಶರಣನಾದೊಡೆ ಚರವರರಿಗನು । ಸರಿಸಿ ನಡೆಯಲುಬೇಕು ಸುಮ್ಮನೆ । ತಿರುಗು ನೀನೆಂದೊತ್ತಿ ನುಡಿಯಲ್ಕೇಳ್ದೊಡನೆ ನಿಂದು ॥ ೧೭ ॥

ಬರುವ ಜಂಗಮುವರ್ಯರಂ ಪಿಂ । ದಿರುಗಿ ನೋಡಿ ಮನಂ ಬೆದರಿಹಾ । ಹರಹರಾ ತಪ್ಪಾಯ್ತು ಪ್ರಮಥರು ದಣಿದರೆಂದೆನುತ ॥ ಮರುಳಿಯುವರೊಡಗೂಡಿ ಮೌನಂ । ಬೆರೆದು ಮೊದಲೆಡೆಗೈದಿ ಕುಳಿತಂ । ಕರಕಮಲಮಂ ಮುಗಿದು ಕಿಂಕರಭಾವದಿಂದಿವನು ॥ ೧೮ ॥

ಶರಣರೇ ಧರಿಸಿರುವ ನಿಮ್ಮಯ । ಕರದ ಜೋಳಿಗೆಯಿದನೆಮಗೆ ನೀವ್ । ತಿರುಗಿಕೊಡಿರೆಂದಿಂದಪೇಕ್ಷಿಸಿ ಬೇಡಲಿಲ್ಲ ಗಡಾ ॥ ಕರುಣದಿಂದಂ ತಂದ ದಿನಸಂ । ಸುರುವಿಕೊಳ್ವೆವು ಮಡುಗಿರೆಂದೆವು । ಬರಿದೆ ನಿಮಗಾ ಶ್ರಮುವನೀಯಲು ಬಾರದೆಂದರಿದು ॥ ೧೯ ॥

ಅದಕೆ ನೀವಿಂತರಿದು ಕೊಟ್ಟಿರಿ । ಹದನವಲ್ಲವಿದರಸಿನೋಡಿರಿ । ಮೊದಲು ಮಹಿಮರು ಪಿಡಿದ ವೀರವ್ರತವನಾಚರಿಸಿ ॥ ತುದಿಗೆ ಮುಟ್ಟಿಸದಿರ್ದಡಿಳೆಯೊಳು । ಮದನಹರಭಕ್ತರ್ಕಳೊಲ್ವರೆ । ಇದು ತನಗೆ ಸಾಕಾಗಿರುವದೆಂದೂಹಿಸರೆ ಮತ್ತೆ ॥ ೨೦ ॥

ನಾವು ಕೊಟ್ಟೀ ಕಾಯಕವನೊ । ಲ್ದಾವು ಕಸುಕೊಂಡಿರ್ದೊಡಿದನಿ । ನ್ನಾವೆ ಧರಿಸುವೆವಾವು ಪಿಡಿದಿಹ ಸ್ವಮತಸೇವೆಯನು ॥ ನೀವು ಕೈಕೊಳಬೇಕದಾಗದೊ । ಡೀ ವಿಮಲಕಾಯಕವನೇ ಮಗು । ಳ್ದೀ ವಸುಂಧರೆಯಲ್ಲಿ ಮಾಡಲುಬೇಕು ಮೊದಲಂತೆ ॥ ೨೧ ॥

ಆವುದಕ್ಕನುಮತಿಸುವಿರೆನು । ತ್ತಾ ವಿರಾಟ್ಪುರವರಕುಮಾರಚ । ರಾವತಂಸಂ ಕೇಳಲೆಪ ಎಪ ವೀರಶಿವಮತದ ॥ ಸೇವೆಯಿವರಿಂದಾಗದಿದನೇ । ಕೈವುದುಚಿತಮೆನುತ್ತ ಮಣಿದೊಡ । ನಾ ವಿಮಲಕಾಯಕವನಾಂತೀ ಶರಣ ಭಾಸ್ಕರನು ॥ ೨೨ ॥

ತಂಡ ದಿನಸಂ ಮೆಲ್ಲನೆಲ್ಲವ । ಮುಂದವರ ಪಾತ್ರಂಗಳೊಳು ತಾ । ನಂದು ಮಡುಗಿ ಬಳಿಕ್ಕ ಕುಳಿತು ತದಾಸ್ಯಮಂ ನೋಡಿ ॥ ಕುಂದದುತ್ತಮ ಮುದ್ರೆಯಿಂದವಿ । ದೊಂದು ಪ್ರಮಥರ ಲೀಲೆಯುಲ್ರಿಪ । ಎಂದು ನುಡಿಯಲು ತಮಗೆ ಗುರುತೆಂದೊರೆದನಾ ಯತಿಯು ॥ ೩೩ ॥

ಆಗ ಬಸವೇಶ್ವರನ ಬಳಿಯೊಳು । ಹೀಗೆ ನಡೆವುತ್ತಿದ್ದವಂತ್ರೆಪ । ಭೋಗಿಭೂಷಪ್ರಮುಥರಾಟಮುದಲರತೋಟವೆಪ ॥ ಆಗಮುಪ್ರತಿಪಾದಿತೇಶ್ವರ । ಯೋಗಸುಖಶರನಿಧಿಯೊಳಾಳ್ವ ವಿ । ರಾಗಿಗಳ ಕೂಟಂ ಸುಧಾರಸದೂಟ ಮೆನಿಪುದೆಪಾ ॥ ೩೪ ॥

ಹರನ ಬಳಗದೊಳಾಡುವಾತನ । ಮರವೆ ದೆಸೆಗೆಟ್ಟೋಡುವದು ಮೇ । ಣರಿವು ತಲೆದೋರುವದು ಲಿಂಗಾಂಗೈಕ್ಯಭಾವನೆಯು ॥ ಸರಳಮೆನೆ ನೆಲೆಗೊಳ್ವು ದವನೊಳು । ನಿರತಿಶಯಸುಖರಾಜ್ಯವಿಭವಂ । ದೊರೆವುದಾತಂಗಾಗಳುಂ ಕೆಡದಂತೆ ಸಹಜಮೆನೆ ॥ ೩೫ ॥

ಘೋರಸಂಸಾರಾಟವಿಯೊಳಾ । ಚಾರಪಥಮಂ ಕಾಣದಲೆ ಬಲು । ಗಾರುಬಡುತಂ ತಿರುಗುವವನಂ ಚಿತ್ಕ್ರಿಯೆಗಳೆಂಬ ॥ ತೇರಿನೊಳು ಕುಳ್ಳಿರಿಸಿ ಕೊಂಡಗ । ಜಾರಮಣಸುಖನಗರಮಂ ನೆರೆ । ಸಾರಿಸುವದೀ ಭಕ್ತಶರಣ ಪ್ರಮಥಸಂಗಮಿದು ॥ ೩೬ ॥

ದುರಿತಮಂ ಕೆಡಿಸುವದು ಕರ್ಮಂ । ನೆರೆದ ವಿಕ್ಷೇಪವನು ಕೆಡಿಪುದು । ಹರನುಪಾಸನಮಾವರಣಮಂ ಕೆಡಿಸುತಿಹುದರಿವು ॥ ನರರ ಭವಕಂ ಮೂಲ ಮೆಂದೆನಿ । ಸಿರುವ ತದ್ದೋಷತ್ರಯವನತಿ । ಭರದೆ ಕೆಡಿಸುವದೊಂದೆ ಭಕ್ತ ಪ್ರಮಥಸಂಗಮದು ॥ ೩೭ ॥

ಕಡಿದಡುಂ ತಿಕ್ಕಿದಡುಮುಗ್ನಿಯ । ನಡುವೆ ಮಡುಗಿದೊಡುಂ ನಿಜ ಗುಣಂ । ಕೆಡದೆ ಸದ್ಗಂಧಂಗುಡುವ ಚಂದನತರುವಿನಂತೆ ॥ ಬಡಿದಡುಂ ಕಾಳ್ಗೆಡೆದಡುಂ ಬೈ । ದಡುಮುರುನಿಜೋದಾತ್ತವೃತ್ತಿಯ । ಬಿಡದೆ ಮತಿ ಗೊಡುವವಮಲಮಹಿಮರ ಸಂಗಕೆಣೆಯುಂಟೇ ॥ ೩೮ ॥

ಭವಗಳಂಜಿಕೆಯಿಲ್ಲಮಿಳೆಯೊಳು । ಭವಗಳೇಸೊದಗಿದಡುವೊದಗಲಿ । ಭವಭವಗಳೊಳು ಪ್ರಮಥಸಂಗಂ ಸಮನಿಸಿದಡಾಯ್ತು ॥ ಭವಿಗಳೊಡನಾಟ ದೊಳು ಬೀಳುವ । ಭವಕೆ ಮುನಿವುದು ಯೋಗ್ಯವೀ ಶ್ರೀ । ಪ್ರವಿಮಲರ ಸಂಗದೊಳು ಬಾಳುವ ಭವವು ಬೇಡೇಕೆ ॥ ೭೯ ॥

ಮೊದಲೆ ಹುಟ್ಟಲುಬಾರದುರ್ವಿಯೊ । ಳುದಿಸುವೊಡೆ ಶಿವಭಕ್ತರಾಳ್ಗಳ । ಸದನದೊಳು ಮಗನಾಗಿ ಪುಟ್ಟಲುಬೇಕು ನಯದೊಡನೆ ॥ ಉದಿಸಿದೊಡೆ ಮುಂದಳಿಯಲೇಬಾ । ರದು ಮಡಿವೊಡೀ ಪ್ರಮಥವರ್ಯರ । ಪದಸರೋರುಹ ಸಂಗದೊಳು ತಾಂ ಸಾಯಬೇಕೊಪ್ಪಿ ॥ ೩೦ ॥

ಇಂತು ಸತ್ಸಂಗದ ಮಹಿಮೆಯು೦ । ಸ್ವಾಂತಮಲರೆ ಚರೇಂದ್ರರೊಳು ನಿ । ಶ್ಚಿಂತೆಯಿಂ ಬಣ್ಣಿಸುತಿರುವ ಸಮಯದೊಳು ನೆನಪಾಗಿ ॥ ಸಂತಸದೊಳಿಪ ತಮ್ಮ ಘನತರ। ಶಾಂತಲಿಂಗಾರ್ಚನೆಗೆ ಪೊಳ್ತಾ । ಯ್ತುಂತರಿಸದೇಳುವದೆನುತ್ತವ ನೈದಿದಂ ಮನೆಗೆ ॥ ೩೧ ॥

ಮುಂದೆ ಕೆಲದಿನಗಳಿದ ಬಳಿಕಿವ । ನೆಂದಿನಂತಾ ಪಾಕವಸ್ತುವ । ತಂದು ತಚ್ಚರವರರಿಗೀಯಲವರ್ಕಳದನಟ್ಟು ॥ ಚೆಂದದಿಂದುಂಡುಳಿದ ಪಾಕವ । ಹೊಂದಿಕೆಯುದಪ್ಪಂತೆ ಮುಚ್ಚದೆ । ಪಿಂದಿನ ವಟೂತ್ತಮರು ಸೇವಕರೆಲ್ಲರೊಗ್ಗಾಗಿ ॥ ೩೨ ॥

ಒಂದು ವೀರೋತ್ಸವವನೀಕ್ಷಿಸ । ಲೆಂದು ತತ್ಪುರಪಣ್ಯವೀಧಿಗೆ । ಬಂದರತ್ತ ಬಿಡಾಲವೊಂದಾತುರದೊಳೊಳಪೊಕ್ಕು ॥ ತಿಂದುದೊಂದಿನಿಸಾ ಪ್ರಸಾದವ। ಪಿಂದಿರುಗಿ ಬಂದತಿವಿಷಾದವ। ಪೊಂದಿ ತಪ್ಪಾಯ್ತೆಂದು ಮರುಗಿದ ರಾದುದನು ನೋಡಿ ॥ ೩೩ ॥

ಶರಣರಂತರ್ದೃಷ್ಟಿಯಿಂದಿದ। ನರಿದು ಪರಿತಂದಾ ಕುಮಾರೇ । ಶ್ವರ ಮುಖಾಖಿಲ ಜಂಗಮಾಗ್ರೇಸರಸಮೂಹಕ್ಕೆ ॥ ಎರಗಿ ನಿಂದು ತದಾಜ್ಞೆಯಿಂ ಕಿಂ । ಕರತೆಮಿಗೆ ಮಂಡಿಸಿ ರದದ್ಯುತಿ । ಮಿರುಗೆ ಬಣ್ಣಿಸತೊಡಗಿದಂ ಪರಮ ಪ್ರಸಾದವನು ॥ ೩೪ ॥

ಕಾಯವೋಹಿಗಳೋಗರಕ್ಕಂ । ಬಾಯನೀರ್ಗರೆವರು ತ್ರಿವಸ್ತುನಿ । ಕಾಯವೋಹಿಗಳೊಪ್ಪಿ ಬಾಯ್ದೆರೆವರು ಪ್ರಸಾದಕ್ಕೆ ॥ ಕಾಯಕೆಸಗಿದುದನ್ನ ಮೆನಿಪುದು । ಕಾಯಜಹರಾರ್ಥಂ ನೆಗಳ್ದ ನಿ । ರ್ಮಾಯದೋಗರಮೇ ಪ್ರಸಾದಮೆನಿಕ್ಕುಮಜಡಮಿದು ॥ ೩೫ ॥

ತ್ರಿವಿಧವಸ್ತುವಿಗಾಗಿ ಗಳಿಸಿದ । ವಿವಿಧಸುಪದಾರ್ಥಾಳಿಯಾ ವ । ಸ್ತುವಿಗೆ ಸಲ್ಲುತ್ತಿರ್ಪುದದುವೆ ಪ್ರಸಾದಮಾಗುವದು ॥ ಭವಿಗಳಂತುಪಜೀವನಾರ್ಥಂ । ಶಿವನ ಭಕ್ತರ್ಕಳ್ಪದಾರ್ಥೌ । ಘವನು ಸಂಗ್ರಹಿಸರು ನಿಮಿರ್ಚರ್ತತ್ಪ್ರಯತ್ನವನು ॥ ೩೬ ॥

ಅನಲಸಂಸ್ಕೃತಿಯಿಂದ ಬೆಣ್ಣೆಯ । ದಿನಿದುಮಿಗೆ ಘೃತಮಪ್ಪವೊಲುಚಿ । ಧ್ಘನದ ಲಿಂಗಮುಖಪ್ರಸಂಸ್ಕೃತಿಯಿಂ ಪದಾರ್ಥಮದು ॥ ವಿನುತಸುಖದ ಪ್ರಸಾದಮಪ್ಪುದು । ನೆನೆಯೆ ತುಪ್ಪಂ ಮಗುಳ್ದು ಬೆಣ್ಣೆಯ । ದೆನಿಸದಂತೆ ಪ್ರಸಾದಮಿನ್ನು ಪದಾರ್ಥಮಾಗದದು ॥ ೩೭ ॥

ಕೊಡುವೆನಾನೆಂಬೊಂದು ಹಮ್ಮುಂ । ಪಡೆವೆನಾನೊಂಬೊಂದು ಬಿಂಕು । ಳ್ಪೆಡೆಯೊಳರಿಯೆ ಪ್ರಸಾದಮದು ಸಿದ್ಧಿಸದು ಕಡೆತನಕ ॥ ಕೊಡುವಗಾಗಲಿ ಪಡೆವಗಾಗಲಿ । ದೃಢಸಹಜಸದ್ಭಕ್ತಿಕಲೆಯು । ಳ್ಪಡಮುವಂಗಿದು ಸಿದ್ಧಿಕುಂ ಬರಿನಟಸಿ ಫಲವೇನು ॥ ೩೮ ॥

ಶಿವನ ಕಾರುಣ್ಯವೆ ಪ್ರಸಾದಂ । ತ್ರಿವಿಧವಸ್ತುಗಳಿಂದೊರೆವುದಿದು । ಶಿವಮತೀಯವ್ರಾತಕಲ್ಲದೆ ಸಲ್ಲದುಳಿದರ್ಗೆ ॥ ಕವಿದ ಮೋಹದ ಮೂಲಮನ್ನಂ । ವಿವಿಧಕರ್ಮಗಳಿಂದೊರೆವುದಿದು । ಭುವನದೊಳು ಸಲ್ಲುವದು ನರಪಶ್ವಾದಿ ಜೀವರಿಗೆ ॥ ೩೯ ॥

ಭಕ್ತಿಮೂಲಂ ಸುಪ್ರಸಾದಂ । ಭುಕ್ತಿಮೂಲಮದೋಗರಂ ಪರ । ಭಕ್ತಿಯುಕ್ತಮನಾದಿಯಕ್ಷಯಮುತ್ಪ್ರಸಾದಮಿದು ॥ ಶಕ್ತಿಮಯಮಾಯಾಪ್ರಪಂಚಾ । ಸಕ್ತಿಯುಂ ಪೆರ್ಚಿಸುವದನ್ನಂ । ವ್ಯಕ್ತಮೆನಲದಕೆಂಜಲುಂಟಲ್ಲೀ ಪ್ರಸಾದಕ್ಕೆ ॥ ೪೦ ॥

ಹೊಳೆವ ಶುಕ್ತಿಜ್ಞಾನದಿಂ ಕಂ । ಗೊಳಿಪ ರಜತಾಧ್ಯಾಸಮುಡಗುವ। ವೊಲು ಪ್ರಸಾದಜ್ಞಾನದಿಂದ ಪ್ರಸಾದದೊಳು ತೋರ್ಪ ॥ ಹಲವು ಸುಪದಾರ್ಥ ಭ್ರಮೆಯು ತಾ । ನಳಿವುದೀ ಭ್ರಾಂತಿಯನು ಶರಣರು । ತುಳಿದು ನಿಚ್ಚಂ ನಲಿವ ರೊಲಿದು ಪ್ರಸಾದಭೋಗದೊಳು ॥ ೪೧ ॥

ಜನಕಮೆನಿಸುವದೀ ಪ್ರಸಾದಂ । ಜನನಿಯೆನಿಪುದು ಭಕ್ತಿಯಿವರೊಳು । ಜನಿಸುವದು ಪರಮುಕ್ತಿಕನ್ನಿಕೆಯೊಂದೆ ತಾಣದೊಳು ॥ ಅನವರತಮಿವು ಮೂರುಕೂಡಿಯೆ । ಬಿನದಿಸುವವಗಲಲ್ಕೆಬಾರದ । ಘನತೆಯಂ ಪಿಡಿದಿಹವು ಪರಮೇಶತೆಯನಾಂತಿಹವು ॥ ೪೨ ॥

ಹಲವು ಮಾತೇನೀ ಪ್ರಸಾದವೆ । ವಿಲಸದೀಶಂ ಭಕ್ತಿಯೇ ಸ । ಮ್ಮಿಳಿತ ಪರಶಿವಶಕ್ತಿಯಿವುಗಳೊಳಿಲ್ಲ ಭೇದಮದು ॥ ತಿಳಿಯಲವುಗಳೊಳುಳ್ಳ ಧರ್ಮ್ಮಂ । ಸಲೆಸಮಾನತ್ವಂಬಡೆದು ಚಂ । ಚಲಿಸದಿರ್ಪ್ಪುದು ಮಂಗಲಪ್ರದ ಮಾಗಿ ಮೇಲೆನಿಸಿ ॥ ೪೩ ॥

ಕರಮಧಿಷ್ಠಾನಪ್ರಸಾದದೊ । ಳಿರುವದೀಶ್ವರಭಕ್ತಿ ತನ್ಮಯ । ಪರಮ ಲೀಲೆಯನೆಸಗುತಂ ಸ್ವೇಚ್ಛಾನುಸಾರಮೆನೆ ॥ ಅರಿಯಲಿನ್ನು ಪ್ರಸಾದದಿಂದೀ । ಶ್ವರನ ಭಕ್ತಿ ಸುಭಕ್ತಿಯಿಂ ಬಂ । ಧುರಮುದೆನಿಪ ಪ್ರಸಾದಮೊದಗುವ ದೆಂದೊರೆವುತಿರಲು ॥ ೪೪ ॥

ಶರಣರಿಂದು ಪ್ರಸಂಗವಿಲ್ಲದ । ಲೊರೆವರೇಕೆ ಪ್ರಸಾದದಿರವಂ । ದುರೆ ಕುಮಾರೇಶ್ವರನು ಯೋಚಿಸುತಿರ್ದನನಿತರೊಳು ॥ ದೊರಕಿದಿಂದಿನ ಸುಪ್ರಸಾದಂ । ಸರಿಯೆನಲ್ಸಲ್ಲಿದುದೊ ತಮ್ಮಯ । ಪರಮಲಿಂಗಕ್ಕೆಂದು ಕೇಳ್ದನು ಶರಣನಾ ಯತಿಯಂ ॥ ೪೫ ॥

ಸಲ್ಲಿದುದು ಸರಿಯಾಗಿಯೆನುತವ । ನುಲ್ಲಸಿತಮುಖನಾಗಿ ಪೇಳ । ಲ್ಕೆಲ್ಲಮುಂ ಸರಿಯಾಗಿ ಸಲ್ಲದುದೇನೆಪ ಎನುತ್ತ ॥ ಬಲ್ಲಶರಣಂ ಮತ್ತೆ ಬೆಸಗೊಳ । ಲಲ್ಲಿ ಸಂಶಯಮುದಿಸಿ ವಟುಗಳ । ನೆಲ್ಲರಂ ತನ್ನೆಡೆಗೆ ತಜ್ಞರ ಪುಂಗವಂ ಬರಿಸಿ ॥ ೪೬ ॥

ಇಂದು ಬಂದ ಶಿವಪ್ರಸಾದವ । ನೊಂದಿನಿಸು ಬಿಡದಂತೆ ಲಿಂಗ । ಕ್ಕಂದಮೆನೆ ಸಲ್ಲಿಸಿದಿರೋ ದಿಟವಾಗಿಪೇಳ್ದಿಮ್ಮ ॥ ಸಂದೆಗಮನೋಡಿಸಿರಿ ನೀವಿಂ । ತೆಂದು ಕೇಳಲ್ಕೊಡನೆ ತದ್ವಟು । ವೃಂದಮುಗಿವುತ್ತೊಬ್ಬರೊಬ್ಬರ ಮೋರೆಯಂ ನೋಡಿ ॥ ೪೭ ॥

ಜನಿಸಿತಹುದಪರಾಧವೆಮ್ಮಿಂ । ದೆನುತವರು ಮಾಜದೆ ನಿಜಸ್ಥಿತಿ । ಯನು ಸವಿಸ್ತೃತವಾಗಿ ವಿಜ್ಞಾಪಿಸಲು ಕೇಳ್ದವನು ॥ ಮನದೆ ಕಳವಳ ಗೊಂಡು ಖೇದಾ । ನನದೊಳಿದಕೇಗೈವುದೀ ಮಹಿ । ಮನ ಪ್ರಸಾದದ ಕಟ್ಟು ಸಡಲಿದುದೆಂದುಸುರನಿಕ್ಕಿ ॥ ೪೮ ॥

ನಿಮ್ಮ ನೇಮುವನರಿದರಿದುಮುದ । ನೊಮ್ಮನದೆಕಾಪಾಡದಿತ್ತಂ । ಸುಮ್ಮನೇ ಕುಳ್ಳಿರ್ದುದು ಮತಿಭ್ರಮಣಕಾರ್ಯವಿದು ॥ ಹೆಮ್ಮೆಯಿಂದೆಮ್ಮವರು ಮಾಡಿಹ । ರೆಮ್ಮವರು ಮಾಡಿರ್ದ ತಪ್ಪುಗ । ಳೆಮ್ಮವಲ್ಲವೆ ಬೇರೆ ಭಾವಿಸಲೇಕೆ ನಿಜ ವಾಗಿ ॥ ೪೯ ॥

ಸಾರತರದಷ್ಟಾವರಣದುಪ । ಚಾರಲಕ್ಷಮದಿಲ್ಲದೆ ನಿರಾ । ಭಾರಿ ವೇಷವ ಬರಿದೆ ಧರಿಸಿ ಮಹತ್ವಮಂ ಬಯಸಿ ॥ ವೀರಶೈವಾಚಾರಮಂ ಮಿತಿ । ಮೀರಿ ನಟಸುತ್ತಿರುವೆಮಗೆ ಮಿಗೆ । ಮಾರವೈರಿಪ್ರಮಥರಿಂ ಮನ್ನಣೆಯೊದಗಿ ದಪುದೇ ॥ ೫೦ ॥

ಚರಕೆ ಸಲ್ಲುವ ಸುಪ್ರಸಾದವ । ಮರವೆಯೊಳು ತಿಂದುದು ಬಿಡಾಲಂ । ಪರಮಲಿಂಗಕೆ ಸಲ್ಲುವೆಮ್ಮ ತನುತ್ರಯಂಗಳನು ॥ ಗುರುವಿನನನುಗ್ರಹ ದೊಳತಿದು । ರ್ಧರದುರಿತಮದು ತಿಂಬುದದರಿಂ । ಕರುಣಿಸಿಂದಪರಾಧಮಂ ಮರೆದೆಂದನಾ ಯುತಿಯು ॥ ೫೧ ॥

ಜಂಗಮಂ ಕ್ಷಮಿಸೆಂದು ಕೇಳ್ದುದು । ತುಂಗಶಿವದಾಸೋಹಮೆಂಬಜ । ನಂಗಳಿಗೆ ಬಲುಭಾರವೆಂದರಿದೆಪ ಎಪ ಎನುತ್ತ ॥ ಮಂಗಲದಶರಣಂ ಕಿವಿಗ ಳಂ । ಪಿಂಗದಲೆ ತಾಂ ಮುಗಿದುಕೊಂಡಂ । ದಿಂಗಿದುತ್ಸವದಿಂ ಮಗುಳ್ದನಲ್ಲಿಂ ನಿಜಾಶ್ರಮಕೆ ॥ ೫೨ ॥

ಬಳಿಕ ತದ್ವಟುವರರ ಸಮ್ಮುಖ । ದೊಳು ವಿರಾಟ್ಪುರಚರವರಾನ್ವಯು । ತಿಲಕನಾತ್ಮದೆ ತಳಮಳಂಬಡೆದಿದರ ನಿಷ್ಕೃತಿಯ ॥ ಹೊಲಬದೇನೆಂತೆಂದು ಯೋಚಿಸಿ । ತಳುವದವರಿಗೆ ಬುದ್ಧಿಯಂ ಪೇ । ಳ್ದಲಸದೆಸಗಿದನೊಂದು ಲಕ್ಷ ಜಪಂಗಳಂ ಬಿಡದೆ ॥ ೫೩ ॥

ಮತ್ತಮೊಂದುದಿನಂ ಶರಣನೀ । ಹೊತ್ತು ನೀಂ ಲಿಂಗಾರ್ಪಣಕ್ಕಂ । ಪತ್ತುಮಂದಿಶಿವಪ್ರಮಥರಂ ಕಳಿಸಬೇಕೆಂದು ॥ ಉತ್ತಮಕುಮಾರೇಶ ನಿಂದಂ । ಗೊತ್ತುಮಾಡಿ ತೆರಳ್ದನಾಲಯ । ಕಿತ್ತತದ್ಯತಿಯೊಡನೆ ಬಂದಿ ರ್ದೋರ್ವ ಸದ್ಭಕ್ತಂ ॥ ೫೪ ॥

ಶರಣರ ಪ್ರಸಾದಕ್ಕೆ ನಾನುಂ । ತೆರಳುವೆನು ಪೋಗುವ ದಶಗಣೋ । ತ್ಕರದೊಡನೆಯೆನ್ನಂ ಕಳಿಸಬೇಕೆಂದು ವಿನಯದೊಳು ॥ ವರಕುಮಾರಚರಾವ ತಂಸಂ । ಗೆರಗಿ ಬಿನ್ನಯಿಸಲು ನಿಯಮದಿಂ । ದರಿದು ಪತ್ತೇಮಂದಿಗೊರೆ ದಿರುವರು ಶರಣರಿಂದು ॥ ೫೫ ॥

ಅವರ ನಿಯಮಕೆ ಮಿಕ್ಕಿ ನೀಂ ಪೋ । ಗುವದನುಚಿತಂ ಬೇಡ ಬಿಡು ತ । ತ್ಪ್ರವಿಮಲಂ ಬೇಡಿದೊಡೆ ನಿನ್ನಂ ನಾಳೆ ಕಳಿಸುವೆವು ॥ ತವಕಿಸದಿರೆಂದೆರಡು ಬಾರೆ ನಿ । ರವಿಸಿದಾ ಯತಿವರರ ವಚನ । ಕ್ಕವನು ಸೈತಿರದೈದಿದನು ತದ್ಗಣ ಗಳೊಡನೆಳಸಿ ॥ ೫೬ ॥

ಬಂದ ಭಕ್ತನನುಣಿಸದಲೆ ತಾಂ । ಪಿಂದಕೆಂತಟ್ಟಿದಪನೀಕ್ಷಿಸಿ । ಕುಂದದಾ ಗಣವರ್ಯರೊಡನವಗೀ ಮಹಿಮನಾಗ ॥ ಒಂದಿನಿಸು ಪರಮ ಪ್ರಸಾದವ । ನಂದದಿಂದೆಡೆಮಾಡಲು ಮನಂ । ದಂದು ಭುಂಜಿಸತೊಡಗಿದಂ ಬಹುಧನ್ಯನಾನೆನುತ ॥ ೫೭ ॥

ವೀರಮಾಹೇಶರ್ಕಳೂಟಂ । ತೀರಿದಡುಮಿೂ ಭಕ್ತನೂಟಂ । ತೀರ ಲಿಲ್ಲುಂಡುಂಡು ಬಲು ಸಾಕಾಗಿ ತಲೆಗೊಡಹಿ ॥ ಮಿೂರಿತಿದಕೇಗೈವುದಾಂ ಬರ । ಬಾರದಾದತ್ತಾ ಚರಾಜ್ಞೆಯ । ಮಿೂರಿ ಬಂದುದರಿಂದಮಿಂತಾಯ್ತೆನುತವಂ ಬೆದರಿ ॥ ೫೮ ॥

ಮೃಡಶರಣರೆಡೆಮಾಡಿರುವ ಬೆ । ಟ್ಟಡಿಕೆಯನಿತು ಪ್ರಸಾದವದು ಕೈ । ಬಿಡದೆ ಮಾನಂಗೊಳ್ಳುವೆಂದತ್ತಿತ್ತ ಹೊರಳುತ್ತ ॥ ಬಿಡಲಿಕಾಗದೆ ಮೆಲಿಯ ಲಾಗದೆ । ಮಿಡುಕುತೇನುವನಾಡಲರಿಯದೆ । ಪಡುವ ಶ್ರಮಮಂ ತಿಳಿದು ಶರಣಂ ಸಾರ್ಕೆವಂದ್ಯೆದೆ ॥ ೫೯ ॥

ರದನದೀಧಿತಿಯುಣ್ಮಲೇಕೆಪ । ಇದು ನಿಮಗೆ ಪೆರ್ಚಾದುದೇಂ ಲೋ । ಕದೊಳು ಬಲುಪೆರ್ಚಾಗಬಾರದು ಪೆರ್ಚಿಗಾದುದುದು ॥ ಸದಮಲತ್ವಕ್ಕಿಂತು ಭಾರಂ । ಬೆದರಬೇಡೆಪ ಇದು ಪ್ರಸಾದಂ । ಮುದದೊಳುಣ್ಣೆಪ ಪೋಪುದೆಂದಪ್ಪಣೆಗೊಡಲ್ಕೊಡನೆ ॥ ೬೦ ॥

ಒಂದು ಕಿರಿದುತ್ತಾದುದದನೊ । ಳ್ಪಿಂದ ಭುಂಜಿಸಿ ಗೆಲಿದೆನಾನಿಂ । ದೆಂದು ತಾನಿರ್ದಾ ಕುಮಾರೇಶಾಂಘ್ರಿಸನ್ನಿಧಿಗೆ ॥ ಬಂದನೀ ಮಹಿಮೆಯನು ನೋಡಿದ । ಮಂದಿಯಿಂ ಕೇಳ್ದವರು ಪರಮಾ । ನಂದಮುಂಮಿಗೆ ಪೊಗಳ್ದರತಿಶಯಮೆನುತ ಮತ್ತೊಮ್ಮೆ ॥ ೬೧ ॥

ಪರತರಶ್ರೀಮತ್ಕುಮಾರೇ । ಶ್ವರನು ತಾನೈತಂದು ಸೊನ್ನಲ । ಪುರದೊಳಾ ಶಿವಯೋಗಮಂದಿರಭಿಕ್ಷೆಯೆಸಗುತಿರೆ ॥ ಶರಣನಾ ಯತಿಪನನು ನಿಜಮಂ । ದಿರಕೆ ಕರತಂದೊಂದು ರೊಕ್ಕದ । ಪಿರಿಯಗಂಟಂ ಪದೆದೊಳಗಣಿಂ ತಂದು ಮುಂದಿಟ್ಟು ॥ ೬೨ ॥

ಇವರಕಾಣಿಕೆ ಸಲ್ಲಲೆಂದು । ತ್ತವದೊಳೆರಗಲು ತಚ್ಚರೇಂದ್ರಂ । ಭುವನಸನ್ನುತ ನಿಮ್ಮ ಕರುಣವೆ ಸಾಕು ಧನವೇಕೆ ॥ ಶಿವನಭಕ್ತರ್ಕೊಡುವರೀ ವಿ । ತ್ತವನು ಕೊಡುವದು ಬೇಡ ನಿಮ್ಮಯ । ಭವನಮಿದು ಶಿವಯೋಗಮಂದಿರವಲ್ಲವೇ ಎನಲು ॥ ೬೩ ॥

ಅವನಿಯೊಳು ಶಿವಯೋಗಮಂದಿರ । ದವರು ತಚ್ಛಿವಯೋಗಮಂದಿರ । ಕವಿಕಲಸಹಾಯವನು ಮಾಡಲುಬಾರದೇನಪ್ಪಾ ॥ ಶಿವನವರು ಶಿವಕಾರ್ಯಕಂ ಮಾ । ಡುವದೆ ಕರ್ತವ್ಯಂ ಪರಿಗ್ರಹಿ । ಸುವದುಚಿತವೆಪ ಕೊಳ್ಳಿರೆಪ ಬಿಡಬಾರದೆಪ ಎನಲು ॥ ೬೪ ॥

ಶರಣರಿಚ್ಛೆಯನಿದನುಪೇಕ್ಷಿಸ । ದಿರುವದೇ ಕಲ್ಯಾಣಪಥವೆಂ । ದರಿದು ಯತಿಪಂ ತದ್ಧನಂಗೊಂಡುಳಿದೆಡೆಗೆ ಬಂದು ॥ ಹರುಷದಿಂ ಗಂಟುಚ್ಚಿಯೆಣಿಸಲು । ಮೆರೆದವವು ಬರಿದುಡ್ಡುದಮ್ಮಡಿ । ಚೆರೆದು ರೌಪ್ಯಕವೊಂದು ಪದಿಮೂರಾಣೆರೊಕ್ಕಗಳು ॥ ೬೫ ॥

ಇದು ಮಹಾಮಹಿಮನ ಕರುಣದಿಂ । ದೊದಗಿಹುದು ಶಿವಯೋಗಮಂದಿರ । ಕಿದುವೆ ಸತತಂ ಮೂಲಧನಮಾಗಿರಲಿಯೆಂದೆನುತ ॥ ಪದುಳದಿಂದ ಕುಮಾರಯತಿವರ । ನದನು ತಂದು ವಿಧಾನದಿಂ ಪೂ । ಳಿದನು ತಚ್ಛಿವಯೋಗಮಂದಿರದಲ್ಲಿ ಖ್ಯಾತಮೆನೆ ॥ ೬೬ ॥

ಒಂದು ದಿನಮಧ್ಯಾಹ್ನದೊಳು ನಿಜ । ಮಂದಿರದೊಳೊಂದಂ ತಿಳಿದು ಭರ । ದಿಂದ ಬಲು ಸವಿಯುಳ್ಳ ಗಂಡೋಲವನು ತಕ್ಕೊಂಡು ॥ ಬಂದನೇಳ್ದು ಕಿರೀಟಮಠಕಾ । ನಂದಮುಂಮಿಗೆ ಬಿಸಿಲಿಗಳುಕದೆ । ಕಂದದರ್ಪಣಕಿಂದ ಮೊದಲೀ ಶರಣಪುಂಗವನು ॥ ೬೭ ॥

ಆ ಸಮಯದೊಳು ನಿಜಗುಣಾಖ್ಯಜ । ರೇಶನುರೆ ಕೆಲಭಕ್ತರೊಡನು । ಲ್ಲಾಸಮುಂಮಿಗೆ ಬೆಳಸಿಯಂ ಸವಿವಾಶೆಯಿಂ ಬಿಡದೆ ॥ ಭಾಸುರೋರ್ವರೆಗೈದೆ ಪೊರಮ । ಟ್ಟಾ ಶಕಟಮಂ ಪತ್ತುತಿರಲವ । ಗೀ ಶರಣನಾ ಬೆಲ್ಲಮಂ ಕೊಟ್ಟೆರಗಿದಂ ಮುದದೆ ॥ ೬೮ ॥

ಬೆಲ್ಲವನು ಕೊಟ್ಟುದುದಿದೇಕೆಂ । ದೆಲ್ಲರೆದುರೊಳು ಕೇಳೆ ಬೆಳಸಿಯ । ಮೆಲ್ಲಲೆಂದೊಲೆದಿಂದು ತಾವ್ಪೊರಮಟ್ಟಹುದರಿಂದ ॥ ಸಲ್ಲಿಸಲುಬೇಕಾಯ್ತಿದನೆನು । ತ್ತೊಳ್ಪಿಮಾತಂ ಪೇಳಲಿದು ನಿಮ । ಗೆಲ್ಲಿಯೆಂತರಿಯಿತ್ತೆನುತ್ತಂ ಕೇಳ್ದನಾ ಯತಿಯು ॥ ೬೯ ॥

ಮನೆಯೊಳಂತದು ತಿಳಿದುದೆಂದತಿ । ವಿನಯದಿಂದಂ ಬಿನ್ನಯಿಸಲೀ । ತನ ವಚನಮಂ ಕೇಳ್ದು ನೆರೆದವರಚ್ಚರಿಯನಾಂತು ॥ ಮನವೊಲೆದು ದಿವ್ಯಜ್ಞನಿವನೆಂ । ದನುವರಿದು ನುತಿಗೈದರೀ ಸ । ಜ್ಜನಮನೋಜಲರುಹಮರಾಳನ ನಮಲಮತಿಯಿಂದ ॥ ೭೦ ॥

ಗುರುವಿನೊಳು ಲಿಂಗದೊಳು ಜಂಗಮ । ವರನೊಳೊಂದೇಬುದ್ಧಿಯಿಂದಂ । ನಿರುತಮಿನಿಸುಪ್ರಮಾದವಿಲ್ಲದೆ ವರ್ತಿಸಿ ಸಮಂತು ॥ ಮಿರುಗುತಿಹ ತಚ್ಚಿತ್ಪ್ರಕಾಶಂ । ಪರತರೇಪ್ಸದೊಳೆಸಗಿಯೊಳಹೊರ । ಗೆರಡೆನಿಸದಾನಂದಿಸುವ ವೀರಂಗೆ ಮಗನಾನು ॥ ೭೧ ॥

ಅಂತು ಸಂಧಿ ೨೦ಕ್ಕೆ ಪದಗಳು ೧೨೬೦.

ಶುಭಂ ಭೂಯಾತ್.



ಶ್ರೀ ಪಂಡಿತಾಚಾರ್ಯಾಯ ನಮಃ



## ಇಪ್ಪತ್ತೊಂದನೆಯ ಸಂಧಿ ಪ್ರಾರಂಭ.

ಸೂಚನೆ ॥ ಚೇರೆ ವಿಷಯವನೆನೆಯದೆ ಚಿದಾ । ಕಾರ ಲಿಂಗಸ್ಮರಣದಿಂದೀ । ವೀರನಾಮಕಶಿವಶರಣನಡಗಿದನು ಲಿಂಗದೊಳು ॥ ಪಲ್ಲ ॥

ಪದ ॥ ನಿರುಪಮಾನಂ ನಿರ್ವಿಕಲ್ಪಂ । ನಿರಶನಂ ಪ್ರಣವಸ್ವರೂಪಂ । ನಿರಧಿಕಂ ನಿಷ್ಕಲನನಾದಿಜ್ಯೋತಿ ನಿಶ್ಚಲನು ॥ ನಿರಘನನವದ್ಯಂ ಚಿದಭ್ರಂ । ಪರಮನಿರ್ವಾಸನನನಂತಂ । ನಿರವಯವನಾನಂದಶರಧಿ ನಿರಂಜನಂ ಪೊರೆಗೆ ॥ ೧ ॥

ಧರಣಿ ಪಾವನಮುಪ್ಪ ಮಹಿತಾ । ಚರಣೆಯಿಂದಿರೆ ಲೋಕಯಾತ್ರೆಯ । ಪರಿಸಮಾಪ್ತಿಯ ಕಾಲಮಂ ಬಗೆದೀ ಕೃಪಾಕರನು ॥ ತೊರೆದನೊಮ್ಮಿಂದೊಮ್ಮಿಗಂ ನಿಜ । ಪರಮಕಾಯಕಸಂಪದವನಿದ । ನರಿದು ಶಂಕಿತರಾದರಾ ಪುರದೊಳು ಸಕಲಜನರು ॥ ೨ ॥

ತನುವಿಗಾಲಸ್ಯಂ ಘಟಿಸಿದುದ. । ತನುಮಥನಚಿಲ್ಲಿಂಗದೊಳು ತಾ । ತನು ಬೆರೆವ ಸಮಯಮದು ಸಂಧಿಸಿತೆಂದು ಮನಗಂಡು ॥ ತನುಜೆಯೊತನ ವ್ರತವು ಕೆಡದಂ । ತನುಸರಿಸಲಾದಳ್ವಿಚಾರಿಸು । ತನುವಿನಿಂ ಪೂಜಾಪ್ರಮಥ ಸಂತೃಪ್ತಿಪೂರ್ವಕವೆ ॥ ೩ ॥

ಘನಕೆ ಘನಸಾದೀ ಮಹಾತ್ಮನ । ಮನಕೆ ಪರಮೋತ್ಸಾಹಮಾದುದು । ಜನಕೆ ಚಿಂತಾಜನಕಪರಿಣಾಮವದು ತೋರಿದುದು ॥ ದಿನಕೆ ದಿನಕೀಶ ಪ್ರಮಥರಾ । ಳ್ತನಕೆ ಸೊಬಗೇರಿದುದು ಶರಣಾ । ನನಕೆ ಶಿವಕಲೆ ಬೆಳೆದು ದಿವನೇಂ ಧನ್ಯನೋ ಜಗದೆ ॥ ೪ ॥



ಸೊಲ್ಲಾಪುರದ - ಶ್ರೀನಾಲವತ್ತ್ರವಾಡ -
ವೀರಯ್ಯನವರು - ಮಹಾಶರಣರು.

ಲಿಂಗೈಕ್ಯರಾದಾಗ ತೆಗೆದದ್ದು.

ಕಾಯಕವನೆಸಗದಲೆ ಪ್ರಮಥನಿ । ಕಾಯದಾಸೋಹವ ಬೆಳಸಿದುದ । ಕಾಯುತಂಮಿಗೆ ಪೊಗಳ್ದರೆಲ್ಲರ್ಬೆರಗುವಡೆದೊಲೆದು ॥ ಕಾಯಕಲಸಿಕೆಯಿರಲು ಮಮೃತ್ಯೈ । ಕಾಯನವೆನಿಪ್ಪರ್ಚನೆಯನೀ । ಕಾಯಜಾಂತಕಸಮನುಳಿಯ ಲಿಲ್ಲಂ ತ್ರಿಕಾಲದೊಳು ॥ ೫ ॥

ಒಂದು ದಿನಮುರುವತ್ತುಮೂರೇ । ಮಂದಿಪ್ರಮಥರು ಬೇಕಿವರಿಗಿಂ । ದೆಂದು ಶ್ರೀಶಿವಲಿಂಗದೇವರೆನಿಪ್ಪ ದೇಶಿಕಗೆ ॥ ವಂದಿಸಿ ಮಹಾಶರಣನಾಗ್ರಹ । ದಿಂದ ಬೇಡಲ್ಕಾ ದಯಾಳು ಮು । ದಂದಳೆದು ಕೂಡಿಸಿದನನಿತೈಗಳನು ಯತ್ನದಲಿ ॥ ೬ ॥

ಅನಿಬರಂ ಸಂಭ್ರಮದೆ ಸದ್ವಿಧಿ । ಗನುಸರಿಸಿ ಪೂಜಿಸಿ ಮಧುರಮೆನೆ । ದಿನಸುದಿನಸಿನ ಭಕ್ಷ್ಯಭೋಜ್ಯಗಳಿಂದ ಸಲೆ ತಣಿಸಿ ॥ ಮನವೊಲೆಯೆ ನರು ದಂಬುಲವನಿ । ತ್ತನುನಯದೆ ಪೊಡಮಟ್ಟು ತತ್ಪದ । ವನರುಹಾಶೀರ್ವಾದಮಂ ಪೊಂದಿದನು ಮರುದಿನದೆ ॥ ೭ ॥

ಶರಣರಿಗೆ ರುಜೆಯುಡಸಿರುವದಾಂ । ತೆರಳ್ವೆನವರೆಡೆಗಲ್ಲಿಗೆ ಭಿಷ । ಗ್ವರನೆನಿಪ್ಪಾ ಸಿದ್ಧಲಿಂಗಾರ್ಯನನು ಕಳಿಸೆಂದು ॥ ತ್ವರಿತಮೆನೆ ಬಂಡೆಪ್ಪ ನೆಂಬಾ । ಪುರದ ಪಿರಿಯಂ ಧನಿಕನೀ ಶಿವ । ಶರಣಸೇವಾಪ್ರೇಮಿ ತನ್ನನು— ಚರನನಟ್ಟಿದನು ॥ ೮ ॥

ಶರಣಗೃಹಕಂ ಬರಲು ಪೇಳ್ದರು । ಭರದೆ ಬಂಡೆಪ್ಪಣ್ಣನವರೆಂ । ದೊರೆದ ಚಾರನ ಮಾತನಾಲಿಸಿ ವೈದ್ಯನಾಕ್ಷಣವೆ ॥ ಅರಿದು ಕೈಯೊಳಗಣ ಕೆಲಸಮಂ । ತೊರೆದು ಮಹಿಮನ ಮನೆಗೆ ಬರಲಾ । ಪಿರಿಯಧನಿಕಂ ಬಂದು ಕುಳ್ಳಿರ್ದಂ ಮೊದಲೆ ತಾನು ॥ ೯ ॥

ಸೈತಿರದೆ ಬಂಡೆಪ್ಪನೊಡನೊ । ಳ್ಪಾತನಾಡುತ ಕುಳಿತಿರುವ ಪರಿ । ಪೂತಶರಣಂಗೆರಗಿ ವೈದ್ಯಂ ಕುಳಿತುಕೊಂಡಪ್ಪಾ ॥ ಸೋತಿಹುದು ನಿಮ್ಮಯ ಪ್ರಕೃತಿಯಿದ । ಕಾತುರದೊಳೌಷಧವ ಕೊಳ್ಳಿರಿ । ಸಾತಿಶಯಮೆನೆ ಕೊಡುವೆ ನಾನೆಂದಾಗ್ರಹದಿನುಸುರೆ ॥ ೧೦ ॥

ಶರಣನದನಾಲಿಸಿ ನಿರೀಕ್ಷಿಸಿ । ಪಿರಿಯಬಂಡೆಪ್ಪಣ್ಣನಂ ಕೈ । ಬೆರಳಿನಿಂ ತೋರಿಸುತಿವರ್ನಿಮ್ಮಂ ಕರೆಯಲಟ್ಟಿ ॥ ಪಿರಿಯರಪ್ಪಣೆಯಾದುದಿಂದೆಂ । ದರಿದು ಕೈಯೊಳಗಣ ಕೆಲಸಮಂ ತೊರೆದು ಭರದಿಂ ಬಂದಿರಲ್ಲವೆ ನೀವೆನ ಲ್ಕೇಳಿ ॥ ೧೧ ॥

ನಡೆದ ಸಂಗತಿಯಂ ಮಹಾತ್ಮಂ । ಬಿಡದಲಂತರ್ದೃಷ್ಟಿಯಿಂ ಕಂ । ಡೊಡನರಿದನೀತಂ ತ್ರಿಕಾಲಜ್ಞಾನಿಯಿಹನೆಂದು ॥ ಸಡಗರದೆ ತಲೆದೂಗಿ ಲೀಲಾ । ಜಡಧಿ ನೀನೊರೆದುದು ಸಹಜಮೆಂ । ದಡಿಗೆರಗಿದಂ ತದ್ಭಿಷಗ್ವರ ನಚ್ಚರಿಯನಾಂತು ॥ ೧೨ ॥

ಪುರದ ಪಿರಿಯಂ ಕರೆದನೆಂದೊಡೆ । ಭರದೆ ಕೆಲಸವ ಬಿಟ್ಟು ಬಂದಿರಿ । ಪರತರಬ್ರಹ್ಮಾಂಡನಾಯಕನಾದ ಪರಶಿವನು ॥ ಕರೆದಿರಲಿವರ್ನಿಲ್ಲುವೆಂತೊರೆ । ಯಿರಿ ಭಿಷಗ್ವರರೇ ಎನುತ್ತಘು । ಹರಶರಣಪುಂಗವನು ನುಡಿಯಲ್ಕೇಳಿ ಧೃತಿಗೆಟ್ಟು ॥ ೧೩ ॥

ಶರಣವರ್ಯರ ಲೋಕಯಾತ್ರಾ । ಪರಿಸಮಾಪ್ತಿಯ ಕಾಲಮೊದಗಿದು । ದರರೆ ಕಣ್ಮರೆಯಪ್ಪರಾವಜ್ಞಾನಪಾಮರರು ॥ ಇರುವೆಡೆಯೊಳುದ್ಧಾರಮಾಗುವ । ಪರಿಯುನಾನದೆ ಕೆಟ್ಟೆವಕಟೆಂ । ದೊರಲಿದರು ತದ್ವೈದ್ಯಧನಿಕರ್ಮನದೆ ನೆನೆನೆನೆದು ॥ ೧೪ ॥

ಬಳಿಕಮರುದಿನಮಂಗಜಾಡ್ಯಂ । ಬೆಳೆದುದಾ ಶಿವಲಿಂಗದೇವರು । ಕಳವಳಿಸಿ ನಿಮ್ಮಿಚ್ಛೆಯೇನಿಹುದೆಂದು ಬೆಸಗೊಳಲು ॥ ಸಲೆ ಸಮಾಧಿಕ್ರಿಯೆಗ ಳಾಗಮ । ಗಳ ಪವಣದಂತಾಗಲೆಂಬಾ । ಬಲುಬಯಕೆಯೊಂದಲ್ಲದಿನ್ನೇ ನೆಂದನೀ ಘನನು ॥ ೧೫ ॥

ಅದರ ಚಿಂತೆಯದೇಕೆ ನಿರ್ಜಿತ । ಮದನನನುಕೂಲಿಸುವನಾಗಮ । ವಿದುಗಳಿಹರೀ ಪೊಳಲೊಳೆಂದಾ ದೇಶಿಕೋತ್ತಮನು ॥ ಮೃದುವಚನದಿಂ ಪೇಳ್ದು ಪೋದಂ । ಪದುಳಮೆನಲನಿತರೊಳೆ ಬಂದಂ । ಪದೆದು ಬಬಲೇಶ್ವರದ ಗೌಡಂ ಶರಣದರ್ಶನಕೆ ॥ ೧೬ ॥

ಶ್ರೀವಿರಾಟ್ಪುರಯತಿಪರೀಗಳ । ದಾವ ತಾಣದೊಳಿಹರೊ ಶೀಘ್ರದೊ । ಳಾವಪರಿಯಿಂದಿಲ್ಲಿಗವರೈತಂದಪರೊ ಎನುತ ॥ ಭಾವದೊಳು ನೆನೆದಾಡಿದನು ಶರ । ಣಾವತಂಸಂ ಗೌಡನೆದುರೊಳ । ತೀವಸರ್ವಸಹಾಯಕಾಗಿ ವಿಚಾರ ಪೂರ್ವಕವೆ ॥ ೧೭ ॥

ಆ ಮಹಾಸ್ವಾಮಿಗಳನಿಲ್ಲಿಗೆ । ಪ್ರೇಮದಿಂ ಬರೆಮಾಳ್ಪ ಕಾರ್ಯವ । ನೇಮಿಸಿದೊಡಾಂ ನೆಗಳ್ವೆನೆಂದಾ ಗೌಡನೊಲೆದುಸುರೆ ॥ ಕ್ಷೇಮವೆನೆ ನೀವಂತು ಕೈದೊಡೆ । ಸೋಮಧರನೊಪ್ಪುವನು ನಿಮಗೆಂ । ದೀ ಮಹಾತ್ಮಂ ನುಡಿಯೆ ಗೌಡಂ ಕೇಳ್ದು ತತ್ಕ್ಷಣದೆ ॥ ೧೮ ॥

ತಂತಿಯಿಂ ಶಿವಯೋಗಮಂದಿರ । ಕಂತರಿಸದರುಪಲು ವಿರಾಟ್ಪುರ । ದಂತಕಾಂತಕಯೋಗಿಪುಂಗವನಾಕ್ಷಣದೊಳೇಳ್ದು ॥ ಶಾಂತಿಮಯಶಿವಯೋಗ ಸಾಧಕ । ಸಂತತಿಯನೊಡಗೊಂಡು ನೆರೆ ವಿ । ಶ್ರಾಂತಿಯಿಲ್ಲದೆ ಬಂದು ಕಂಡನು ವೀರಶರಣನನು ॥ ೧೯ ॥

ತಾನು ಬಯಸಿದ ಮೂರ್ತಿಯೈತರೆ । ಸಾನುರಾಗದಿನೆರಗಿ ಪರಮತಿ । ವಾನುಭವಗೋಷ್ಠಿಗಳನಾಡುತ ಕುಳಿತರಳ್ತಿಯಲಿ ॥ ಮೌನದಿಂದೊಳ ಗೋರ್ವಳೀ ನಿಯು । ಮಾನುಸಾರಂ ಕುಳಿತು ರುದ್ರಾಂ । ಬಾನಿಪುಣೆ ಕೇಳುತ್ತ ಲಿರ್ದಳ್ತದ್ವಚನಗಳನು ॥ ೨೦ ॥

ಮನದೊಳೇನನೊ ಬಗೆದು ಶರಣಂ । ತನುಜೆಯಂ ಕುರಿತವ್ವ ಅವ್ವಾ । ಎನುತ ದನಿಗೈಯಲ್ಪಿತನ ಬಳಿಯಲ್ಲಿ ಕುಳ್ಳಿರ್ದ ॥ ಘನವಿರಾಟ್ಪುರದಭವ ಯೋಗೀ । ಶನ ಭಯದಿನಯ್ಯನ ನುಡಿಗೆ ತ । ತ್ತನಯೆ ಪಡಿನುಡಿಗುಡದ ಲಿರ್ದಳ್ಕೇಳಿ ಯೋಚಿಸುತ ॥ ೨೧ ॥

ಶರಣವರ್ಯರ್ಕರೆವ ಮಾತಂ । ಶರಣೆಯರ ಕಿವಿಕೇಳಲಿಲ್ಲೆಂ । ದರಿದು ತಚ್ಚರಮೂರ್ತಿಯವ್ವಾ ಅಪ್ಪನವರೇಕೋ ॥ ಕರೆವುತಿರ್ಪರು ನೋಡಿ ರೆಂದೆ । ಚ್ಚರಿಸಲೊಡನೇಕ್ರೆಪ ಎನುತ್ತಾ । ಶರಣೆ ಬಂದಾ ಯತಿಗೆ ವಂದಿಸಿ ಭಕ್ತಿಯಿಂ ನಿಲಲು ॥ ೨೨ ॥

ತಾಯೆಯೆಂದಿವರಂ ತಿಳಿವಿರೋ । ಮಾಯೆಯೆಂದರಿಯುವಿರೊ ಅಪ್ಪು । ಮಾಯೆಯಿವರಲ್ಲಂ ಭುವನದೊಳು ತಾಯಿಯೇ ನಿಜವು ॥ ತಾಯಿಯೆಂದಖಿಲ ಪ್ರಮಥರುರೆ । ಕಾಯಬೇಕೆಂದೀ ಶರಣನಂ । ದಾ ಯತೀಂದ್ರಗೆ ಬಿನ್ನಯಿಸಿ ದಂ ಮಗಳ ಸಲುವಾಗಿ ॥ ೨೩ ॥

ನಿಮ್ಮ ಮನವೊಪ್ಪಿದ ಮಹಿಮಳಿಮ । ಗಮ್ಮನಹುದೆಂದೊಲಿದು ಭಾವಿಸೆ । ವಮ್ಮನಂ ಕೃಪೆಯಿಂದ ಪಾಲಿಸದಿಹ ಪ್ರಮಥರುಂಟೇ ॥ ಅಮ್ಮ ಮಕ್ಕಳೊ ಳೆಂದುವೊಂದಿನಿ । ಸಿಮ್ಮನಂ ತಲೆದೋರದೆಂದತಿ । ಸಮ್ಮತದೊಳಾಶೀರ್ವದಿಸಿ ದಂ ಶರಣಗಾ ಯತಿಯು ॥ ೨೪ ॥

ಸಮನಿಸಿದುದೀ ಶರಣರಂತಿವ । ಸಮಯವೀ ಚಿನ್ಮಯರಿನಾವೀ । ಕ್ಷಮೆಯೊಳುದ್ಧೃತರಾಗಲಿಲ್ಲಿನ್ನಾದರಿವರಿಂದ ॥ ವಿಮಲರಾಗಲುಬೇಕೆನುತ ಸಂ । ಭ್ರಮಿಸಿ ತನ್ನಾಗರಿಕರೆಲ್ಲರು । ಸುಮನದಿಂ ನಿಂದಿರ್ದರೀ ಶರಣಾಂಗಣದೊ ಳಂದು ॥ ೨೫ ॥

ಇದನರಿದು ಸತ್ಪುರುಷನೋರ್ವಂ । ಪದೆದು ಶರಣನಿಗರುಹಲೀ ನಗ । ರದೊಳು ಮೂವತ್ತಾರುವರ್ಷಂ ಬಾಳ್ದರಿವರಿಂದ ॥ ಸದಮಲತೆಯುಂ ತಾವ್ಪ ಡೆಯಲಾ । ಗದೆ ಪಡೆವ ಮನವಿಂದೆ ಪುಟ್ಟಿತೆ । ತುದಿಯೊಳಿವರೇಂ ಮಾಳ್ಪ ರೆಂದಾಡಿದನು ಚಿದ್ಘನನು ॥ ೨೬ ॥

ಆದೊಡವರಿಗೆ ದರ್ಶನಾಶೀ । ರ್ವಾದಮಂ ಕೊಡಬೇಕೆನುತ್ತಾ । ಮೋದದಿಂ ತದ್ಯತಿಪನಪ್ಪಣೆಗೊಡಲು ಬಾಗಿಲಿಗೆ ॥ ಈ ದಯಾನಿಧಿ ಬಂದು ತನ್ನಯು । ಪಾದದರ್ಶನವಿತ್ತು ನಿರುತಂ । ವೇದಘೋಟಂ ಪೊರೆಗೆ ನಿಮ್ಮ ನೆನುತ್ತ ನೆರೆ ಹರಸಿ ॥ ೨೭ ॥

ವಿತತಮಹಿಮಾಳಿಯುನವಂದಿರು । ನುತಿಸೆ ಪುಳಕಾಂಕುರಮೆಸೆದು ಸ । ಮ್ಮತಿಸೆ ಭಕ್ತಿರಸಾರ್ದ್ರತನುವಿಂ ಪಾದಕಾನತಿಸೆ ॥ ಅತಿಶಯಾಶ್ರುಗಳುಗುವ ಶೋಕಾಂ । ಕಿತನಯುನದಿಂ ನೋಡೆ ಭುವನೋ । ನ್ನತಚರಿತನೊಳಪೊಕ್ಕನೀ ಶರಣಂ ಮಹೀಶಿವನು ॥ ೨೮ ॥

ಇನ್ನಿವರಿಗವಕಾಶವಿಲ್ಲಂ । ಮುನ್ನೆಗಳ್ವ ನಿಮ್ಮೆಲ್ಲ ಕಾರ್ಯವು । ಸನ್ನುತಾಗಮವಿಧಿವಿಡಿದು ಪೂರಯಿಸಬೇಕೆಂದು ॥ ತನ್ನ ಸಂಗಡಮಿಹ ವಿರತಿ ಸಂ । ಪನ್ನನಿಗೆ ಬಿನ್ನಯಿಸಲೊಳಿತೆಂ । ದುನ್ನತಕೃಪಾಯತ್ನವಿಶ್ವಾಸಂಗಳಿಂದ ವನು ॥ ೨೯ ॥

ತಳುವದೀಯಾಶ್ರಮುವನೆಲ್ಲವ । ನಲರೆ ಸಾರಣಿಗೈಯಬೇಕೌ । ಬೆಳಗಬೇಕೌ ಸಕಲಶಿವಪೂಜೋಪಕರಣವನು ॥ ತೊಳೆಯಬೇಕೌ ತಾಯೆ ವಸ್ತ್ರಂ । ಗಳನೆನುತ ಶ್ರೀಮದ್ವಿರಾಟ್ಪುರ । ದಲಘುಶಿವಯೋಗೀಂದ್ರನೊರೆಯ ಲ್ಕೇಳಿ ರುದ್ರಾಂಬೆ ॥ ೩೦ ॥

ನಿಲಯಮಂ ವಸ್ತ್ರೋಪಕರಣಂ । ಗಳನು ಪೋದಿರುಳಿನೊಳೆ ಶುಚಿ ಯೆನೆ । ಬೊಳೆದು ತೊಳೆದಿಹರಿವ*ರು ಮೊದಲೇ ತಿಳಿದೆನುತ್ತೊರೆಯೆ ॥ ಒಲೆದು ತಚ್ಛರಪುಂಗವಂ ಮೇ । ಋಳಿದಖಿಲಶಿವಯೋಗಸಾಧಕ । ಕುಲವೊಡನೆ ಮಿಂದೀ ಶರಣನಂ ಮಿನಿಸಿ ಮುಡಿಯಿಂದ ॥ ೩೧ ॥

ಲಿಂಗಪೂಜೆಯನೆಸಗಿ ಮಾಡಿಸಿ । ತುಂಗಮನುವಂ ಜಪಿಸುತಿರಲೀ । ಮಂಗಲಾತ್ಮಕಶರಣನಾ ಶಿವಯೋಗಿಯಂ ಕುರಿತು ॥ ಕಂಗೊಳಿಪ ನಿಮ್ಮಿಂದಿ*ವರಿ ಗಂ । ಪಿಂಗದಂಘ್ರಿಜಲಂ ಪ್ರಸಾದಂ । ಸಾಂಗಮೆನೆ ನೆರೆ ದೊರೆಯಬೇಕೆಂದರ್ಥಿ ಸಲ್ಕೊಡನೆ ॥ ೩೨ ॥

ಪಿಂದದಾರಿಗುಮೊಯದಾ ಯತಿ । ಪಂ ದಯಾರಸದಿಂದೊಡಂಬ । ಟ್ಟಂದನಿರ್ವಾಹಮೆನೆ ಕೊಟ್ಟನು ಶರಣಗವುಗಳನು ॥ ಚೆಂದದಿಂ ಸೇವಿಸಿ ಗಣಾಧಿಪ । ವೃಂದತೃಪ್ತಿಯನೆಸಗಿ ಶಿವಶಿವ । ಎಂದು ಶಿವಲಿಂಗೈಕ್ಯನಾದನು ಚರರುಘೇಯೆನಲು ॥ ೩೩ ॥

ಒಂದುಸಾವಿರದೆಂಟುನೂರರ । ಮುಂದೆ ನಾಲ್ವತ್ತೊಂದನೆಯ ಶಕ । ಕೊಂದಿದಾ ಸಿದ್ಧಾರ್ಥಿವತ್ಸರಮಾಘಕೃಷ್ಣದೊಳು ॥ ಬಂದ ಪಾಡ್ಯದೆ ಸುಗುರು ವಾರದೊ । ಳಂದಮೆನೆ ಹನ್ನೊಂದುಗಳಿಗೆಯು । ಸಂದ ಸಮಯದೊಳಿವನಡಗಿ ದನು ಪಗಲುಲಿಂಗದೊಳು ॥ ೩೪ ॥

ಶಿವನು ಭಿಕ್ಷುಕಲೀಲೆಯೊಳು ದಣಿ । ದವತರಿಸಿ ಬಂದಿಲ್ಲಿ ಕುಳಿತನೊ। ಪ್ರವಿಮಲಶ್ರೀಚೆನ್ನಬಸವನು ಬೋಧಿಸಲು ಕುಳಿತು ॥ ತವೆ ಮೆರೆವನೋ ಎಂಬತೆರದಿಂ । ದಿವನನುರೆ ಕುಳ್ಳಿರಿಸಿದರವ । ರ್ತವಕದಿಂ ಪದವಾರಿಯಿಂ ಮೈದೊಳೆದಲಂಕರಿಸಿ ॥ ೩೫ ॥

ಅಂಗಣದೊಳಖಿಲೇಶಭಕ್ತರು । ಪೊಂಗಿ ಭಜನೆಯನೆಸಗುತಿರ್ದರು । ಮಂಗಲಾರತಿಯೆತ್ತುತಿರ್ದರು ಗೀತಮಂ ಪಾಡಿ ॥ ಭಂಗಿತಾಂಗಜ ಲೀಲೆಯನು ಪದೆ । ದಂಗಯಿಸಿ ಪೊಗಳುತ್ತಲಿರ್ದರು । ಜಂಗಮೈಕಪ್ರಾಣಿಶರಣನ ಕೊನೆಯ ವೇಳೆಯೊಳು ॥ ೩೬ ॥

ದೂರದಿಂದೈತರುತಲಿರ್ದರು । ವೀರಶೈವಾದ್ಯಖಿಲಸುಮತಾ । ಚಾರಪರ ಸೀಮಂತಿನೀಪುರುಷರ್ಕಳೊಗ್ಗಾಗಿ ॥ ಧೀರರುಂ ಗಾಯಕರು ಕೀರ್ತನ । ಕಾರರುಂ ವ್ಯಾಖ್ಯಾತರುಂ ಕೈ । ಗಾರಿಕೆಯ ಜಾಣರ್ಶರಣನಂತಿಮಸಮಯದಲ್ಲಿ ॥ ೩೭ ॥

ಕೂಡಿದರ್ಗುರುಚರವರೇಣ್ಯರು । ನಾಡೆ ಸಾಧು ವಿಚಾರಶೀಲರು । ನಾಡಗೌಡರು ದೇಶಮುಖರಧಿಕಾಧಿಕಾರಿಗಳು ॥ ನೋಡೆ ವ್ಯಾಪಾರಿಗಳು ಶ್ರೀಯುತ । ರಾಡಲೇನಾಪತ್ತ್ರನಂ ಸೂ । ಸಾಡುವಂದದೊಳೀತನಂತ್ಯಾವಸ್ಥೆಯೊಳು ಭರದೆ ॥ ೩೮ ॥

ಕೆಲರು ಕಾಯ್ಕುಪ್ಪುರಗಳಂ ಮೇ । ಣ್ಕೆಲರು ಪಣ್ಪೂಮಾಲೆಗಳನುಂ । ಕೆಲರು ಧೂಪದ ಗಟ್ಟಿ ಗುಗ್ಗುಲವರದಶಾಂಗಗಳ ॥ ಕೆಲರು ಪರಿಮಳವರ್ತಿಯುಂ ಕೆಲ । ಕೆಲಬರರ್ಘವಿಭೂತಿಘುಟಕಾ । ವಳಿಗಳಂ ತರುತಿರ್ದರೀತನ ವಿಜಯಕಾಲದೊಳು ॥ ೩೯ ॥

ಪುರದ ಸರ್ವಪ್ರಮುಖಭಕ್ತರು । ನೆರೆದು ಪರಮೋತ್ಸಾಹದಿಂದೀ । ಶರಣನ ಸಮಾಧಿಯನದಾವೆಡೆಗೆಸಗಬೇಕೆಂದು ॥ ನೆರೆ ವಿಚಾರಿಸುವೆಡೆಯೊಳವರೊಳು । ನಿರುಕಿಸಿದ ಕೆಲಸಭ್ಯಜನರಾ । ತುರದೊಳಾಲೋಚಿಸಿ ನಿಜಸ್ಮೃತಿಪಥಕೆ ತಂದೊಡನೆ ॥ ೪೦ ॥

ಇಂದಿಗೆಂಟೊಂಬತ್ತುದಿನಗಳ । ಹಿಂದೆ ಶ್ರೀಶಿವಶರಣಪುಂಗವ । ನಂದದಿಂದಂ ಸಿದ್ಧರಾಮೇಶ್ವರನ ದೇಗುಲದೆ ॥ ಒಂದುಕಡೆಗೈದಾರು ದಿನವೈ । ತಂದು ಕುಳ್ಳಿರುತಿರ್ದನಲ್ಲಿಯೆ । ಸುಂದರಸಮಾಧಿಯನೆಸಗಬೇಕೆಂದು ಲಿದರಂದು ॥ ೪೧ ॥

ಎಲ್ಲರದು ಬಹುಯೋಗ್ಯಮಹುದೆಂ । ದಲ್ಲಿಯೇ ದಿವ್ಯಾಗಮೋಕ್ತಂ । ಸಲ್ಲಲಿತವಿಧಿಯಿಂ ಪ್ರಮಾಣಕ್ಕನುಸರಿಸಿ ನೋಡಿ ॥ ಬಲ್ಲಗುರುಚರರನು ಮತಿಯನಾಂ । ತೊಳ್ಳಿತೆನೆ ರಚಿಸಿದರು ತರುಸುಮ । ವಲ್ಲಿಗಳ ಮಧ್ಯದೊಳ ಲಂಕರಿಸಿದ ಸಮಾಧಿಯನು ॥ ೪೨ ॥

ಬಳಿಕ ಪುಷ್ಪಕದೊಳು ಶರಣನಂ । ನೆಲೆಗೊಳಿಸಿ ಪುಷ್ಪಾಂಜಲಿಗೆದ । ರ್ದಲಘುವಿಜಯಧ್ವಾನಪೂರ್ವಕಮಾಗಿ ನೆರೆದವರು ॥ ಬಳಸಿ ಕೈಪರೆಗುಟ್ಟೆ ಭಕ್ತರ । ಪುಳಕಮಂಗದೊಳೇಳೆ ಧ್ವಜಮಂ । ಡಲೆಯೆ ಪರಿಶುದ್ಧರ್ಕಳೆತ್ತಿದ ರುತ್ಸವಂಮಿೂರೆ ॥ ೪೩ ॥

ಮಿಂದುದಣಿಬವನುಟ್ಟು ಪರಮಾ । ನಂದಕರಭಸಿತತ್ರಿಪುಂಡ್ರವ । ನಂದ ಮೆನೆ ಫಾಲದೊಳು ಧರಿಸಿ ಶಿವಾಕ್ಷಮಾಲೆಯನು ॥ ಇಂದುಧರಲಿಂಗವನು ಕೊರ ಳೊಳು । ಕುಂದದಾಂತು ಮಹೇಶನಿಂದ್ಯೆ । ತಂದ ಗಣವರರಂತೆಸೆದರೀತನನು ಪೊತ್ತವರು ॥ ೪೪ ॥

ಹಾರುತಿಹ ಚಾಮರಗಳುಂ ಮೇ । ಲೇರಿರುವ ನಂದಿಧ್ವಜಂ ಬಿಸಿ । ಲಾರಿಸುವ ಛತ್ರಗಳು ಮೊಳಗುವ ಭೇರಿ ಢಕ್ಕೆಗಳು ॥ ಚೀರುತಿಹ ಕಾಳೆಗಳು ಸೊಂಪಂ । ಬೀರುವ ಸುನಾದಗಳು ಫಲಮಂ । ತೂರುತಿಹ ಭಕ್ತರ್ವಿಜೃಂಭಿಸೆ ನಡೆದುದುತ್ಸವವು ॥ ೪೫ ॥

ಕಲಶಮಂ ಪಿಡಿದೆತ್ತಿ ಬೆಳಗುವ । ತೊಳಪ ಕುಂಭವ ಪೊತ್ತು ಸೊಬಗಿಂ । ಚಳೆಗೊಡುವ ಕೈಮುಗಿದು ವಂದಿಪ ಕಾಣ್ಕೆಯಂ ಕೊಡುವ ॥ ಅಲರಮಾಲೆಯ ನರ್ಸಿಸುವ ಪುರ । ಲಲನೆಯರ್ತತ್ಪಣ್ಯವೀಧೀ । ತಳದೊಳೊಪ್ಪಿದರಲ್ಲಿಗಲ್ಲಿಗೆ ಪುಷ್ಪಕದ ಮುಂದೆ ॥ ೪೬ ॥

ಶರಣವಿಜಯಮಹೋತ್ಸವಮದೀ । ಪರಿಯೊಳುರುತರಸಿದ್ಧರಾಮೇ । ಶ್ವರನ ದೇಗುಲಕತಿವಿಜೃಂಭಣೆಯಿಂ ತಲುಪಲಾಗ ॥ ವರವಿರಾಟ್ಸುರಚರವರಂ ಮುಂ । ಬರಿದು ಶಾಸ್ತ್ರೋಕ್ತಪ್ರಕಾರಂ । ಶರಣನತುಲಸಮಾಧಿಕಾರ್ಯವ ಮಾಡಿಸಿದನೊಲೆದು ॥ ೪೭ ॥

ವರಗಣಾರಾಧನೆಯನಾಗಿಸಿ । ವಿರತಿ ಪೂಜಾಸಕ್ತಿ ಜಂಗಮ । ಚರಣ ಭಕ್ತಿ ಶಮಾದಿಗುಣತತಿ ಸದ್ವಿಚಾರೋಕ್ತಿ ॥ ಪರತರಶಿವಾನುಭವಶಾಸ್ತ್ರೀ । ತ್ಪರಿಣತಾಸಂಪದಗಳಿಂದೀ । ಶರಣರವೊಲಾಚರಿಪಳಿಂದಾ ಪುರದೆ ರುದ್ರಾಂಬೆ ॥ ೪೮ ॥

ಸನ್ನುತನಿರಾಭಾರಿದೇಶಿಕ । ನೆನ್ನಿಸಿದ ಗುರುಸಿದ್ಧಬಸವನ । ಪನ್ನಳಿನ ಕಾರುಣ್ಯಬಲಮಂ ಭಕ್ತಿಯಿಂ ಪಡೆದು ॥ ಚೆನ್ನಕವಿವರ್ಯಂ ಬರೆದ ಮಹಿ । ಮೋನ್ನತಾಭವಶರಣಕುಲಸಂ । ಪನ್ನವೀರೇಶ್ವರಪುರಾಣದೆ ಮೂರನೆಯ ಕಾಂಡಂ ॥ ೪೯ ॥

ಈ ಮಹಾತ್ಮನಸಚ್ಚರಿತ್ರವ । ಪ್ರೇಮದಿಂ ಕೇಳ್ದೋದಿದವರಿಗೆ । ಭೂಮಿ ಧನ ಮಣಿ ಕನಕ ಸತಿ ಪುತ್ರಾದಿಸಂಪದವು ॥ ಸೋಮಧರಚಿದ್ವಿರತಿ ಭಕ್ತಿ । ಕ್ಷೇಮಕರಕೈವಲ್ಯಗಳು ನಿ । ಸ್ಸೀಮವೆನೆ ದೊರೆಗುಂ ನಿರಂತರಮಿಹಪರಂ ಗಳೊಳು ॥ ೫೦ ॥

ಕೆರೆಯಪದ್ಮಾಹ್ವಯರ ಹಂಪೆಯ । ಹರಿಹರಾಚಾರ್ಯರ ಷಡಕ್ಷರ । ವರಕವೀಂದ್ರರ ರಾಘವಾಂಕರ ಪದಜಲಜಗಳನು ॥ ಸ್ಮರಿಸಿ ವಿಘ್ನಂಗಳಿಗೆ ಬೆದರವೆ । ಸರಳವೆನೆ ಕನ್ನಡದೆ ಚೆನ್ನಂ । ಬರೆದ ಶರಣಚರಿತ್ರಮಿದು ಸಂಪೂರ್ಣಮಾಯ್ತೆಂದು ॥ ೫೧ ॥

ಶಾಲಿವಾಹನಶಕವರುಷದೊಳು । ಕೀಲಿಸಿದ ಪದಿನೆಂಟು ನೂರರ । ಮೇಲಣೈವತ್ತೆರಡಕೆಸೆವ ಪ್ರಮೋದವತ್ಸರದೆ ॥ ಪಾಲಗುಣದಾ ದ್ವಾದಶಿ ಯೊಳೀ । ಕಾಲಹರಶರಣನ ಪುರಾಣಂ । ಲೋಲವೆನೆ ಮುಗಿದುದು ಶುಭಾಂ ಶದೆ ಸೋಮವಾರದೊಳು ॥ ೫೨ ॥

ಚೆನ್ನನಂದದೆ ಶಿವಶರಣಲೀ । ಲೋನ್ನತಿಯನುರೆ ವಿರಚಿಸದೆ ಬಲು । ಬನ್ನಬಟ್ಟುತ್ತವರ ಕತೆಯಂ ಜಾಣ್ಮೆಯಿಂ ಬರೆದು ॥ ಮನ್ನಣೆಯ ಪೇರ್ಮೆಯನು ಪಡೆದಾ । ರನ್ನಹೊನ್ನರಿಗಿಂತ ಚೆನ್ನನೆ । ಚೆನ್ನಿಗನೆನುತ್ತಂ ಧರಣಿಯೊಳು ಪೇಳದವರಾರು ॥ ೫೩ ॥

ಎನಗೆ ಶ್ರೀವೀರೇಶನಂತಹ । ಜನಕನುಂ ಗುರುದೇವಿಯಂತಹ । ಜನನಿಯುಂ ರುದ್ರಾಂಬೆಯಂತಹ ಘನಸಹೋದರಿಯು ॥ ಅನುಪಮಕುಮಾರೇಶನಂತಹ । ವಿನುತಮತಿಯಿನ್ನೊಂದು ಜನ್ಮದೊ । ಳನುವಿನಿಂ ದೊರೆಗೆಂದು ಭಜಿಪೆನು ಬಸವರಾಜನನು ॥ ೫೪ ॥

ಗುರುಗಳ ಚರೇಂದ್ರರ ಮಹೇಶನ । ಶರಣರ ಮಹತ್ವಗಳನೊಲವಿಂ । ಬರೆಯಲೆನ್ನಯ ತನುಮನೋಮತಿಗಳ್ಗೆ ಶಕ್ತಿಯನು ॥ ಕರುಣದಿಂ ಕುಡುಗೆಂದು ಮದ್ಗುರು । ವರನೆನಿಪ ಶ್ರೀಸಿದ್ಧಬಸವನ । ಚರಣಕಮಲಂಗಳಿಗೆ ವಂದಿಸಿ ವಿರಮಿಸುವೆನಿಂದು ॥ ೫೫ ॥

ಮಂಗಲಂ ಭೂಮಾನನೀಯಾ । ಮಂಗಲಂ ನಿರ್ಧೂತಮಾಯಾ । ಮಂಗಲಂ ಮಲವನಧನಂಜಯ ಸುಕೃತಮಯಕಾಯಾ ॥ ಮಂಗಲಂ ಜಂಗಮಸಹಾಯಾ । ಮಂಗಲಂ ಬುಧವೃಂದಗೇಯಾ । ಮಂಗಲಂ ವೀರೇಶ ಚಿನ್ಮಯ ಮಹಿತಪದ ಸದಯಾ ॥ ೫೬ ॥

ಜಯ ಜಯ ಮಹಾದೇವ ಶಂಕರ । ಜಯ ಶುಭೋದಯ ನೀಲಕಂಧರ । ಜಯ ಕೃಪಾಕರ ಭಕ್ತವತ್ಸಲ ಮಂದರಾಗಾರಾ ॥ ಜಯ ಗಿರೀಶ್ವರ ಜಾಹ್ನವೀಧರ । ಜಯ ಜಿತಸ್ಮರ ರಾಜಶೇಖರ । ಜಯ ಸುಗುಣಮಣಿಹಾರ ಪುರಹರ ಭಕ್ತಮಂದಾರ ॥ ೫೭ ॥

ಅಂತು ಸಂಧಿ ೨೧ಕ್ಕೆ ಪದಗಳು ೧೩೧೭. ಶುಭಂ.

ಶ್ರೀ ಶ್ರೀ ಶ್ರೀ ಶ್ರೀ ಶ್ರೀ



# ಶುದ್ಧಾಶುದ್ಧ ಪತ್ರ.

| ಪುಟ. | ಪದ್ಯ | ಅಶುದ್ಧ. | ಶುದ್ಧ. |
|---|---|---|---|
| ೮ | ೧೪ | ದೊರಗು | ದೊರೆಗು |
| ೮ | ೧೬ | ತೆಸವ | ತೆಸೆವ |
| ೯ | ೨೧ | ಕೊಳು । | ಪೊರು । |
| ೧೩ | ೪೧ | ಜಘೆನೋದರಂ | ಜಘನೋದರಂ |
| ೨೦ | ೩ | ದೀಪಮಾಭಮೆಯೆಂದಿದಂ ನೆರೆ ನೋಡಿ | ದೀಪಮಾಭಮೆಯೆಂಬವೊಲಧಂ ನೋಡಿ |
| ೪೧ | ೪ | ನೆಗಳಿ ದ | ನೆಗಳಿಸಿದ |
| ೫೧ | ೧ | ವಾರಿಜಾನನ | ವಾರಿಜಾಸನ |
| ೭೧ | ೧೩ | ಕೊಡಿಕೊಂಡತಿ | ಕೂಡಿಕೊಂಡತಿ |
| ೭೨ | ೨೧ | ಬೇಕೆಂದಳಸಿ | ಬೇಕೆಂದೆಳಸಿ |
| ೮೫ | ೯೬ | ಮಾತಸಂಭವವು | ಮಾತಸಂಗತವು |
| ೮೭ | ೧೦೯ | ನಿಚ್ಚಳ | ವೆಗ್ಗಳ |
| ೮೯ | ೧೨೪ | ತೊರ್ದೊಡು । | ತೋರ್ದೊಡು । |
| ೧೦೧ | ೫೬ | ಸಮೂೂಹ್ವಯನ ॥ | ಸಮಾಹ್ವಯನ ॥ |
| ೧೧೪ | ೧೫ | ಮುರಿವುದೆನುತ್ತ | ಮಳಿವುದೆನುತ್ತ |
| ೧೨೫ | ೧೮ | ಖತಿಯನಾನುವ | ಚ್ಯುತಿಯನಾನುವ |
| ೧೫೦ | ೫೦ | ಬೇಡಿ | ಭರದೆ |
| ೧೫೧ | ೫೩ | ಜನರೆನ್ನ ॥ | ಜನರಿವರಂ ॥ |
| ೧೬೨ | ೫೩ | ಕುದಿವರೀತನ । | ಕುದಿವನೀತನ । |
| ೧೮೭ | ೬೩ | ಕ । ಣ್ಗಿಂಬಾದ | ಕಣ್ಗಿಂ । ಬಾದ |